# ಕನ್ನಡ ಪ್ರಾತಿನಿಧಿಕ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಸ್ವರೂಪ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಸಂದೀಪ್ ಡಿ.ಡಿ.

ಮಾರ್ಗದರ್ಶಕರು
ಡಾ. ಬಿ.ಎಂ. ಪುಟ್ಟಯ್ಯ
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬



# ಕನ್ನಡ ಪ್ರಾತಿನಿಧಿಕ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಸ್ವರೂಪ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧಕರು
ಸಂದೀಪ್ ಡಿ.ಡಿ.

ಮಾರ್ಗದರ್ಶಕರು
ಡಾ. ಬಿ.ಎಂ. ಪುಟ್ಟಯ್ಯ
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಸಂದೀಪ್ ಡಿ.ಡಿ.** ಇವರು, **"ಕನ್ನಡ ಪ್ರಾತಿನಿಧಿಕ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಸ್ವರೂಪ"** ಎಂಬ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಇದನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಮತ್ತು ಇದು ಬಿಡಿಯಾಗಿ ಮತ್ತು ಇಡಿಯಾಗಿ ಎಲ್ಲಿಯೂ ಮುದ್ರಣಗೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

1/3/16

**ಡಾ. ಬಿ.ಎಂ. ಪುಟ್ಟಯ್ಯ**
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ದಿನಾಂಕ : 01-03-2016
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

"ಕನ್ನಡ ಪ್ರಾತಿನಿಧಿಕ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಸ್ವರೂಪ" ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ. ಬಿ.ಎಂ. ಪುಟ್ಟಯ್ಯ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಮತ್ತು ಇದು ಬಿಡಿಯಾಗಿ ಮತ್ತು ಇಡಿಯಾಗಿ ಎಲ್ಲಿಯೂ ಮುದ್ರಣಗೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ಸಂದೀಪ್ ಡಿ.ಡಿ.** 1.3.2016
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ದಿನಾಂಕ : ~~27.2.2016~~ 01-03-2016
ಸ್ಥಳ : ವಿದ್ಯಾರಣ್ಯ

## ಪರಿವಿಡಿ

ಅಧ್ಯಾಯ : ಒಂದು

# ಪ್ರಸ್ತಾವನೆ

---

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ : ಒಂದು

# ಪ್ರಸ್ತಾವನೆ

ಕಾದಂಬರಿ ಸಾಹಿತ್ಯವು ಆಧುನಿಕ ಕನ್ನಡ ಸಾಹಿತ್ಯದ ಬಹಳ ಮುಖ್ಯವಾದ ಪ್ರಕಾರವಾಗಿದೆ. ಸಾಹಿತ್ಯ ಪರಂಪರೆಯಲ್ಲಿ ಈ ಪ್ರಕಾರಕ್ಕೆ ಬಹಳ ಮಹತ್ವವಿದೆ. ಪುರಾಣ, ಚರಿತ್ರೆ, ವಿವಿಧ ಸಮುದಾಯಗಳು, ವಿವಿಧ ಸಂಸ್ಕೃತಿಗಳು, ಸಮಾಜ ಹೀಗೆ ಅನೇಕ ಆಯಾಮಗಳ ವಸ್ತುವಿಷಯ ಗಳನ್ನು ಕಾದಂಬರಿಯ ಪ್ರಕಾರವು ಒಳಗೊಂಡಿದೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಹೋಲಿಸಿದರೆ ಈ ಕಾದಂಬರಿ ಪ್ರಕಾರದ ಭಿತ್ತಿಯು ಸಂಕೀರ್ಣವಾದುದು ಹಾಗೂ ಬಹಳ ವಿಶಾಲವಾದುದು. ಈ ವಿಶಾಲವಾದ ಭಿತ್ತಿಯಲ್ಲಿ ಹಲವು ವಿಷಯಗಳನ್ನು ನಿರೂಪಿಸುವ ಅವಕಾಶ ಈ ಪ್ರಕಾರಕ್ಕಿದೆ. ವಸ್ತು ಆಯ್ಕೆ ಮತ್ತು ಅದರ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಕನ್ನಡದ ಹಲವು ಪ್ರಾದೇಶಿಕ ಹಾಗೂ ಸಾಮಾಜಿಕ ಭಾಷಿಕ ಅಭಿವ್ಯಕ್ತಿಗಳನ್ನು ಕಾದಂಬರಿಗಳಲ್ಲಿ ಕಾಣುತ್ತೇವೆ. ಹೀಗೆ ಸಮಾಜದ ವಿವಿಧ ಸಂಸ್ಕೃತಿಗಳ, ಸಮುದಾಯಗಳ ಸೂಕ್ಷ್ಮಾತಿಸೂಕ್ಷ್ಮ ಚಲನಶೀಲ ವಾಸ್ತವಗಳನ್ನು ಕಾದಂಬರಿಯು ನಿರೂಪಿಸಿದೆ. ಹೀಗೆ ಕಾದಂಬರಿಗಳು ಹಲವು ಸಂಸ್ಕೃತಿಗಳ ವಿಭಿನ್ನ ಸ್ತರಗಳನ್ನು ಅನಾವರಣಗೊಳಿವೆ.

ಕನ್ನಡ ಕಾದಂಬರಿ ಸಾಹಿತ್ಯಕ್ಕೆ ಸುಮಾರು ಒಂದು ಶತಮಾನದ ಇತಿಹಾಸವಿದೆ. ಸಂಖ್ಯೆಯ ದೃಷ್ಟಿಯಿಂದ ಅಪಾರ ಪ್ರಮಾಣದ ಕಾದಂಬರಿಗಳು ಬಂದಿವೆ. ನಾಡಿನ ವಿವಿಧ ಪ್ರದೇಶಗಳ, ವಿವಿಧ ಸಮುದಾಯಗಳ, ವಿವಿಧ ವಯೋಮಾನದ ಬರಹಗಾರರು ಕಾದಂಬರಿಗಳನ್ನು ರಚಿಸಿದ್ದಾರೆ. ಈಗ ಆ ವಸ್ತುಲೋಕವು ಬಹಳ ವಿಸ್ತಾರವಾಗಿದೆ, ಜೊತೆಗೆ ಅಷ್ಟೇ ಸೂಕ್ಷ್ಮವಾಗಿದೆ. ಕಾದಂಬರಿಗಳ ನಿರೂಪಣೆ ಹಾಗೂ ಸಂಭಾಷಣೆಗಳ ಭಾಷೆಯಲ್ಲಿಯೂ ಸಾಕಷ್ಟು ಪ್ರಯೋಗಗಳು ನಡೆದಿವೆ, ನಡೆಯುತ್ತಿವೆ.

ಕನ್ನಡ ಕಾದಂಬರಿಗಳು ಅಂದಿನಿಂದ ಇಂದಿನವರೆಗೆ ಸಮಾಜದ ಬಹಳ ಮುಖ್ಯವಾದ ಸಮಸ್ಯೆಗಳನ್ನು ಎತ್ತಿವೆ ಹಾಗೂ ಅವುಗಳನ್ನು ನಿರೂಪಿಸಿವೆ. ಬದಲಾಗುತ್ತಿರುವ ಗ್ರಾಮೀಣ

ಸಮಾಜ, ವಸಾಹತುಶಾಹಿಯ ಪ್ರವೇಶ, ಆಧುನಿಕತೆಯ ಪ್ರವೇಶ, ವ್ಯಾಪಾರ ಹಾಗೂ ವಾಣಿಜ್ಯ ಚಟುವಟಿಕೆಗಳು, ರಾಷ್ಟ್ರೀಯತೆ, ಸಂಸ್ಕೃತಿ, ಮಹಿಳಾ ಪ್ರಶ್ನೆಗಳು, ಕಾರ್ಮಿಕರ ಪ್ರಶ್ನೆಗಳು, ದಲಿತರ ಪ್ರಶ್ನೆಗಳು, ಜಾಗತೀಕರಣದ ಪರಿಣಾಮಗಳು, ತಲೆಮಾರುಗಳ ನಡುವಿನ ಸಂಬಂಧಗಳ ಪರಿಣಾಮಗಳು, ಕೌಟುಂಬಿಕ ವಿಘಟನೆ, ಭೂಮಿಯ ಪ್ರಶ್ನೆ ಇವೇ ಮುಂತಾದ ಹಲವು ಸಮಸ್ಯೆಗಳನ್ನು ಕಾದಂಬರಿಗಳು ತಮ್ಮ ಕೇಂದ್ರಭಿತ್ತಿಯಲ್ಲಿ ಚರ್ಚಿಸಿವೆ. ಕನ್ನಡ ಕಾದಂಬರಿಗಳ ವಸ್ತುಲೋಕ ಹಾಗೂ ಅಭಿವ್ಯಕ್ತಿ ವಿನ್ಯಾಸವು ಸಂಕೀರ್ಣವಾಗಿದೆ; ಬಹುಮುಖ ಆಯಾಮಗಳಿಂದ ಕೂಡಿದೆ. ಹಾಗಾಗಿ ಈ ಆಯಾಮಗಳ ಭಿನ್ನ ನೆಲೆಗಳನ್ನು ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಕನ್ನಡ ಕಾದಂಬರಿಗಳ ಬಗ್ಗೆ ಈಗಾಗಲೇ ಸಾಕಷ್ಟು ಅಧ್ಯಯನಗಳು ನಡೆದಿವೆ, ನಡೆಯುತ್ತಿವೆ. ಕಾದಂಬರಿಗಳ ಹುಟ್ಟು, ಬೆಳವಣಿಗೆ, ಅದರ ಪ್ರಭಾವ, ಪ್ರೇರಣೆ, ಕಾದಂಬರಿಗಳ ವಸ್ತುವಿನ್ಯಾಸ, ಕಾದಂಬರಿಗಳ ಆಶಯ, ಕಾದಂಬರಿಕಾರರ ಆಶಯ ಮುಂತಾದ ಆಯಾಮಗಳಲ್ಲಿ ಅಧ್ಯಯನಗಳು ನಡೆದಿವೆ. ಇವು ಔಪಚಾರಿಕ ಹಾಗೂ ಅನೌಪಚಾರಿಕ ಎರಡೂ ನೆಲೆಗಳಲ್ಲಿ ನಡೆದಿವೆ. ಬೇರೆ ಬೇರೆ ಕಾಲಘಟ್ಟದ ಕಾದಂಬರಿಗಳನ್ನು ಆಧರಿಸಿ, ಬೇರೆ ಬೇರೆ ಪರಿಕಲ್ಪನೆಗಳನ್ನು ಆಧರಿಸಿ ಇಂತಹ ಅಧ್ಯಯನಗಳು ನಡೆದಿರುವುದನ್ನು ಕಾಣಬಹುದು.

ಪ್ರಸುತ್ತ ಅಧ್ಯಯನದಲ್ಲಿ ವಿವಿಧ ಜ್ಞಾನಶಿಸ್ತುಗಳು ದುಡಿಯುವ ವರ್ಗವನ್ನು ಕುರಿತು ಅನೇಕ ನೆಲೆಗಳಲ್ಲಿ ಚರ್ಚೆ ಮಾಡಿವೆ. ಆದರೆ ಸಾಹಿತ್ಯ ಕೃತಿಗಳು ಈ ದುಡಿಯುವ ವರ್ಗವನ್ನು ಗ್ರಹಿಸುವ ಹಾಗೂ ಅಭಿವ್ಯಕ್ತಿಸಿರುವ ಕ್ರಮವು ಉಳಿದ ಜ್ಞಾನಶಿಸ್ತುಗಳಿಗಿಂತ ಭಿನ್ನವಾಗಿವೆ. ಕಾದಂಬರಿಗಳು ದುಡಿಯುವ ವರ್ಗದ ಸೂಕ್ಷ್ಮವಾದ ಒಳನೋಟವನ್ನು ಅನೇಕ ಮಾದರಿಯಲ್ಲಿ ಅನಾವರಣ ಮಾಡಿವೆ. ಚಾರಿತ್ರಿಕವಾಗಿ ನಿರ್ಮಾಣವಾದ ಈ ವರ್ಗದ ಬದಲಾಗುವಿಕೆಯ ಸ್ವರೂಪವನ್ನು ಒಂದು ಕಾದಂಬರಿಯಿಂದ ಮತ್ತೊಂದು ಕಾದಂಬರಿಗೆ ಭಿನ್ನವಾಗಿರುತ್ತದೆ. ದುಡಿವ ಸಮುದಾಯವು ಜಾತಿ, ವರ್ಗ, ವರ್ಣ, ಧರ್ಮ ಮುಂತಾದವುಗಳಿಂದ ನಿರಂತರವಾಗಿ ದೌರ್ಜನ್ಯಕ್ಕೆ ಒಳಗಾಗುತ್ತಿದೆ. ಅಸ್ಪೃಶ್ಯತೆ, ಸಾಮೂಹಿಕ ಬಹಿಷ್ಕಾರ, ಶ್ರಮಕ್ಕೆ ತಕ್ಕ ಪ್ರತಿಫಲ ಸಿಗದೇ ಇರುವುದು, ಅತ್ಯಾಚಾರ, ಅವಮಾನ ಹೀಗೆ ಮುಂತಾದ ವಸ್ತುವಿಷಯಗಳು ಈ ದುಡಿಯುವ ವರ್ಗದ ಬದುಕನ್ನು ಅತಂತ್ರ ಸ್ಥಿತಿಗೆ ತಳ್ಳಿವೆ. ಈ ದುಡಿಯುವ ವರ್ಗದ ಶ್ರಮದಿಂದಲೇ ಸಮಾಜದ ಅಸ್ತಿತ್ವವು ಇರುವುದನ್ನು ಕಾಣುತ್ತೇವೆ. ಇದರ ಜೊತೆಗೆ ಈ ವರ್ಗವನ್ನು ಸ್ವತಂತ್ರವಾದ ವಸ್ತುವಾಗಿ ಗ್ರಹಿಸಲು ಆಗುವುದಿಲ್ಲ. ಯಾಕೆಂದರೆ ಅದು ಆಳುವ ವರ್ಗದೊಂದಿಗೆ ಸಂಬಂಧವನ್ನು ಹೊಂದಿರುತ್ತದೆ. ಇಲ್ಲಿ ಆಳುವ ವರ್ಗವು ಇವರ ಹಕ್ಕುಗಳನ್ನು ವಂಚಿಸಿ, ಅವರನ್ನು ಶ್ರಮಮೌಲ್ಯ ಶೋಷಣೆಗೆ ಒಳಪಡಿಸಿ ದುಡಿಸಿಕೊಳ್ಳಲಾಗುತ್ತಿದೆ. ಈ ಮೂಲಕ ಅಸಮಾನತೆ, ಶೋಷಣೆಯನ್ನು ಯಥಾಸ್ಥಿತಿಯಲ್ಲಿ ಮುಂದುವರಿಸಿಕೊಂಡು ಹೋಗುವ ಚರಿತ್ರೆಯನ್ನು ಕಾದಂಬರಿಗಳ ನಿರೂಪಣೆಯ ಮೂಲಕ ಗ್ರಹಿಸಬಹುದು.

ಇಲ್ಲಿ ದುಡಿಯುವ ವರ್ಗವು ಮೇಲುವರ್ಗದ ಶೋಷಣೆ ಒಳಗಾಗಿದೆ. ಆ ಶೋಷಣೆಯು ಈ ದುಡಿಯುವ ವರ್ಗದ ಗಮನಕ್ಕೆ ಬರದ ಹಾಗೆ ಆಳುವ ವರ್ಗ ತನ್ನ ಹಿತಾಸಕ್ತಿಯನ್ನು ತುಂಬಿ ಈ ವಾಸ್ತವ ಸ್ಥಿತಿಯನ್ನು ಬದಲಾಗದ ಹಾಗೆ ನೋಡಿಕೊಳ್ಳುತ್ತದೆ. ಈ ಮೂಲಕ ಅಸಮಾನತೆ, ಜಾತಿಶೋಷಣೆ, ಅಸ್ಪೃಶ್ಯತೆ, ಮೌಢ್ಯಗಳು ಮುಂತಾದ ಶೋಷಣೆಯ ಅಂಶಗಳನ್ನು ಸಮಾಜದಲ್ಲಿ ಹರಡಿ ತಮ್ಮ ಅಸ್ತಿತ್ವವನ್ನು ಭದ್ರಪಡಿಸಿಕೊಳ್ಳುವ ಆಳುವ ವರ್ಗದ ಹುನ್ನಾರವನ್ನು ಕಾಣಬಹುದು. ಜೊತೆಗೆ ಮೇಲುವರ್ಗವು ಜಾತಿ, ವರ್ಗ, ವರ್ಣ, ಧರ್ಮಗಳನ್ನು ಹರಡುವ ರಾಜಕೀಯ ತಂತ್ರವನ್ನು ಅಳವಡಿಸಿಕೊಂಡು ಸಮಾಜದಲ್ಲಿ ಅಸಮಾನತೆ, ಶೋಷಣೆಗಳನ್ನು ಉಳಿಸಿಕೊಂಡು ಹೋಗುತ್ತಿದೆ. ಇದರ ಪರಿಣಾಮದಿಂದ ದುಡಿಯುವ ವರ್ಗವು ಸಂಕಷ್ಟದ ಬದುಕನ್ನು ನಿರ್ವಹಿಸುತ್ತ ಆಳುವ ವರ್ಗದ ಅಧೀನ ವರ್ಗವಾಗಿದೆ. ಈ ವರ್ಗವೈರುಧ್ಯತೆಯನ್ನು ಕುರಿತು ಮತ್ತು ದುಡಿಯುವ ವರ್ಗವನ್ನು ಬಿಡುಗಡೆಗೊಳಿಸಿ ಸಮಸಮಾಜವನ್ನು ಅಸ್ತಿತ್ವಕ್ಕೆ ತರಲು ಅನೇಕ ಚಿಂತಕರು, ದಾರ್ಶನಿಕರು, ಹೋರಾಟಗಾರರು, ಸಮಾಜ ಸುಧಾರಕರು ಸಮಾಜದ ಪರಿವರ್ತನೆಗಾಗಿ ಹೋರಾಟವನ್ನು ಕೈಗೊಂಡರು. ಅದರ ಪ್ರತಿಫಲವಾಗಿ ಸಾಮಾಜಿಕ ವ್ಯವಸ್ಥೆಯ ಒಳಗಿನ ಸುಧಾರಣೆ ಅಥವಾ ಬದಲಾವಣೆಗಳು ಕಾದಂಬರಿಗಳಲ್ಲಿ ಆಲೋಚನೆಯಾಗಿ, ಚಿಂತನೆಯಾಗಿ ಮೂಡಿಬಂದಿರುವುದನ್ನು ಕಾಣುತ್ತೇವೆ.

ಮಾರ್ಕ್ಸ್‌ವಾದಿ ಸಿದ್ಧಾಂತವು ವರ್ಗಹೋರಾಟಕ್ಕೆ ತಳಪಾಯವನ್ನು ಹಾಕಿಕೊಟ್ಟಿತು. ಇದರ ಪ್ರಭಾವದಿಂದ ಭಾರತೀಯ ಚರಿತ್ರೆಯಲ್ಲಿ ಅನೇಕ ಚಿಂತನೆಗಳು ಈ ವರ್ಗಪ್ರಜ್ಞೆ, ವರ್ಗಚರಿತ್ರೆಯನ್ನು ನಿರೂಪಿಸಲು ಸಾಧ್ಯವಾಗಿದೆ.

ಅಂಬೇಡ್ಕರ್ ಅವರ ಚಿಂತನೆ ಮತ್ತು ಹೋರಾಟದ ಪ್ರಭಾವದಿಂದ ಇಲ್ಲಿನ ದುಡಿಯುವ ವರ್ಗವು ಶೋಷಣೆಯ ವಿರುದ್ಧ ಹೋರಾಟದ ಮನೋಭಾವನೆಯನ್ನು ಬೆಳೆಸಿಕೊಂಡಿತು. ಜೊತೆಗೆ ಮಾರ್ಕ್ಸ್, ಬುದ್ಧ, ಬಸವಣ್ಣ ಮುಂತಾದವರ ಚಿಂತನೆಗಳಿಂದ ಪ್ರಭಾವಿತಗೊಂಡ ಶೋಷಿತವರ್ಗವು ತನ್ನ ಜಾತಿಶೋಷಣೆ, ವರ್ಗಶೋಷಣೆ, ದಮನ, ದಬ್ಬಾಳಿಕೆ, ಅನ್ಯಾಯದ ವಿರುದ್ಧ ಹೋರಾಡಿದ ಚರಿತ್ರೆಯು ನಮ್ಮ ಕಾದಂಬರಿಗಳ ಮೂಲಕ ಅಭಿವ್ಯಕ್ತಿಯಾಗಿದೆ. ಅಂದರೆ ಸಮಾಜದಲ್ಲಿ ಶೋಷಣೆಯಿಲ್ಲದ ಮುಕ್ತಸಮಾಜದ ತುಡಿತವು ಕಾದಂಬರಿಯ ಕೇಂದ್ರ ನಿರೂಪಣೆಯಲ್ಲಿ ಕಾಣಿಸುತ್ತದೆ.

೧೯ ಮತ್ತು ೨೦ನೇ ಶತಮಾನದಿಂದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯವಾಗಿ ತೀವ್ರ ಶೋಷಣೆಗೆ ಒಳಗಾದ ದುಡಿಯುವ ವರ್ಗವು ಈ ಶೋಷಣೆಯ ವಿರುದ್ಧ ಹೋರಾಡುವ ಮತ್ತು ಹಕ್ಕುಗಳಿಗಾಗಿ ಪ್ರತಿಭಟಿಸಿರುವುದು ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಶ್ ವಸಾಹತುಶಾಹಿಗಳು ಮತ್ತು ಊಳಿಗಮಾನ್ಯಶಾಹಿ ವ್ಯವಸ್ಥೆಯ ವಿರುದ್ಧ ದುಡಿಯುವ ಜನರು ಹೋರಾಡಿದರು. ಅಂಬೇಡ್ಕರ್ ನೇತೃತ್ವದಲ್ಲಿ ಜಾತಿ ಶೋಷಣೆಯ ವಿರುದ್ಧ ಮತ್ತು ದಲಿತರ ರಾಜಕೀಯ

ಹಕ್ಕಿಗಾಗಿ, ರಾಜಕೀಯ ಮೀಸಲಾತಿಗಾಗಿ ಮತ್ತು ಆರ್ಥಿಕ ಅಸಮಾನತೆಯ ವಿರುದ್ಧ ಹೋರಾಟವು ಇಲ್ಲಿ ದಲಿತವರ್ಗ ಮತ್ತು ದುಡಿಯುವ ವರ್ಗದ ಜಾಗೃತಿಗೆ ಕಾರಣವಾಗಿದೆ. ಜೊತೆಗೆ ಕಮ್ಯೂನಿಸ್ಟ್ ಪಾರ್ಟಿಯ ನೇತೃತ್ವದಲ್ಲಿ ವರ್ಗಹೋರಾಟವನ್ನು ಸಂಘಟಿಸಲಾಗಿದೆ. ತೆಲಂಗಾಣ ರೈತ ಹೋರಾಟ, ನಕ್ಸಲ್‌ಬರಿಯಂತಹ ಹೋರಾಟಗಳು ದುಡಿಯುವ ವರ್ಗದ ಹೋರಾಟವಾಗಿ ಪ್ರಭಾವ ಬೀರಿವೆ. ಈ ಮೂಲಕ ವರ್ಗಪ್ರಜ್ಞೆಯು ದೇಶದಾದ್ಯಂತ ಪಸರಿಸಿದೆ. ಆದರೆ ಅಧಿಕಾರ ಹಸ್ತಾಂತರವಾದ ನಂತರ ಅಧಿಕಾರದ ಚುಕ್ಕಾಣಿ ಹಿಡಿದ ಇಲ್ಲಿನ ಆಳುವ ವರ್ಗ, ದಲಿತರು, ದುಡಿಯುವ ವರ್ಗವನ್ನು ಇನ್ನೂ ಸಂಕಷ್ಟದ ಸ್ಥಿತಿಗೆ ತಳ್ಳಿತು. ಇಂತಹ ಆಳುವ ವರ್ಗದ ಶೋಷಣೆಯ ವಿರುದ್ಧ ಹೋರಾಡುವುದೇ ದುಡಿಯುವ ವರ್ಗದ ಆಯ್ಕೆಯಾಯಿತು. ಇಂತಹ ಸಂದರ್ಭದಲ್ಲಿ ಕನ್ನಡ ಸಾಹಿತ್ಯದಲ್ಲಿ ವರ್ಗಪ್ರಜ್ಞೆಯನ್ನು ಅಳವಡಿಸಿಕೊಂಡು ಬರೆದಿರುವುದನ್ನು ಕಾಣಬಹುದು. ನವೋದಯ ಸಂದರ್ಭದಲ್ಲಿ ರಚನೆಯಾದ ಎಲ್ಲಾ ಪ್ರಕಾರಗಳಿಗೆ ವರ್ಗಪ್ರಜ್ಞೆ, ವರ್ಗಶೋಷಣೆ, ವರ್ಗಸಂಘರ್ಷ ನಿರೂಪಣೆಯ ಕೇಂದ್ರ ವಸ್ತುವಿಷಯವಾಗಿ ಗ್ರಹಿಸಲು ಸಾಧ್ಯವಾಗಿಲ್ಲ. ಸಮಾಜದ ಜಾತಿತಾರತಮ್ಯಗಳ ಮೂಲಕ ಆರ್ಥಿಕ ಅಸಮಾನತೆ, ಜಾತಿ ಅಸಮಾನತೆಯ ನಿರೂಪಣೆ ಇದೆಯೇ ಹೊರತು ಅದು ವರ್ಗಶೋಷಣೆಯ ಪರಿಣಾಮದಿಂದ ಹುಟ್ಟಿಕೊಂಡಿದೆ ಎನ್ನುವ ಆಲೋಚನೆಗೆ ಈ ಕಾಲದ ಬರಹಗಳಿಗೆ ಸಾಧ್ಯವಾಗಿಲ್ಲ. ಇಲ್ಲಿ ಜಾತಿ, ವರ್ಣದ ಚೌಕಟ್ಟು ಇವರಿಗೆ ಮುಖ್ಯವಾಗಿ ಸಾಹಿತ್ಯ ವಸ್ತುವಾಗಿ ಮೂಡಿಬಂದಿದೆ. ತದನಂತರ ಪ್ರಗತಿಶೀಲ ಕಾಲದ ಸಾಹಿತ್ಯ ಬರಹಗಳು ಕನ್ನಡ ಸಾಹಿತ್ಯದಲ್ಲಿ ನಿಜವಾಗಿ ವರ್ಗಶೋಷಣೆ, ವರ್ಗಸಂಘರ್ಷ, ವರ್ಗಪ್ರಜ್ಞೆಯ ಭಾಗವಾಗಿ ದುಡಿಯುವ ವರ್ಗದ ರಾಜಕೀಯ, ಸಾಮಾಜಿಕವಾದ ನಿರೂಪಣೆಯನ್ನು ಮಾಡಿವೆ. ಈ ಕಾಲದ ಕಥೆ, ಕಾದಂಬರಿಗಳು ವರ್ಗಶೋಷಣೆಯನ್ನು ವಿರೋಧಿಸಿ ದುಡಿಯುವ ವರ್ಗದ ರಾಜ್ಯಕ್ಕಾಗಿ ಅಥವಾ ದುಡಿಯುವ ವರ್ಗದ ಶೋಷಣೆಯನ್ನು ಮುಕ್ತಗೊಳಿಸುವ ಬೇಡಿಕೆಯನ್ನು ಮುಂದಿಟ್ಟಿವೆ. ದುಡಿಯುವ ವರ್ಗದ ಹೋರಾಟಕ್ಕೆ ಮುಖ್ಯವಾಗಿ ಮಾರ್ಕ್ಸ್ ಚಿಂತನೆಗಳನ್ನು ಈ ಕಾಲದ ಬರಹಗಳು ಅಭಿವ್ಯಕ್ತಿಸಿವೆ. ದುಡಿಯುವ ವರ್ಗದ ರಾಜಕೀಯ ಪ್ರಜ್ಞೆಯ ಕುರಿತು ಮತ್ತು ವರ್ಗಹೋರಾಟವನ್ನು ಕುರಿತು ಈ ಪ್ರಗತಿಶೀಲ ಸಾಹಿತ್ಯದಲ್ಲಿ ಚರ್ಚೆಗಳಾಗಿವೆ. ಈ ಸಂದರ್ಭದಲ್ಲಿ ನಿರಂಜನ, ಅನಕೃ ಮುಂತಾದ ಲೇಖಕರಲ್ಲೆಲ್ಲಾ ವರ್ಗಪ್ರಜ್ಞೆ ಕುರಿತಂತೆ ಕಾದಂಬರಿಗಳನ್ನು ರಚಿಸಿದರು. ಈ ಮೂಲಕ ಸಾಮಾಜಿಕ ಕಳಕಳಿಯನ್ನು ಅರ್ಥಪೂರ್ಣವಾಗಿ ನಿರೂಪಿಸಿದ್ದಾರೆ. ನಂತರದಲ್ಲಿ ನವ್ಯ ಸಾಹಿತ್ಯದ ಬರಹಗಾರರಿಗೆ ವ್ಯಕ್ತಿನಿಷ್ಠೆ, ಅನಾಥಪ್ರಜ್ಞೆ, ಪರಿಸರ ಪ್ರಜ್ಞೆ ಮುಂತಾದವು ಅವರಿಗೆ ಮುಖ್ಯವಾದವೇ ಹೊರತು ವರ್ಗಪ್ರಜ್ಞೆಯನ್ನು ಅಥವಾ ಸಾಮಾಜಿಕ ಬದಲಾವಣೆಯ ತುಡಿತ ಕಾಣಿಸಲಿಲ್ಲ. ಇಲ್ಲಿ ದುಡಿಯುವ ವರ್ಗದ ಶೂನ್ಯತೆ ಕಾಣಿಸುತ್ತದೆ. ಉತ್ಪಾದನಾ ಸಂಬಂಧಗಳನ್ನು ಗೌಣಗೊಳಿಸಲು ಶೋಷಣೆಯ ಪರಿಣಾಮಗಳನ್ನು ವ್ಯಕ್ತಿನಿಷ್ಠ ನೆಲೆಯಲ್ಲಿ ಸಾರ್ವತ್ರೀಕರಿಸುವ ನಿರೂಪಣೆಯು ಕಾಣಿಸುತ್ತದೆ.

ದಲಿತ-ಬಂಡಾಯದ ಸಾಹಿತ್ಯ ಘಟ್ಟದಲ್ಲಿ ಬಂದಂತಹ ಅನೇಕ ಬರಹಗಳು ಈ ದುಡಿಯುವ ವರ್ಗದ ಬಿಡುಗಡೆಯ ಒತ್ತಾಸೆಯ ಹೋರಾಟದ ಪ್ರಭಾವದಿಂದ ರಚನೆಯಾಗಿವೆ. ಇದು

'ದಲಿತ ಸಂಘರ್ಷ ಸಮಿತಿ', 'ಕಮ್ಯೂನಿಸ್ಟ್ ಪಾರ್ಟಿ' ಮುಂದಿಟ್ಟಿರುವ ಮಾರ್ಕ್ಸ್ ಚಿಂತನೆ, ಅಂಬೇಡ್ಕರ್ ಚಿಂತನೆಗಳು ಸ್ಪೂರ್ತಿ ಪಡೆದಿತ್ತು. ಇದರ ಮೂಲಕ ಆರ್ಥಿಕವಾಗಿ ಹಿಂದುಳಿದಿರುವ ವರ್ಗದ ಜನರು ಶಿಕ್ಷಣ ಕುರಿತು ಅಥವಾ ರಾಜಕೀಯವಾಗಿ ಬಲಿಷ್ಠವಾದ ಚಿಂತನೆಗಳನ್ನು ಮಾಡುವುದರ ಮೂಲಕ ಸಮಾಜದಲ್ಲಿನ ಅಸಮಾನತೆ, ಶೋಷಣೆ, ಜಾತಿ ಅಸಮಾನತೆ, ಜಾತಿಶೋಷಣೆ, ವರ್ಗತಾರತಮ್ಯ, ವರ್ಗಶೋಷಣೆ, ಸಂಪತ್ತಿನ ಅಸಮಾನತೆಯ ವಿರುದ್ಧ ಸಾಹಿತ್ಯ ರೂಪದಲ್ಲಿ ಚಳುವಳಿಯನ್ನು ಪ್ರಾರಂಭಿಸಿ, ಈ ದುಡಿಯುವ ವರ್ಗದ ರಾಜಕೀಯ ಪ್ರಜ್ಞೆಯನ್ನು ಅನಾವರಣ ಮಾಡಿರುವುದನ್ನು ಕಾಣುತ್ತೇವೆ.

ಇಂದು ಜಾಗತೀಕರಣದ ಪರಿಣಾಮದಿಂದ ಮತ್ತು ಕಾರ್ಪೋರೇಟ್ ವ್ಯವಸ್ಥೆಯ ಅಭಿವೃದ್ಧಿ ರಾಜಕೀಯದಲ್ಲಿ ಇಡೀ ದುಡಿಯುವ ವರ್ಗದ ರಾಜಕೀಯ ಚಿಂತನೆಗಳು ಪ್ರಧಾನವಾದ ವೈರುಧ್ಯತೆಯನ್ನು ಎದುರಿಸುತ್ತಿರುವ ಈ ಕಾಲದಲ್ಲಿ ಸಾಹಿತ್ಯ ಬರಹಗಳು ಈ ಸಮಾಜದ ಅನುಕೂಲ, ಅನನುಕೂಲವನ್ನು ಅಭಿವ್ಯಕ್ತಿಸಿವೆ. ಹಾಗೆಯೇ ಸಮಾಜದ ವರ್ಗವೈರುಧ್ಯತೆ ಮತ್ತು ದುಡಿಯುವ ವರ್ಗದ ಬಿಡುಗಡೆಗೆ ಅನೇಕ ರಾಜಕೀಯ ಚಿಂತನೆಗಳ ಮೂಲಕ ಸಮಾಜದ ಬೆಳವಣಿಗೆಗೆ ಸಾಧ್ಯತೆಗಳನ್ನು ಹುಡುಕುತ್ತಿರುವುದನ್ನು ಗುರುತಿಸಬಹುದು.

### ೧.೧. ಅಧ್ಯಯನದ ಉದ್ದೇಶ

೧. ಕನ್ನಡ ಕಾದಂಬರಿಗಳ ಪ್ರಮಾಣ ಬಹಳ ದೊಡ್ಡದು. ಆ ಎಲ್ಲವನ್ನು ಒಟ್ಟಾಗಿ ಅಧ್ಯಯನ ಮಾಡುವುದು ಕಷ್ಟಸಾಧ್ಯವಾದುದು. ಹಾಗಾಗಿ ಕನ್ನಡದ ಕೆಲವು ಪ್ರಾತಿನಿಧಿಕ ಕಾದಂಬರಿಗಳನ್ನು ಆಯ್ಕೆ ಮಾಡಿಕೊಂಡು ಅವು ಅಭಿವ್ಯಕ್ತಿಸಿರುವ ದುಡಿಯುವ ವರ್ಗವನ್ನು ಕುರಿತು ಅಧ್ಯಯನ ಮಾಡಲಾಗಿದೆ.

೨. ಕಾದಂಬರಿಗಳಿಗೂ ದುಡಿಯುವ ವರ್ಗಕ್ಕೂ ಇರುವ ಸಂಬಂಧದ ಎಳೆಗಳನ್ನು ಚರ್ಚಿಸುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದು.

೩. ಕನ್ನಡ ಕಾದಂಬರಿಗಳು ಇಡಿಯಾಗಿ ದುಡಿಯುವ ವರ್ಗದ ಸ್ವರೂಪವನ್ನು ಗ್ರಹಿಸಿರುವ ಬಗೆಯನ್ನು ಕುರಿತು ಚರ್ಚಿಸಲಾಗಿದೆ.

೪. ಕಾದಂಬರಿಗಳು ದುಡಿಯುವ ವರ್ಗದ ಸ್ವರೂಪವನ್ನು ಮತ್ತು ಆಳುವ ವರ್ಗದ ಸ್ವರೂಪವನ್ನು ಮುಖಾಮುಖಿಯಾಗಿಸಿರುವ ಹಲವು ಆಯಾಮಗಳ ಬಹುಮುಖ ಸ್ತರಗಳನ್ನು ಕುರಿತು ಚರ್ಚಿಸಲಾಗಿದೆ.

೫. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ನೆಲೆಗಳನ್ನು ಕುರಿತು ಚರ್ಚಿಸಲಾಗಿದೆ.

೬. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಮಾನಸಿಕ ಹಾಗೂ ಭಾವನಾತ್ಮಕ ನೆಲೆಗಳ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ.

೭. ದುಡಿಯುವ ಜನರ ರಾಜಕೀಯ ದೃಷ್ಟಿಕೋನದಲ್ಲಿ ಕನ್ನಡದ ಕಾದಂಬರಿಗಳನ್ನು ವಿಮರ್ಶಿಸಲಾಗಿದೆ. ಅವುಗಳ ಆಶಯಗಳನ್ನು ಕುರಿತು ಚರ್ಚಿಸುವ ಉದ್ದೇಶ ಇಲ್ಲಿದೆ.

೮. ದುಡಿಯುವ ಜನರು ಜಾತಿ, ವರ್ಗ, ವರ್ಣದ ಸಮಸ್ಯೆಗಳಿಂದ ನೊಂದ ವರ್ಗವಿದು. ಈ ವರ್ಗವು ಎದುರಿಸುತ್ತಿರುವ ಅವಮಾನ, ಅತ್ಯಾಚಾರ, ಕೊಲೆ, ಹಿಂಸೆ, ದೌರ್ಜನ್ಯ ಮುಂತಾದ ಶೋಷಣೆಗಳ ವಸ್ತುವಿಷಯದ ಹಿನ್ನೆಲೆಯಲ್ಲಿ ಚರ್ಚಿಸಬೇಕಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಕನ್ನಡ ಪ್ರಾತಿನಿಧಿಕ ಕಾದಂಬರಿಗಳನ್ನು ಕುರಿತು ಈ ಮಹಾಪ್ರಬಂಧದಲ್ಲಿ ಅಧ್ಯಯನ ಮಾಡಲಾಗುವುದು. ಆದರೆ ಕನ್ನಡದ ಎಲ್ಲಾ ಕಾದಂಬರಿಗಳನ್ನು ಸಮಗ್ರವಾಗಿ ಅಧ್ಯಯನ ಮಾಡುವುದು ಕಷ್ಟಸಾಧ್ಯವಾದುದು. ಯಾಕೆಂದರೆ ಕನ್ನಡ ಕಾದಂಬರಿಗಳ ಪ್ರಮಾಣ ಬಹಳ ವಿಶಾಲವಾದುದು. ಹಾಗಾಗಿ ಕೆಲವು ಮಾನದಂಡಗಳನ್ನು ಅನುಸರಿಸಿ ಅಧ್ಯಯನ ಮಾಡಲಾಗಿದೆ.

೧. ಕರ್ನಾಟಕದ ವಿವಿಧ ಭೌಗೋಳಿಕ ಪ್ರದೇಶಗಳ ಬರಹಗಾರರನ್ನು ಪ್ರಾತಿನಿಧಿಕವಾಗಿ ಪರಿಗಣಿಸಲಾಗಿದೆ.

೨. ವಿವಿಧ ಧರ್ಮ, ಜಾತಿ, ವೃತ್ತಿ ಮುಂತಾದ ನೆಲೆಗಳ ಬರಹಗಾರರನ್ನು ಪ್ರಾತಿನಿಧಿಕವಾಗಿ ಪರಿಗಣಿಸಲಾಗಿದೆ.

೩. ಇದೇ ಆಯಾಮದಲ್ಲಿ ಮಹಿಳಾ ಕಾಂದಬರಿಕಾರ್ತಿಯರನ್ನು ಪ್ರಾತಿನಿಧಿಕವಾಗಿ ಪರಿಗಣಿಸ ಲಾಗಿದೆ. ಆಯ್ಕೆಯ ಈ ಮಾನದಂಡಗಳ ವಿಶಾಲವಾಗಿ ಕರ್ನಾಟಕದ ಎಲ್ಲಾ ಭಾಗಗಳ ಹಾಗೂ ಎಲ್ಲಾ ಸಾಮಾಜಿಕ ಸ್ತರಗಳ ಬರಹಗಾರರನ್ನು ಪ್ರತಿನಿಧಿಸುತ್ತವೆ. ಹಾಗಾಗಿ ಈ ಮಾನದಂಡಗಳನ್ನು ಬಳಸಿಕೊಳ್ಳಲಾಗಿದೆ. ಜೊತೆಗೆ ಕನ್ನಡದ ಕಾದಂಬರಿಗಳನ್ನು ಕುರಿತು ಬಂದಿರುವ ಬಿಡಿಲೇಖನಗಳು ಎಂ.ಫಿಲ್. ಹಾಗೂ ಪಿಎಚ್.ಡಿ. ಪ್ರಬಂಧಗಳು, ವಿಮರ್ಶಾ ಬರಹಗಳು ಮತ್ತು ವಿಮರ್ಶಾ ಕೃತಿಗಳನ್ನು ಆನುಷಂಗಿಕ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

## ೧.೩. ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನದಲ್ಲಿ ಕನ್ನಡ ಪ್ರಾತಿನಿಧಿಕ ಕಾದಂಬರಿಗಳನ್ನು ಪ್ರಾಥಮಿಕ ಆಕರಗಳಾಗಿ ಮತ್ತು ಈ ಸಾಹಿತ್ಯ ಕೃತಿಗಳ ಮೇಲೆ ಬಂದಿರುವ ವಿಮರ್ಶಾ ಬರಹಗಳು, ವಿಮರ್ಶಾ ಕೃತಿಗಳು, ಸಂಶೋಧನ ಪ್ರಬಂಧಗಳನ್ನು ಆನುಷಂಗಿಕ ಆಕರಗಳಾಗಿ ಅಧ್ಯಯನ ಮಾಡಲಾಗಿದೆ. ನಂತರ ಅವುಗಳ ಮುಖ್ಯ ತಾತ್ವಿಕ ನೆಲೆಗಳನ್ನು ಆಧರಿಸಿ, ದುಡಿಯುವ ವರ್ಗದ ಪರಿಕಲ್ಪನೆಯನ್ನು ನಿರ್ವಚಿಸಿಕೊಳ್ಳಲಾಗಿದೆ. ಇಲ್ಲಿ ಸಾಹಿತ್ಯೇತರ ನೆಲೆ ಮತ್ತು ಸಾಹಿತ್ಯಕ ನೆಲೆಗಳ ಮೂಲಕ ದುಡಿಯುವ ವರ್ಗದ ಪರಿಕಲ್ಪನೆಯನ್ನು ಚರ್ಚಿಸಲಾಗಿದೆ. ನಂತರ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಆರ್ಥಿಕ, ಸಾಮಾಜಿಕ, ರಾಜಕೀಯ, ಮಾನಸಿಕ ಹಾಗೂ ಭಾವನಾತ್ಮಕ ಸ್ಥಿತಿಗತಿಗಳನ್ನು ಕುರಿತು ಚರ್ಚಿಸಲಾಗಿದೆ. ಸಾಹಿತ್ಯೇತರ

ಲೋಕ ಗ್ರಹಿಕೆಯ ಮೂಲಕ ಕಾದಂಬರಿಗಳಲ್ಲಿ ದುಡಿಯುವ ವರ್ಗವನ್ನು ಪ್ರವೇಶ ಮಾಡುವುದು ಒಂದು ಕ್ರಮ. ಆದರೆ ಈ ಪ್ರಸ್ತುತ ಅಧ್ಯಯನದಲ್ಲಿ ಕಾದಂಬರಿಗಳನ್ನು ಕುರಿತು ಬಹುಮುಖ ಆಯಾಮಗಳನ್ನು ಪರಿಶೀಲನೆಯ ಮೂಲಕ ದುಡಿಯುವ ವರ್ಗದ ಬಹುಮುಖ ಆಯಾಮಗಳನ್ನು ಕುರಿತು ಚರ್ಚಿಸಲಾಗಿದೆ. ದುಡಿಯುವ ವರ್ಗವು ಸಾಮಾಜಿಕವಾಗಿ ಚಾರಿತ್ರಿಕ ಸೃಷ್ಟಿ. ಇದು ರಾಜಕೀಯ ಆರ್ಥಿಕ ಚರ್ಚೆಯ ನೆಲೆಯಾಗಿದೆ. ಆದರೆ ಈ ಅಧ್ಯಯನದಲ್ಲಿ ಇದಕ್ಕಿಂತಲೂ ಮುಖ್ಯವಾಗಿ ಕನ್ನಡ ಕಾದಂಬರಿಗಳು ದುಡಿಯುವ ವರ್ಗವನ್ನು, ಅದರ ಭೌತಿಕ ಸ್ಥಿತಿಗತಿಗಳನ್ನು ಹಾಗೂ ಅದರ ಇರುವಿಕೆ ಮತ್ತು ಆಗುವಿಕೆಯ ಸ್ವರೂಪವನ್ನು ಮತ್ತು ವರ್ತನೆ, ಸ್ವಭಾವ, ಆಕಾಂಕ್ಷೆ ಮುಂತಾದ ನೆಲೆಗಳನ್ನು ಈ ಅಧ್ಯಯನದಲ್ಲಿ ಕೇಂದ್ರಚರ್ಚೆಗೆ ತರಲಾಗಿದೆ.

### ೧.೪. ಇದುವರೆಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಕನ್ನಡ ವಿಮರ್ಶಾ ವಲಯದಲ್ಲಿ ಕಾದಂಬರಿ ಸಾಹಿತ್ಯ ಕುರಿತು ಸಾಕಷ್ಟು ಚರ್ಚೆಗಳು, ಸಂವಾದಗಳು ನಡೆದಿವೆ. ಜೊತೆಗೆ ಸಂಶೋಧನಾ ಪ್ರಬಂಧಗಳು ಎಂ.ಫಿಲ್. ಪ್ರಬಂಧಗಳು, ವಿಮರ್ಶಾ ಲೇಖನಗಳು ಇನ್ನೂ ಮುಂತಾದವು ಈ ಕಾದಂಬರಿ ಸಾಹಿತ್ಯವನ್ನು ಕುರಿತು ಚರ್ಚಿಸಿವೆ. ಸಾಹಿತ್ಯದಲ್ಲಿ ಈ ಪ್ರಕಾರಕ್ಕೆ ಬಂದಿರುವ ವಿಮರ್ಶೆಗಳನ್ನು ಬೇರೆ ಸಾಹಿತ್ಯ ಪ್ರಕಾರಗಳಿಗೆ ಹೋಲಿಸಿದರೆ ಹೆಚ್ಚಾಗಿರುವುದು ಮೇಲುನೋಟಕ್ಕೆ ತಿಳಿಯುತ್ತದೆ.

ಈ ವಿಮರ್ಶೆಗಳಲ್ಲಿ ಕಾದಂಬರಿಗಳ ಕುರಿತು ಇಡಿಯಾಗಿ ಗ್ರಹಿಸಿರುವ ಮತ್ತೆ ಕೆಲವು ವಿಮರ್ಶೆಗಳು ಕಾದಂಬರಿಗಳಲ್ಲಿ ಅನೇಕ ಪರಿಕಲ್ಪನೆಗಳ ಮೂಲಕ ಅದರ ಬಹುಮುಖ ನೆಲೆಗಳನ್ನು ಕುರಿತಿರುವ ಬರಹಗಳಿವೆ. ಗ್ರಾಮ ಸಮಾಜ, ಸಂಸ್ಕೃತಿಯ ಗ್ರಹಿಕೆಗಳು, ಜಾತಿ ಪ್ರಶ್ನೆಗಳು, ಅಸ್ಪೃಶ್ಯತೆಯ ಪ್ರಶ್ನೆಗಳು, ರಾಷ್ಟ್ರೀಯತೆಯ ಪ್ರಶ್ನೆಗಳು, ಆಧುನಿಕತೆ, ವಸಾಹತುಶಾಹಿ, ಮಹಿಳಾ ಪ್ರಶ್ನೆಗಳು, ದಲಿತ ಪ್ರಶ್ನೆಗಳು, ಭಾಷಿಕ ನೆಲೆಗಳು ಮುಂತಾದ ಪರಿಕಲ್ಪನೆಗಳ ಮೂಲಕ ಸಂಶೋಧನೆಯ ಬಹುಪಾಲು ಅಧ್ಯಯನಗಳು ನಡೆದಿವೆ, ನಡೆಯುತ್ತಿವೆ. ಆದರೆ ಈ ಬಿಡಿ ಬಿಡಿ ಲೇಖನಗಳು, ಸ್ವತಂತ್ರ ಅಧ್ಯಯನಗಳು ಮತ್ತು ವಿಮರ್ಶಾ ಬರಹಗಳಲ್ಲಿ ದುಡಿಯುವ ವರ್ಗವನ್ನು ಕುರಿತು ನಡೆದಿರುವ ಅಧ್ಯಯನಗಳ ತಾತ್ವಿಕ ನೆಲೆಗಳನ್ನು ಮತ್ತು ಅಧ್ಯಯನಗಳ ಮುಖ್ಯ ಸಮಸ್ಯೆಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಇಲ್ಲಿ ದುಡಿಯುವ ವರ್ಗವನ್ನು ಕುರಿತು ಈ ವಿಮರ್ಶಾ ಬರಹಗಳನ್ನು ನಾಲ್ಕು ಅಂಶಗಳಿಂದ ಗುರುತಿಸಿಕೊಳ್ಳಲಾಗಿದೆ. ಅವುಗಳನ್ನು ಬಿಡಿ ಬಿಡಿಯಾಗಿ ಗ್ರಹಿಸದೆ ಇಡಿಯಾಗಿ ಇಲ್ಲಿ ಚರ್ಚೆಯಲ್ಲಿ ತರಲಾಗುತ್ತದೆ. ಈ ಮೂಲಕ ಅವುಗಳ ತಾತ್ವಿಕ ನೆಲೆಗಳನ್ನು ಚರ್ಚಿಸಲಾಗಿದೆ.

೧. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಪ್ರಜ್ಞೆಯನ್ನು ಕುರಿತ ಬರಹಗಳು.

೨. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಅಭಿವ್ಯಕ್ತಿ ಮತ್ತು ಆಶಯ ಪ್ರಧಾನ ಬರಹಗಳು.

೩. ಪ್ರೇರಣೆ ಮತ್ತು ಪ್ರಭಾವ ಕುರಿತ ಚರ್ಚೆಗಳು.

೪. ಸ್ವರೂಪಪ್ರಧಾನವಾದ ಬರಹಗಳು.

ಇಲ್ಲಿ ಮುಖ್ಯವಾಗಿ ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕಾದಂಬರಿಗಳ ಮೇಲೆ ಬಂದಿರುವ ಬರಹಗಳನ್ನು ಕೇಂದ್ರ ಸ್ಥಾನದಲ್ಲಿ ಚರ್ಚಿಸಲಾಗುವುದು.

ಕಾದಂಬರಿ ಸಾಹಿತ್ಯ ಎಂದಾಗ ಅದರ ಭಿತ್ತಿ ಬಹಳ ವಿಸ್ತಾರವಾದುದು. ಈ ವಿಸ್ತಾರವಾದ ಭಿತ್ತಿಯೊಳಗೆ ದುಡಿಯುವ ವರ್ಗದ ಪ್ರಜ್ಞೆಯ ಕುರಿತು ಬಂದಿರುವ ಬರಹಗಳು ಮುಖ್ಯವಾಗಿ ದುಡಿಯುವ ವರ್ಗದ ಶೋಷಣೆಗೆ ಕಾರಣ, ಪರಿಣಾಮ, ಅದರ ಹಿಂದಿರುವ ರಾಜಕೀಯ ಹುನ್ನಾರಗಳು, ಮುಚ್ಚಿಟ್ಟ ಮತ್ತು ಬಿಚ್ಚಿಟ್ಟ ವಸ್ತುವಿಷಯಗಳನ್ನು ಕುರಿತು ಬಹಳ ಗಂಭೀರವಾಗಿ ಚರ್ಚಿಸಿವೆ. ಇನ್ನೂ ಕೆಲವು ವಿಮರ್ಶೆಗಳು ಜಾತಿ, ವರ್ಗ, ಲಿಂಗ, ಧರ್ಮ, ಮತ ಮುಂತಾದವುಗಳೇ ಪ್ರಧಾನವಾಗಿವೆ ಎಂದು ಚರ್ಚಿಸಿವೆ. ಹೀಗೆ ಚರ್ಚಿಸುವುದರ ಮೂಲಕ ವರ್ಗಪ್ರಜ್ಞೆಯನ್ನು ಮತ್ತು ಅದರ ಅಭಿವ್ಯಕ್ತ ಕ್ರಮಗಳನ್ನು ನಿರೂಪಿಸಿವೆ. ಅಸಮಾನತೆ, ಅನ್ಯಾಯ, ಶೋಷಣೆಗಳ ನಾನಾ ಮುಖಗಳನ್ನು ತಮ್ಮ ಬರಹಗಳಲ್ಲಿ ಸೂಕ್ಷ್ಮಾತಿ ಸೂಕ್ಷ್ಮಸ್ವರೂಪದಲ್ಲಿ ವಿಮರ್ಶಾ ಬರಹಗಳು ನಿರೂಪಿಸಿರುವುದನ್ನು ಕಾಣುತ್ತೇವೆ.

ಆರ್ಕೆ ಮಣಿಪಾಲ ಅವರು ತಮ್ಮ 'ಸಾಹಿತ್ಯ: ಆಶಯ ಮತ್ತು ವಿನ್ಯಾಸ' ಕೃತಿಯಲ್ಲಿ ಸಾಹಿತ್ಯ ಕೃತಿಯನ್ನು ವಿಮರ್ಶೆ ಮಾಡುವಾಗ "ಸಾಹಿತಿ-ವಿಮರ್ಶಕರು ಯಾವ ವರ್ಗದ ಅನುಭವವನ್ನು ಮೈಗೂಡಿಸಿಕೊಂಡಿರುತ್ತಾರೆ ಎಂಬುದಕ್ಕೆ ಅವರ ಈ ವಿನಯದಲ್ಲಿನ ಪಕ್ವತೆಯ ಅಂಶಗಳಿಗೂ ಸಾಪೇಕ್ಷ ಸಂಬಂಧವಿರುವುದನ್ನು ನಾವು ಕಡೆಗಣಿಸುವಂತಿಲ್ಲ. ಏಕೆಂದರೆ ಎಷ್ಟೇ ಸೃಜನಶೀಲ ಪ್ರತಿಭೆಯ ಸ್ವತಂತ್ರ ದೃಷ್ಟಿಕೋನದ ಲೇಖಕನೇ ಆದರೂ ಆತ ಪ್ರತಿನಿಧಿಸುವ ವರ್ಗದ ಅನುಭವ ದ್ರವ್ಯಗಳು, ಮೌಲ್ಯ ಪರಂಪರೆ ಕುರಿತಾದ ವರ್ಗ ಒಲವುಗಳು ಆತನ ಸುಪ್ತಾಸುಪ್ತ ಪ್ರಜ್ಞೆಯಲ್ಲಿ ತಾನೇ ತಾನಾಗಿ ಕೆಲಸ ಮಾಡುತ್ತಿರುತ್ತದೆ"[೧] ಎಂದಿದ್ದಾರೆ. ಇಲ್ಲಿ ವಿಮರ್ಶಕರು ಹೊಂದಿರುವ ವರ್ಗಪ್ರಜ್ಞೆಯು ಅವರು ಸಾಹಿತ್ಯ ಕೃತಿಯನ್ನು ಗ್ರಹಿಸಿರುವ ಧೋರಣೆಯಲ್ಲಿ ಅಡಗಿರುತ್ತದೆ ಎನ್ನುವ ವರ್ಗಪ್ರಜ್ಞೆಯ ತಿಳುವಳಿಕೆಯನ್ನು ಗ್ರಹಿಸಿದ್ದಾರೆ.

'ದಲಿತ ಸಾಹಿತ್ಯ ಚಳವಳಿಯ ವರ್ಗಪ್ರಜ್ಞೆ' ಲೇಖನದಲ್ಲಿ ಆರ್ಕೆ ಅವರು 'ಜಾತಿಗಿಂತ ವರ್ಗದ ಕಲ್ಪನೆ ಹೆಚ್ಚು ಮೂಲಭೂತವಾದುದು. ಏಕೆಂದರೆ, ಅದು ರಾಜನಿಕವಾಗಿ ನಿರ್ಧರಿಸಲ್ಪಡುವಂಥಾದ್ದು" ಎಂದಿದ್ದಾರೆ. ಜೊತೆಗೆ "ಮೀಸಲಾತಿ, ದಲಿತ ಜನಾಂಗದ ಹೋರಾಟದ ಕಸುವನ್ನು, ನೈತಿಕ ಸ್ಥೈರ್ಯವನ್ನು ದೋಚಿಬಿಡುವ ಪ್ರವೃತ್ತಿಯಾಗಿದೆ. ಏಕೆಂದರೆ ಬೂರ್ಶ್ವಾ ಸರಕಾರ ಕಲ್ಪಿಸಿಕೊಟ್ಟ ಅವಕಾಶವನ್ನು ಗಿಟ್ಟಿಸಿಕೊಳ್ಳಲು ದಲಿತರೊಳಗೇ ಸ್ಪರ್ಧೆಯುಂಟಾಗಿ ತಮ್ಮ ವರ್ಗನೆಲೆಯನ್ನು ಕಂಡುಕೊಳ್ಳಲು ಮತ್ತು ಅದರಿಂದ ಶಾಶ್ವತವಾಗಿ ಮುಕ್ತವಾಗುವ ಮಾರ್ಗಗಳನ್ನು ಅನ್ವೇಷಿಸಲು, ಅವರಿಗೆ ಅಸಾಧ್ಯವಾಗಿ ಬಿಡುತ್ತದೆ"[೨] ಎಂದು ಬರೆದಿದ್ದಾರೆ. ಇಲ್ಲಿ ದಲಿತ ವರ್ಗವು ಆರ್ಥಿಕವಾಗಿ ಹಿಂದುಳಿದ ದುಡಿಯುವ ವರ್ಗವಾದರೂ ಅವರ ಅಭಿವೃದ್ಧಿಗೆ ಮೀಸಲಾದ ಮೀಸಲಾತಿಯೊಳಗೆ ವರ್ಗವೈರುಧ್ಯತೆ ಇದ್ದರೂ ಅದು ಅವರ ಸುಧಾರಣೆಯ

ಭಾಗವಾಗಿ ಕಾಣಿಸುತ್ತದೆ. ಅದು ಅವರ ಶೋಷಣೆಯನ್ನು ಮುಕ್ತಗೊಳಿಸುವ ರಾಜಕೀಯ, ಆರ್ಥಿಕ ಮೀಸಲಾತಿ ಅಲ್ಲ. ಇಲ್ಲಿ ಲೇಖಕರು ಅವರು ಎದುರಿಸುತ್ತಿರುವ ಶೋಷಕ ವ್ಯವಸ್ಥೆಯಾದ ವಸಾಹತುಶಾಹಿ ಮತ್ತು ಜಮೀನ್ದಾರಿ- ಅರೆ ಬಂಡವಾಳಶಾಹಿಗಳ ಶೋಷಣೆ ದಬ್ಬಾಳಿಕೆ ಕುರಿತು ಚರ್ಚಿಸುತ್ತಿದೆ. ಹಾಗೆಯೇ "ವರ್ಗಹೋರಾಟ ಜಾತಿಯ ವಿಷವ್ಯವಸ್ಥೆಯನ್ನು ತುಳಿದು ಹಾಕಿಬಿಡಬಲ್ಲುದು ಎಂದೆಷ್ಟೇ ಹೇಳಲಿಚ್ಚಿಸುತ್ತೇನೆ."[೩] ಇಲ್ಲಿ ಜಾತಿ ಶ್ರೇಣೀಕರಣ ವ್ಯವಸ್ಥೆಯನ್ನು ತೊಡೆದು ಹಾಕಲು ವರ್ಗ ಹೋರಾಟವೇ ಅಂತಿಮ ಎಂದು ವರ್ಗ ಮತ್ತು ಜಾತಿಯ ಶೋಷಣೆಯಿಂದ ಈ ದಲಿತ ವರ್ಗ ಹೊರಬರುವ ದಾರಿಯನ್ನು ಸೂಚಿಸುತ್ತದೆ.

ಆರ್.ವಿ. ಭಂಡಾರಿ ಅವರ 'ಪ್ರಭುತ್ವ ಮತ್ತು ಸಾಹಿತ್ಯ' ಕೃತಿಯಲ್ಲಿ ಶಿವರಾಮ ಕಾರಂತ ಅವರ 'ಚೋಮನ ದುಡಿ' ಕಾದಂಬರಿಯ ಕುರಿತು "ಚೋಮನ ದುಡಿ ಕೂಡಾ ವರ್ಣ-ವರ್ಗ ಮೌನ ಸಂಘರ್ಷವನ್ನು ಚಿತ್ರಿಸುತ್ತ, ಚರಿತ್ರೆ ಮುಂದೆ ಮಾಡಿರುವ ಮತ್ತು ಜಾತಿ ಧರ್ಮಗಳ ಮೂಲಕ ತಳಕು ಹಾಕಿಕೊಂಡಿರುವ ಆರ್ಥಿಕ ಶಕ್ತಿ ಮತ್ತು ಭೂಸಮಸ್ಯೆಯನ್ನು ಪ್ರಕಾಶನಕ್ಕೆ ತರುತ್ತದೆ"[೪] ಎಂದಿದ್ದಾರೆ. ಇಲ್ಲಿ ವರ್ಗ ಅಸಮಾನತೆಯ ವಿವರಣೆ ಇದೆ. ಹಾಗೆಯೇ ಕಾದಂಬರಿಯ ಕೇಂದ್ರವಾಗಿ ದುಡಿಯುವ ವರ್ಗವು ಭೂಮಿಯ ಹಕ್ಕನ್ನು, ಕೇಳುವ ಪ್ರಯತ್ನವನ್ನು ಈ ಲೇಖನದಲ್ಲಿ ವಸ್ತುಸ್ಥಿತಿಯನ್ನು ನಿರೂಪಿಸಿದ್ದಾರೆ.

'ಚೋಮನ ದುಡಿ'ಯ ವಸ್ತು ಮತ್ತು ವಿನ್ಯಾಸ ಲೇಖನದಲ್ಲಿ ಆರ್.ವಿ. ಭಂಡಾರಿಯವರು ಈ ಕಾದಂಬರಿಯಲ್ಲಿ ವರ್ಗವೈರುಧ್ಯತೆಯನ್ನು ಚಾಲಕಶಕ್ತಿಯಾಗಿ ತಂದಿದ್ದಾರೆ. "ವರ್ಗ ಹೋರಾಟದ ಚಾರಿತ್ರಿಕ ಚಲನಶಕ್ತಿ ಜಾತಿಯಲ್ಲಿ ಮಡುಗಟ್ಟಿ ಛಿದ್ರವಾಗಿದೆ. ಒಡೆದು ಚೂರಾದ ಕನ್ನಡಿಯ ಚೂರಿನಲ್ಲಿ ಅದರ ಶಕ್ತಿ ಮಡುಗಟ್ಟಿ ಚರಿತ್ರೆಯ ಚಲನಶೀಲತೆಯನ್ನೇ ಮಂದಗೊಳಿಸಿದೆ. ಇಲ್ಲಿ ಉಂಟಾದ ಈ ಪಾಟಿ ಜಾತಿಗಳ ಸ್ತರಗಳಲ್ಲಿ ಆರ್ಥಿಕವಾಗಿ ಮಾತ್ರವಲ್ಲ, ಸಾಮಾಜಿಕವಾಗಿ ಕೂಡ ಸರ್ವಶಕ್ತಿಯ ಅಪಹರಣೆ ಗುರಿಯಾದುದ್ದು ಹೊಲೆಮಾದಿಗ ಜಾತಿ"[೫] ಎಂದಿದ್ದಾರೆ. ಇಲ್ಲಿ ಜಾತಿ ಶ್ರೇಣೀಕರಣದಲ್ಲಿ ಕೀಳಾಗಿ ಭಾವಿಸಿರುವ ಈ ಹೊಲೆಮಾದಿಗ ಜನಾಂಗವು ಅದರ ಚೋಮನ ರೀತಿಯಲ್ಲಿ ಸಂಕಷ್ಟಗಳಿಗೆ ಒಳಗಾಗಿರುವುದನ್ನು ಇಲ್ಲಿ ಮನಗಾಣಬಹುದು.

ಕೆ.ವಿ. ನಾರಾಯಣ ಅವರು 'ಚೋಮನ ದುಡಿ' ಕಾದಂಬರಿ ಕುರಿತು ಅದರ ಸಾಮಾಜಿಕ ನಿಷ್ಠೆಯ ಪ್ರಾತಿನಿಧಿಕ ಅಂಶಗಳನ್ನು ಕುರಿತು ಚರ್ಚಿಸಿದ್ದಾರೆ. ಇಲ್ಲಿ ಕಾದಂಬರಿಯ ವಸ್ತು ಸಾಮಾಜಿಕ ನಿತ್ಯದ ಬದುಕಿನಲ್ಲಿ ಕಾಣುವ ಅನೇಕ ಸಮಸ್ಯೆಗಳನ್ನು ಗ್ರಹಿಸುತ್ತಿದೆ. ಅದರಲ್ಲಿಯೂ ಅಸಮಾನತೆಯನ್ನು ಸಾಮಾಜಿಕ ಸಮಸ್ಯೆಯಾಗಿ ಗುರುತಿಸುತ್ತಾರೆ. "ವಸ್ತು ಸಮಸ್ಯೆಗಳು ಸಾಮಾಜಿಕವಾದರೂ ಅದನ್ನು ಗ್ರಹಿಸುವ ಬಗೆ ಸಾಮಾಜಿಕವಾಗಿರುತ್ತದೆ ಎಂದೇನಲ್ಲ. ಒಂದು ಸಾಮಾಜಿಕ ಸಮಸ್ಯೆಯ ಮುಸುಕಿನಲ್ಲಿ ವ್ಯಕ್ತಿಯ ಸಮಸ್ಯೆಯೇ ಚಿತ್ರತವಾಗಿರಬಹುದು. ಆಗ ಸಮಸ್ಯೆಯ ಗ್ರಹಿಕೆ ಸಾಮಾಜಿಕವಾಗದೆ ಅಂತಹ ಕಾದಂಬರಿಗಳಲ್ಲಿ ಸಾಮಾಜಿಕ ನಿಷ್ಠೆ ಇಲ್ಲವೆಂದೇ

ಹೇಳಬೇಕಾಗುತ್ತದೆ"[೬] ಎಂದಿದ್ದಾರೆ. ಜೊತೆಗೆ "ಚೋಮನ ಬದುಕಿನ ದುರಂತ ಒಂದು ಸಾಮಾಜಿಕ ದುರಂತವೂ ಹೌದು. ಒಬ್ಬ ವ್ಯಕ್ತಿಯ ದುರಂತವೂ ಹೌದು"[೭] ಎಂದು ಚರ್ಚಿಸಿದ್ದಾರೆ. ಮುಂದುವರಿದು ಕಾದಂಬರಿಯ ಕೊರತೆಗಳನ್ನು ಹೇಳುವುದು. "ಚೋಮ ದುಡಿಯುತ್ತಿರುವಾತ, ತಾನು ದುಡಿಯುತ್ತಿರುವ ನೆಲದ ಮೇಲೆ ಅವನಿಗೆ ಹಕ್ಕಿದೆ. ಆ ಹಕ್ಕನ್ನು ಅವನು ಪಡೆಯಬೇಕಾಗಿದೆ. ಕಾದಂಬರಿಯಲ್ಲಿ ಅವನು ಕೇವಲ ಸುಧಾರಣೆಯನ್ನು ಅಪೇಕ್ಷಿಸುತ್ತಾನೆ. ತನ್ನನ್ನು ಸಂಪೂರ್ಣ ಮುಕ್ತವಾಗಿಸಿಕೊಳ್ಳುವ ಪ್ರಜ್ಞೆಯನ್ನು ವ್ಯಕ್ತಪಡಿಸುವುದಿಲ್ಲ"[೮] ಎಂದಿದ್ದಾರೆ. ಹೀಗೆ ಈ ಲೇಖನದಲ್ಲಿ ಬೂರ್ಜ್ವಾಸಿಯ ಕಾದಂಬರಿಕಾರರು ಶ್ರಮಜೀವಿ ವರ್ಗಪ್ರಜ್ಞೆಯನ್ನು ಬೆಳೆಸಿಕೊಳ್ಳದೇ ಇಂತಹ ವಸ್ತುವನ್ನು ಆರಿಸಿಕೊಂಡದ್ದು ಈ ಗೊಂದಲಕ್ಕೆ ಕಾರಣವಾಗಿದೆ ಎಂದು ಹೇಳುತ್ತೇನೆ"[೯] ಎಂದು ಕಾದಂಬರಿಯ ಕುರಿತು ನಿಲುವನ್ನು ತಾಳುತ್ತಾರೆ. ಈ ಮೂಲಕ ತನ್ನ ವರ್ಗಪ್ರಜ್ಞೆಯನ್ನು ಆರೋಪಿಸಿದ ಶ್ರಮಜೀವಿ ಚೋಮ ಎಂದು ಈ ಲೇಖನದಲ್ಲಿ ಚರ್ಚಿಸಿರುವುದನ್ನು ಕಾಣಬಹುದು.

'ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ ಚಿತ್ರಣ' ಎಂಬ ಲೇಖನದಲ್ಲಿ ಬಿ. ಕೃಷ್ಣಪ್ಪ ಅವರು "ತಮಗಿಂತ ಮೇಲಿರುವ ಬ್ರಾಹ್ಮಣಶಾಹಿಯನ್ನು ಪ್ರತಿಭಟಿಸುವ ಭರದಲ್ಲಿ ಕುವೆಂಪು ಅವರಿಗೆ ಶೂದ್ರರಿಗಿಂತ ಕೆಳಮಟ್ಟದಲ್ಲಿರುವ ದಲಿತರು ಕಾಣದೇ ಹೋದರು. ಒಂದು ಕಡೆ ಶೋಷಣೆಯನ್ನು ಪ್ರತಿಭಟಿಸದ ಕವಿ ಮತ್ತೊಂದು ಕಡೆ ಶೋಷಣೆಯನ್ನು ಮೌನವಾಗಿ ಒಪ್ಪಿಕೊಂಡರು"[೧೦] ಎಂದು ಆರೋಪಿಸಿದ್ದಾರೆ. ಇಲ್ಲಿ ನಾಲ್ಕು ಜಾತಿಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಬ್ರಾಹ್ಮಣರು ಮೈ ಬಗ್ಗಿಸಿ ದುಡಿಯುವವರಲ್ಲ. ಹಳ್ಳಿಗರಿಗೆ ಮೌಢ್ಯವನ್ನೇ ಉಪದೇಶ ಮಾಡಿ ನಿಮಿತ್ತ ಹೇಳುವುದು, ವಿಭೂತಿ ಕೊಡುವುದು, ಸತ್ಯನಾರಾಯಣ ವ್ರತ ಮಾಡುವುದು, ದೆವ್ವ ಪಿಶಾಚಿಗಳಿಗೆ ಬಲಿ ಕೊಡಿಸುವುದು, ಕಾಯಿಲೆ ಬಿದ್ದರೆ ಔಷಧಿ ಮಾಡಿ ಎಂದು ಹೇಳುವ ಬದಲು ಬೂದಿ, ಕುಂಕುಮ ಹಚ್ಚಿ ಮಂತ್ರ ಹಾಕುವುದು ಇತ್ಯಾದಿ ತಂತ್ರಗಳಿಂದ ಜನಸಾಮಾನ್ಯರನ್ನು ಶೋಷಣೆ ಮಾಡುತ್ತಾರೆ"[೧೧] ಎಂದಿದ್ದಾರೆ. ಜೊತೆಗೆ "ತಮ್ಮ ವರ್ಗಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ಎಂತಹ ನೀಚ ಕೆಲಸಕ್ಕೂ ಅವರು ಇಳಿಯಬಲ್ಲರು"[೧೨] ಎಂದು ಚರ್ಚಿಸಿದ್ದಾರೆ. ಒಕ್ಕಲಿಗರು ಅಥವಾ ಗೌಡರು ಭೂಮಾಲೀಕರು. ಇವರು ದಲಿತರು ಕೂಲಿ ಆಳುಗಳನ್ನು ನಿರಂತರವಾಗಿ ಶೋಷಣೆ ಮಾಡುತ್ತಿದ್ದಾರೆ. ಮುಸ್ಲಿಮರು, ಗೌಡರ ಅಧೀನವಾಗಿ ಕೆಲಸ ಮಾಡುವ ವರ್ಗವಾಗಿ ಅವರು ಭೂಮಾಲೀಕ ವ್ಯವಸ್ಥೆ ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಾರೆ ಎಂದು ಜಾತಿ ಶ್ರೇಣೀಕರಣ, ಜಾತಿ ಅಸಮಾನತೆಯನ್ನು ಚರ್ಚಿಸುತ್ತಿದ್ದಾರೆ. ಊಳಿಗಮಾನ್ಯಶಾಹಿ ಭೂಮಾಲೀಕ ವ್ಯವಸ್ಥೆಯ ಶೋಷಣೆಯ ಮುಖಗಳನ್ನು ಚಿತ್ರಿಸುತ್ತಲೇ ದುಡಿಯುವ ವರ್ಗದ ಶೋಷಣೆಯನ್ನು ಒಪ್ಪಿಕೊಳ್ಳುವ ಮತ್ತು ಈ ದುಡಿಯುವ ವರ್ಗದ ಜನರ ಹಕ್ಕುಗಳನ್ನು ಮುಚ್ಚಿಡುವ ಕಾದಂಬರಿಯಾಗಿ ಗುರುತಿಸಿದ್ದಾರೆ.

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಲೇಖನದಲ್ಲಿ ಎಂ.ಜಿ. ಕೃಷ್ಣಮೂರ್ತಿ ಅವರು ಇಲ್ಲಿ ಪಾತ್ರಗಳಲ್ಲಿ ಬರುವ ಲೈಂಗಿಕ ಸಂಬಂಧಗಳು, ನಿಸರ್ಗದ ಕ್ರಿಯೆಗಳು ಈ

ಸಂಬಂಧಗಳ ಪರಿಣಾಮವನ್ನು ಗುರುತಿಸುತ್ತಿದ್ದಾರೆ. ಜೊತೆಗೆ ಮತಾಂತರ, ಬಂಡವಾಳಶಾಹಿ ವ್ಯವಸ್ಥೆಯ ಚಿತ್ರಣವನ್ನು ಗುರುತಿಸಿದ್ದಾರೆ. ಕೊನೆಯಲ್ಲಿ ಕಾದಂಬರಿಯನ್ನು ಕುರಿತು ಅಸಮಾಧಾನ ವ್ಯಕ್ತಪಡಿಸುತ್ತಾರೆ. "ಪ್ರಪಂಚದ ಉತ್ತಮ ಕಾದಂಬರಿಕಾರರ ಕೃತಿಗಳಲ್ಲಿ ನಮಗೆ ಕಾಣಬರುವ ಅನುಭವದ ಹರಹು, ಸನ್ನಿವೇಶಗಳನ್ನು ಸೃಷ್ಟಿಸುವ ಶಕ್ತಿ, ಭಾಷೆಯ ಕಸುವು, ಮೊದಲಾದವುಗಳನ್ನೆಲ್ಲಾ ಇವರ ಕೃತಿಗಳಲ್ಲಿ ಗುರುತಿಸಬಹುದು. ಆದ್ದರಿಂದ ಇಂತಹ ಸಾಹಿತಿಯ ಸೋಲು, ಆಧುನಿಕ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಆಸಕ್ತಿಯಿರುವವರೆಲ್ಲಾ ಎದುರಿಸಲೇಬೇಕಾದ ಬಹುಶಃ ನಮ್ಮ ಸಮಾಜದ ಬೆಳವಣಿಗೆಗೆ ಸಂಬಂಧಪಟ್ಟ ಮೂಲಭೂತ ಸಮಸ್ಯೆಗಳನ್ನು ಎತ್ತಿತೋರಿಸುತ್ತಿದೆ. ಇಂತಹ ಸೋಲು ಹತ್ತೊಂಬತ್ತನೆಯ ಶತಮಾನದಲ್ಲಿ ಶುರುವಾದ ಸಾಮಾಜಿಕ ಬದಲಾವಣೆಗಳನ್ನು ನಾವಿನ್ನೂ ಅರಗಿಸಿಕೊಂಡಿಲ್ಲ ಎಂಬ ನನ್ನ ಶಂಕೆಯನ್ನು ಬಲಪಡಿಸುತ್ತಿದೆ"[೧೬] ಎಂದಿದ್ದಾರೆ. ಹೀಗೆ ಈ ಲೇಖನದಲ್ಲಿ ಕಾದಂಬರಿಯ ಪಾತ್ರಗಳನ್ನು ಸಂಬಂಧಗಳ ಮೂಲಕ ವಿಶ್ಲೇಷಿಸಿರುವುದನ್ನು ಗುರುತಿಸಬಹುದು.

'ಕಾನೂರು ಹೆಗ್ಗಡತಿ' ಎಂಬ ಲೇಖನದಲ್ಲಿ ಎಂ.ಜಿ. ಕೃಷ್ಣಮೂರ್ತಿ ಅವರು 'ಕಾನೂರು ಹೆಗ್ಗಡಿತಿ' ಕಾದಂಬರಿಯು ಆಧ್ಯಾತ್ಮಿಕತೆಯನ್ನು ವರ್ಣಿಸುತ್ತಿದೆ. ಜೊತೆಗೆ ಕಾದಂಬರಿಯಲ್ಲಿ ಲೋಪಗಳಿವೆ. ಆದರೂ ಕಾದಂಬರಿಯ ಇತರ ವಿವರಗಳಿಂದಾಗಿ 'ಕಾನೂರು ಹೆಗ್ಗಡತಿ' ಉತ್ತಮ ಸಾಹಿತ್ಯ ಕೃತಿ ಎಂದು ಹೇಳುವುದು ಸಮಂಜಸವಲ್ಲ ಎಂದಿದ್ದಾರೆ. "ಹೂವಯ್ಯನ ಅಸ್ಪಷ್ಟವಾದ ಕಾಲ್ಪನಿಕ ಜಗತ್ತಿಗೂ ನೈಜ ಜಗತ್ತಿಗೂ ಸಂಬಂಧವಿಲ್ಲವಾದ್ದರಿಂದ ಕಾದಂಬರಿಯ ಬಂಧ ಶಿಥಿಲ. ಆದ್ದರಿಂದಲೇ ಇದು ಒಂದು ರೀತಿಯ ಕಾಲಾನುಕ್ರಮಣಿ. ಆದರೆ ಕಾದಂಬರಿಯ ವಸ್ತುವಿನಿಂದಾಗಿ ಅದನ್ನು ಕಾಲಾನುಕ್ರಮಣಿ ಎಂದುಕೊಂಡು ಓದಿ ಘಟನೆಗಳನ್ನು ಮೆಚ್ಚುವಂತಿಲ್ಲ. ಅಂದರೆ 'ಕಾನೂರು ಹೆಗ್ಗಡಿತಿ'ಯನ್ನು ಕಾದಂಬರಿಯೆಂದೇ ಗಣಿಸಿ, ಅದರ ಬಂಧದ ಬಗ್ಗೆ ಪ್ರಶ್ನೆಗಳನ್ನು ಕೇಳಿ ವಿಮರ್ಶಿಸಬೇಕು"[೧೭] ಎಂದು ಚರ್ಚಿಸಿದ್ದಾರೆ.

'ಗ್ರಾಮಾಯಣ: ಉತ್ಪಾದನ ಸಂಬಂಧಗಳು' ಅಥವಾ 'ಆಸ್ತಿಯ ಸಂಬಂಧಗಳು' ಲೇಖನದಲ್ಲಿ ಬಿ.ಎಂ. ಪುಟ್ಟಯ್ಯ ಅವರು ಸಾಹಿತ್ಯ ಕೃತಿಯನ್ನು ಸಮಾಜಶಾಸ್ತ್ರೀಯ ಪರಿಭಾಷೆಗೆ ಅಳವಡಿಸಿ ನೋಡುವ ಪ್ರಯತ್ನ ಮಾಡಿದ್ದಾರೆ. ಗ್ರಾಮಾಯಣ ರಚನೆಯಾದ ಕಾಲದಲ್ಲಿ ಸಮಾಜದಲ್ಲಿ ಅಸ್ತಿತ್ವದಲ್ಲಿ ಇದ್ದ ಮತ್ತು ಬದಲಾಗುತ್ತಿದ್ದ ಆಸ್ತಿ ಸಂಬಂಧ ಕುರಿತು ಚರ್ಚಿಸಿದ್ದಾರೆ. "ಸಾಮಾಜಿಕ ಬದಲಾವಣೆಗೆ ಯಾವುದು ಬುನಾದಿ ಮತ್ತು ಯಾವುದು ಪ್ರೇರಣೆ" ಎಂಬ ತಾತ್ವಿಕ ಹುಡುಕಾಟ ಗ್ರಾಮಾಯಣದ ಸೃಜನಶೀಲತೆಯ ಹಿಂದೆ ಅಘೋಷಿತ ರೂಪದಲ್ಲಿ, ಬಹಳ ಗಟ್ಟಿಯಾಗಿ ಕ್ರಿಯಾಶೀಲವಾಗಿದೆ. ಕಾದಂಬರಿ ಇದನ್ನು "ಜೀವನವನ್ನು ರೂಪಿಸುವ ಹೊಣೆ ಎನ್ನುತ್ತದೆ"[೧೮] ಎಂದು ಚರ್ಚಿಸಿದ್ದಾರೆ. "ದುಡಿಯುವವರ ಎಚ್ಚರಗೊಂಡ ಪ್ರಜ್ಞೆ ಮತ್ತು ಅವರ ಸಂಘಟನಾ ಶ್ರಮವು ಸಮಾಜದಲ್ಲಿ(ಆಮೂಲಾಗ್ರ) ಬದಲಾವಣೆ ಮಾಡಬಲ್ಲದು ಎಂಬ ರಾಜಕೀಯ ಎಚ್ಚರಿಕೆ ಗ್ರಾಮಾಯಣದ ಸೃಜನಶೀಲತೆಯ ಹಿಂದೆ ಗುಪ್ತವಾಗಿ ಕೆಲಸ ಮಾಡಿದೆ. ಹೀಗೆ ಕೆಲಸ

ಮಾಡಿರುವುದರಿಂದಲೇ ಗ್ರಾಮಾಯಣವು ಈ ಆಯಾಮವನ್ನು ಎಲ್ಲಿಯೂ ಬಿಚ್ಚಿಡುವುದಿಲ್ಲ; ಬದಲಿಗೆ ಅದನ್ನು ಅತ್ಯಂತ ನಯವಾಗಿ ಮುಚ್ಚಿಡುತ್ತಾ ಸಾಗಿದೆ"[೧೬] ಎಂದು ಚರ್ಚಿಸಿದ್ದಾರೆ. ಜೊತೆಗೆ ಆಸ್ತಿ, ಅಧಿಕಾರವು ಆ ಸಮಾಜದಲ್ಲಿ ವರ್ಗ ವೈರುಧ್ಯತೆಗೆ ಕಾರಣವಾಗಿದ್ದನ್ನು ಮತ್ತೆ ಕಾದಂಬರಿಯು ಹೀಗಾಗಲೇ ದುಡಿವ ಜನರ ಆಸ್ತಿಯ ಹಕ್ಕಿನ ಪ್ರತಿಪಾದನೆ ಮಾಡಿರುವ ಕಾದಂಬರಿಯು ವಸ್ತುವಿಷಯವನ್ನು ಮುಚ್ಚಿಟ್ಟು, ಆಳುವ ವರ್ಗದ ನಡುವೆ ಆಸ್ತಿ, ಅಧಿಕಾರದ ಪಲ್ಲಟವಾಗುತ್ತಿರುವುದನ್ನು ಇಲ್ಲಿ ಗುರುತಿಸುತ್ತಾರೆ.

'ಆಸ್ತಿ ಮತ್ತು ಅಧಿಕಾರದ ಸಂಬಂಧಗಳ ಸ್ವರೂಪ' ಲೇಖನದಲ್ಲಿ ಡಿ. ಅಂಜನಪ್ಪ ಅವರು 'ಗ್ರಾಮಾಯಣ' ಕಾದಂಬರಿ ಕುರಿತು ವರ್ಗ ವೈರುಧ್ಯತೆಗಳ ನಡುವಿನ ಭಿನ್ನತೆಗಳನ್ನು ಚರ್ಚಿಸುತ್ತಾರೆ. ಆಸ್ತಿಯ ಒಡೆತನ ಮತ್ತು ಅಧಿಕಾರವು ಮಾನವ ಸಂಬಂಧಗಳನ್ನು ರೂಪಿಸುವ ಮತ್ತು ವಿಘಟಿಸುವ ಬಗೆಯನ್ನು ಗುರುತಿಸಿದ್ದಾರೆ. "ಆಸ್ತಿ ಮತ್ತು ಅಧಿಕಾರಕ್ಕೆ ಹಂಬಲಿಸಿ ಸಮುದಾಯದ ಬದುಕನ್ನು ದುರಂತಕ್ಕೆ ತಳ್ಳುವ ಮನಸ್ಥಿತಿಯೇ ಕಾದಂಬರಿಯ ಕೇಂದ್ರ ಪ್ರಜ್ಞೆ, ಚಿಮಣಾಳ, ಶೀಲಭಂಗ ಮತ್ತು ಅದರಿಂದ ಉಂಟಾದ ಪಾದಳ್ಳಿಯ ಸಂಘರ್ಷದ ಬದುಕಿಗೆ ಒಂದು ನೆಪ ಮಾತ್ರ, ಅದು ಕಾರಣವಲ್ಲ, ಆಸ್ತಿಯ ಒಡೆತನ ಮತ್ತು ವಸಾಹತುಶಾಹಿ ಪೋಷಿಸಿದ ಅಧಿಕಾರದ ಶಕ್ತಿ ರಾಜಕಾರಣವೇ ಪಾದಳ್ಳಿಯ ಜೀವನ ದುರಂತಕ್ಕೆ ಪ್ರಧಾನ ಕಾರಣವಾಗಿದೆ"[೧೭] ಎಂದಿದ್ದಾರೆ. ಹಾಗೆಯೇ ಆಸ್ತಿ, ಅಧಿಕಾರ ಪಡೆಯುವ ಭೌತಿಕ ಪರಿಕರಗಳೊಂದಿನ ವಸ್ತುಕೇಂದ್ರಿತ ನೆಲೆಯೇ ಗ್ರಾಮಾಯಣ ಕಥನದ ಪ್ರಧಾನ ನೆಲೆಯಾಗಿದೆ ಎಂದು ಚರ್ಚಿಸಿದ್ದಾರೆ.

ಸಮೂಹ ಸಂಕಲ್ಪದ ಸಾರ್ಥಕ ಕಾದಂಬರಿ 'ಕರ್ವಾಲೊ' ಲೇಖನದಲ್ಲಿ ಆರ್ಕೆ ಮಣಿಪಾಲ ಅವರು ಮಂದಣ್ಣನ ಮೂಲಕ ಸಾಹಿತಿಗಳು ವೈಜ್ಞಾನಿಕವಾದ ನಿಲುವನ್ನು ರೂಢಿಸಿಕೊಳ್ಳುವುದನ್ನು ಇಂದಿನ ಅಗತ್ಯವಾಗಿದೆ. ಇಲ್ಲಿ ಕೆಳವರ್ಗದ ಮಂದಣ್ಣ ಅನ್ವೇಷಣೆಯಲ್ಲಿ ತೊಡಗುವುದನ್ನು ಕಾಣುತ್ತೇವೆ. ಆದರೆ ಈ ಕಾದಂಬರಿಯಲ್ಲಿ ಮಾನವನ ವರ್ಗ ಹಿನ್ನೆಲೆಯಲ್ಲೇ ವ್ಯಾಖ್ಯಾನಿಸುವಲ್ಲಿ ಕಾದಂಬರಿಯು ಸೋತಿದೆ ಎಂಬ ಭಾವನೆಗಳನ್ನು ವ್ಯಕ್ತಪಡಿಸುತ್ತಾರೆ.

"ನಿರಂಜನರ ವಿಮೋಚನೆ ಹಾಗೂ ಬಲ್ಲಾಳರ ಬಂಡಾಯಗಳಲ್ಲಿ ವರ್ಗಕಲಹದ ಸ್ವರೂಪ" ಎಂಬ ಲೇಖನದಲ್ಲಿ ಜಿ.ಎಸ್. ಅಮೂರ ಅವರು ನಿರಂಜನರ 'ಚಿರಸ್ಮರಣೆ' ಅಥವಾ ಮೃತ್ಯುಂಜಯ ವರ್ಗಕಲಹದ ಪ್ರಶ್ನೆಯನ್ನು ನೇರವಾಗಿ ಎತ್ತಿಕೊಂಡು ಬರೆದ ಕಾದಂಬರಿಗಳು ಎಂದು ಚರ್ಚಿಸಿದ್ದಾರೆ. ಆದರೆ ಬಲ್ಲಾಳ ಅವರ 'ಬಂಡಾಯ' ಕಾದಂಬರಿಯಲ್ಲಿ ಮಧ್ಯಮವರ್ಗದ ಆಸೆ-ಆಕಾಂಕ್ಷೆಗಳು, ಹಾಗೆಯೇ ಈ ವರ್ಗದ ಒಳಗೆ ಉಂಟಾಗುವ ಬಾಹ್ಯ ಮತ್ತು ಆಂತರಿಕ ಒತ್ತಡಗಳನ್ನು ಚರ್ಚಿಸಿದ್ದಾರೆ. ಇಲ್ಲಿ ದುಡಿಯುವ ವರ್ಗದ ವರ್ಗಸಂಘರ್ಷಗಳ ಕ್ರಿಯೆ ಮತ್ತು ಅದರ ಪರಿಣಾಮ ಹೆಚ್ಚು ವಾಸ್ತವವಾಗಿ ನಿರೂಪಿಸಿರುವುದನ್ನು ಇಲ್ಲಿ ಚರ್ಚಿಸಿದ್ದಾರೆ.

"ಭಾರತೀಪುರದ ಒಳನೋಟ" ಲೇಖನದಲ್ಲಿ ಸಿ.ಪಿ. ಸಿದ್ಧಾಶ್ರಮ ಅವರು ಕಾದಂಬರಿಯ ಕೇಂದ್ರ ಪಾತ್ರವಾದ ಜಗನ್ನಾಥನು ಜಡ್ಡುಗಟ್ಟಿದ ಮೌಲ್ಯಗಳಿಂದ ಕೂಡಿದ ಶೋಷಕ ಪರಿಸರವನ್ನು

ನಿರ್ಮೂಲಗೊಳಿಸಬೇಕಾದ ಪ್ರಸಂಗ ಬಂದಾಗ ಕೆಳವರ್ಗವನ್ನು ಬಳಸಿಕೊಳ್ಳುವ ಸೂಕ್ಷ್ಮತೆಯನ್ನು ಗುರುತಿಸುತ್ತಾರೆ. ಜೊತೆಗೆ ಜಮೀನ್ದಾರರು ಪರಿಶ್ರಮ ರಹಿತ ತಮ್ಮ ಸುಖಭೋಜನಕ್ಕಾಗಿ ಈ ಭೂತರಾಯನನ್ನು ಬಳಸಿಕೊಳ್ಳುತ್ತಾರೆ ಎನ್ನುವ ನಿಲುವನ್ನು ತಾಳುತ್ತಾರೆ. ಆದರೆ ದುಡಿಯುವ ಜನರ ಶ್ರಮ, ಶೋಷಣೆ ಮತ್ತು ವರ್ಗಪ್ರಜ್ಞೆ ವಿಷಯಗಳನ್ನು ಗುರುತಿಸುವಲ್ಲಿ ವಿಫಲವಾಗಿದ್ದಾರೆ. ಇಂದು ಕಾದಂಬರಿಕಾರರ ಹಾಗೂ ಲೇಖಕರ ಮಿತಿಯೂ ಹೌದು.

'ಸೂರ್ಯ'ದ ತಾತ್ವಿಕ ಅನುಸಂಧಾನ' ಲೇಖನದಲ್ಲಿ ಆರ್.ವಿ. ಭಂಡಾರಿ ಅವರು ಗೌಡ ಊಳಿಗಮಾನ್ಯದ ಪ್ರತಿನಿಧಿ. ಅದಕ್ಕೆ ವಿರೋಧಿಯಾಗಿ ಬರುವ ಶಕ್ತಿಯ ಕರಿಯ ದಲಿತ ವರ್ಗಕ್ಕೆ ಸೇರಿದವನಾಗಿದ್ದಾನೆ. ಅತ್ಯಂತ ಸೋತ ವರ್ಗವೇ ಇಲ್ಲಿ ವರ್ಗ ಹೋರಾಟದಲ್ಲಿ ವೈರಿಯಾಗುವುದನ್ನು ಇದು ಸೂಚಿಸುತ್ತದೆ. ಆಳುವ ವರ್ಗವು ಕೆಳವರ್ಗವನ್ನು ವರ್ಗ ಶತ್ರುವಾಗಿ ಕಾಣುವುದು. ತನ್ನ ಹಿತಾಸಕ್ತಿಗೆ ವಿರುದ್ಧವಾಗಿ ದುಡಿಯುವ ವರ್ಗ ಇರಬಾರದು ಎನ್ನುವ ಆಲೋಚನೆ ಆಳುವ ವರ್ಗದಾಗಿದೆ ಎಂದು ಚರ್ಚಿಸಿದ್ದಾರೆ.

ದೇವನೂರರು ರಚಿಸಿರುವ ಕಾದಂಬರಿಗಳ ಮೇಲೆ ಅನೇಕ ವಿಮರ್ಶೆಯ ಬರಹಗಳು ಬಂದಿವೆ. ಒಡಲಾಳ-ದಲಿತ ಬದುಕಿನ ಸಾಂಸ್ಕೃತಿಕ ದಾಖಲೆ(ಸದಾಶಿವ ಎಣ್ಣೆ ಹೊಳೆ), ದಲಿತರ ಪ್ರಾತಿನಿಧಿಕ ಕೃತಿ - ಒಡಲಾಳ(ದುರ್ಗಾದಾಸ್ ಕೆ.ಆರ್.), ದೇವನೂರರ ಕುಸುಮಬಾಲೆ(ರಘುನಾಥ ಎನ್.ಎಸ್.), ಕುಸುಮಬಾಲೆಯ ವರ್ಗ ಮತ್ತು ವರ್ಣ ಸಮಸ್ಯೆ ಮುಂತಾದ ಲೇಖನಗಳು ಬಂದಿವೆ. ಈ ಲೇಖನಗಳಲ್ಲಿ ದಲಿತರ ನೋವು-ನಲಿವು, ಬದುಕು-ಬವಣೆ, ಬಡತನ, ಶೋಷಣೆ, ದೌರ್ಜನ್ಯಗಳು ಕುರಿತು ಚರ್ಚಿಸಿದ್ದಾರೆ. ಆಳುವ ವರ್ಗವು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವ ಮತ್ತು ಆಳುವ ವರ್ಗದ ವ್ಯವಸ್ಥೆಯ ವಿರುದ್ಧ ದುಡಿಯುವ ಜನರ ಜಾಗೃತಿಯನ್ನು ಇಲ್ಲಿ ಚರ್ಚಿಸಿರುವುದನ್ನು ಗುರುತಿಸಿದ್ದಾರೆ. ಆದರೆ ಉತ್ಪಾದನಾ ಸಂಬಂಧಗಳನ್ನು ದುಡಿಯುವ ಜನರ ಹಕ್ಕಿನ ಭಾಗವಾಗಿ ಗ್ರಹಿಸಲು ಈ ಕಾದಂಬರಿಯು ಸೋತಿದೆ ಎನ್ನುವ ಭಾವನೆಗಳು ಇಲ್ಲಿ ವ್ಯಕ್ತವಾಗಿವೆ.

ಮುಳ್ಳೂರು ನಾಗರಾಜ ಅವರ "ಮರಣ ಮಂಡಲ ಮಧ್ಯದೊಳಗೆ" ಕಾದಂಬರಿ ಕುರಿತು ಮ.ನ. ಜವರಯ್ಯ ಮತ್ತು ರಾಜಪ್ಪ ದಳವಾಯಿ ಅವರ ಲೇಖನಗಳನ್ನು ಗಮನಿಸಿದರೆ, ಇಲ್ಲಿ ಶೋಷಿತ ವ್ಯಕ್ತಿಗಳು ಜಾತಿಯ ಕಾರಣಕ್ಕಾಗಿ ಆಳುವ ವರ್ಗ ವ್ಯವಸ್ಥೆಯ ವಿರುದ್ಧ ಹೋರಾಡುತ್ತಾರೆ. ಆಳುವ ವರ್ಗವು ಜಾತಿ ಕಾರಣಕ್ಕಾಗಿ ಕೆಳವರ್ಗದ ಮೇಲೆ ಶೋಷಣೆ ಮಾಡುವುದು. ಹಾಗೆಯೇ ತನ್ನ ವರ್ಗದ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ಕೂಡ ಕೆಳಜಾತಿಯ ನಡುವೆ ವೈರುಧ್ಯತೆಯನ್ನು ಉಂಟುಮಾಡುತ್ತದೆ ಎಂಬ ಅಂಶಗಳನ್ನು ಇಲ್ಲಿ ಗುರುತಿಸಿದ್ದಾರೆ.

ಇದರ ಜೊತೆಗೆ ಕನ್ನಡ ಕಾದಂಬರಿಗಳಲ್ಲಿ ವರ್ಗ ಸಂಘರ್ಷ ಸಿದ್ಧನಗೌಡ ಪಾಟೀಲರ ಮಹಾಪ್ರಬಂಧ, ಕನ್ನಡ ಕಾದಂಬರಿಗಳಲ್ಲಿ ವರ್ಗ ಮತ್ತು ವರ್ಣ ಸಂಘರ್ಷ, ಭಂಡಾರಿ

ಆರ್.ವಿ. ಮುಂತಾದವುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಇವುಗಳು ಎಂ.ಫಿಲ್. ಅಥವಾ ಪಿಎಚ್.ಡಿ. ಪದವಿಗಾಗಿ ನಡೆದ ಅಧ್ಯಯನಗಳಾಗಿವೆ.

ಹೀಗೆ ಒಟ್ಟಾರೆ ಕನ್ನಡ ಕಾದಂಬರಿಗಳ ಕುರಿತು ಅನೇಕ ವಿಮರ್ಶಾ ಬರಹಗಳು ಬಂದಿವೆ. ಆದರೆ ಈ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಕುರಿತು ಬಿಡಿ ಬಿಡಿ ಲೇಖನಗಳು ಬಂದಿವೇ ಹೊರತು, ಇವುಗಳ ಪ್ರತ್ಯೇಕವಾದ ಅಧ್ಯಯನಗಳು ನಡೆದಿಲ್ಲ. ಈ ಹಿನ್ನೆಲೆಯಲ್ಲಿ ಕನ್ನಡ ಕಾದಂಬರಿಯಲ್ಲಿ ದುಡಿಯುವ ವರ್ಗದ ಪ್ರಜ್ಞೆಯನ್ನು ಇಲ್ಲಿ ನಿರೂಪಿಸಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಆರ್ಕೆ ಮಣಿಪಾಲ, ೧೯೮೮, **ಸಾಹಿತ್ಯ: ಆಶಯ ಮತ್ತು ವಿನ್ಯಾಸ** ಸಂಕ್ರಮಣ ಪ್ರಕಾಶನ ಧಾರವಾಡ. ಪು. ೧.

೨. ಆರ್ಕೆ ಮಣಿಪಾಲ, ೨೦೦೯, **ವಿಮರ್ಶೆಯ ಸವಾಲು**. ಸಂವಾದ ಪ್ರಕಾಶನ, ಮಣಿಪಾಲ, ಪು. ೧೩.

೩. ಅದೇ, ಪು. ೨೬೩.

೪. ಭಂಡಾರಿ ಆರ್.ವಿ., **ಪ್ರಭುತ್ವ ಮತ್ತು ಸಾಹಿತ್ಯ**

೫. ಅಮೂರ ಜಿ.ಎಸ್., ೨೦೦೬, **ಕನ್ನಡ ಕಥನ ಸಾಹಿತ್ಯ: ಕಾದಂಬರಿ**, ಸಪ್ನ ಬುಕ್ ಹೌಸ್, ಬೆಂಗಳೂರು ಪು. ೯೪.

೬. ನಾರಾಯಣ ಕೆ.ವಿ., ೨೦೧೦. **ತೊಂಡು ಮೇವು**(ಕಂತೆ ಮೂರು), ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು, ಪು. ೧೭೧.

೭. ಅದೇ, ಪು. ೧೭೧.

೮. ಅದೇ, ಪು. ೧೭೧.

೯. ಅರವಿಂದ ಮಾಲಗತ್ತಿ, **ಕಾದಂಬರಿಗಳ ವಿಮರ್ಶೆ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಪು. ೧೦.

೧೦. ಅದೇ, ಪು. ೯.

೧೧. ಅದೇ, ಪು. ೯.

೧೨. ಕೃಷ್ಣ ಮೂರ್ತಿ ಎಂ.ಜಿ., **ಕುವೆಂಪು ಅವರ ಮಲೆಗಳಲ್ಲಿ ಮದುಮಗಳು(ಲೇಖನ)**, ಪು. ೧೪೯.

೧೩. **ಕೃತಿ ವಿಮರ್ಶೆ**, ಪು. ೧೨೪.

೧೪. ಅಮರೇಶ ನುಗುಡೋಣಿ (ಸಂ), ೨೦೧೦, ಗ್ರಾಮಾಯಣ: ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೧೧.

೧೫. ಅದೇ, ಪು. ೧೧೧.

೧೬. ಅದೇ, ಪು. ೬೭.

೧೭. ಅದೇ, ಪು. ೬೫.

೧೮. ಅದೇ, ಪು. ೧೮೦.

***

ಅಧ್ಯಾಯ : ಎರಡು

## ದುಡಿಯುವ ವರ್ಗ : ಪರಿಕಲ್ಪನೆ ಚರ್ಚೆ

ಕನ್ನಡ ಕಾದಂಬರಿಯನ್ನು ಕುರಿತು ಈಗಾಗಲೇ ಸಾಕಷ್ಟು ಅಧ್ಯಯನಗಳು ನಡೆದಿವೆ. ಕಾದಂಬರಿಯ ಹುಟ್ಟು ಬೆಳವಣಿಗೆ, ಅದರ ಪ್ರಭಾವ, ಪ್ರೇರಣೆ, ಕಾದಂಬರಿಯ ವಸ್ತುವಿನ್ಯಾಸ, ಕಾದಂಬರಿಗಳ ಆಶಯ, ಕಾದಂಬರಿಕಾರರ ಆಶಯ ಮುಂತಾದ ಅಯಾಮದಲ್ಲಿ ಅಧ್ಯಯನಗಳು ನಡೆದಿವೆ. ಆದರೆ ಈ ಪ್ರಸ್ತುತ ಅಧ್ಯಯನವು ಕನ್ನಡ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಸ್ವರೂಪವನ್ನು ಚರ್ಚಿಸುವ ಉದ್ದೇಶವನ್ನು ಹೊಂದಿದೆ. ದುಡಿಯುವ ವರ್ಗವು ಚಾರಿತ್ರಿಕವಾಗಿ ನಿರ್ಮಾಣವಾದ ಒಂದು ವರ್ಗವಾಗಿದೆ. ಈ ವರ್ಗವು ನಿರಂತರವಾಗಿ ಬದಲಾಗುತ್ತಾ ಬಂದಿದೆ. ಈ ವರ್ಗವುನ್ನು ಕುರಿತು ವಿವಿಧ ಜ್ಞಾನಶಿಸ್ತುಗಳಲ್ಲಿ ಆಧ್ಯಯನ ನಡೆದಿದೆ, ನಡೆಯುತ್ತಿದೆ. ಅದರಲ್ಲಿ ಸಾಹಿತ್ಯೇತರ ನೆಲೆಗಳು ದುಡಿಯುವ ವರ್ಗದ ಚಾರಿತ್ರಿಕವಾಗಿ ಮತ್ತು ಭೌತಿಕ ಸ್ವರೂಪವನ್ನು ಅದರ ಬಾಹ್ಯ ಹಾಗೂ ಆಂತರಿಕ ವಿನ್ಯಾಸಗಳನ್ನು ಕುರಿತು ಚರ್ಚಿಸಿವೆ. ದುಡಿಯುವ ವರ್ಗ ಎಂದರೆ ಯಾವುದು? ಅದು ಚಾರಿತ್ರಿಕವಾಗಿ ಹೇಗೆ ನಿರ್ಮಾಣವಾಯಿತು? ವರ್ತಮಾನದಲ್ಲಿ ಅದರ ಸ್ಥಿತಿಗತಿಗಳೇನು? ಮುಂದೆ ದುಡಿಯುವ ವರ್ಗವು ದುಡಿಯುವ ವರ್ಗವಾಗಿಯೇ ಮುಂದುವರಿಯುತ್ತದೆಯೊ? ಅಥವಾ ಅದರೊಳಗೆ ಏನಾದರೂ ಬದಲಾವಣೆಗಳು ನಡೆಯುತ್ತವೆಯೇ? ಇವೇ ಮುಂತಾದ ಅಂಶಗಳನ್ನು ಕುರಿತು ರಾಜಕೀಯ ಅರ್ಥಶಾಸ್ತ್ರ ಹಾಗೂ ಸಮಾಜಶಾಸ್ತ್ರದ ಅಧ್ಯಯಗಳಲ್ಲಿ ಸಾಕಷ್ಟು ಚರ್ಚೆಗಳು ನಡೆದಿವೆ. ಹಾಗೆಯೇ ಪ್ರಸ್ತುತ ಈ ಅಧ್ಯಯನದಲ್ಲಿ ಕನ್ನಡ ಕಾದಂಬರಿಗಳು ದುಡಿಯುವ ವರ್ಗವನ್ನು ಕುರಿತು ಮತ್ತು ವರ್ಗ ನಿರಂತರವಾಗಿ ಬದಲಾಗುವಿಕೆಯ ಕುರಿತು ಚರ್ಚಿಸಲಾಗುವುದು.

ಸಮಾಜದ ರಚನೆಗೆ ದುಡಿಯುವ ವರ್ಗವು ಮೂಲ ತಳಹದಿಯಾಗಿದೆ. ಅದಿಲ್ಲದೆ ಸಮಾಜಕ್ಕೆ ಅಸ್ತಿತ್ವವೇ ಇಲ್ಲ ಎಂಬುವಷ್ಟರ ಮಟ್ಟಿನ ಪ್ರಾಮುಖ್ಯತೆ ಅದಕ್ಕಿದೆ. ಈ ದುಡಿಯುವ ವರ್ಗವನ್ನು ಕುರಿತು ಮತ್ತು ದುಡಿಯುವ ವರ್ಗದ ಪರಿಕಲ್ಪನೆ ಕುರಿತಾಗಿ ರಾಜಕೀಯ

ಅರ್ಥಶಾಸ್ತ್ರ ಹಾಗೂ ಸಮಾಜ ಶಾಸ್ತ್ರದ ಅಧ್ಯಯನಗಳು ದುಡಿಯುವ ವರ್ಗದ ಭೌತಿಕ ಸ್ವರೂಪವನ್ನು ಕುರಿತು ಆಲೋಚಿಸಿವೆ. ಆದರೆ ಈ ಅಧ್ಯಯನದಲ್ಲಿ ಕನ್ನಡ ಕಾದಂಬರಿಗಳು ದುಡಿಯುವ ವರ್ಗವನ್ನು ಗ್ರಹಿಸಿರುವ ಕ್ರಮ ಯಾವುದು? ಅದರ ಬಾಹ್ಯ ಮತ್ತು ಆಂತರಿಕ ಆಯಾಮುಗಳನ್ನು ನಿರೂಪಿಸಿರುವ ಹಿತಾಸಕ್ತಿ ಯಾವುದು? ದುಡಿಯುವ ವರ್ಗವು ಹೇಗಿದೆ(ದುಡಿಯುವ ವರ್ಗದ ಇರುವಿಕೆ) ಎಂಬುದರ ಗ್ರಹಿಕೆ ಕಾದಂಬರಿಗಳಿಗೆ ಮುಖ್ಯ ವಾಗಿದೆಯೇ? ಅಥವಾ ದುಡಿಯುವ ವರ್ಗ ಹೇಗಿರಬೇಕು? ಹೇಗಾಗಬೇಕು(ದುಡಿಯುವ ವರ್ಗದ ಆಗುವಿಕೆ) ಎಂಬುದರ ಗ್ರಹಿಕೆ ಕಾದಂಬರಿಗಳಿಗೆ ಮುಖ್ಯವಾಗಿದೆಯೇ ಎಂಬುದನ್ನು ಆಧರಿಸಿ ದುಡಿಯುವ ವರ್ಗದ ಪರಿಕಲ್ಪನೆಯನ್ನು ಪರಿಭಾವಿಸಿಕೊಳ್ಳಲಾಗಿದೆ. ಮುಖ್ಯವಾಗಿ ಈ ಕೆಳಕಂಡ ಎರಡು ಮಾದರಿಗಳಲ್ಲಿ ದುಡಿಯುವ ವರ್ಗದ ಪರಿಲ್ಪನೆಯನ್ನು ಚರ್ಚಿಸಲಾಗುವುದು.

೧. ದುಡಿಯುವ ವರ್ಗದ ಸಾಹಿತ್ಯೇತರ ನೆಲೆಗಳು

೨. ದುಡಿಯುವ ವರ್ಗದ ಸಾಹಿತ್ಯಕ ನೆಲೆಗಳು

**೨.೧. ದುಡಿಯುವ ವರ್ಗದ ಸಾಹಿತ್ಯೇತರ ನೆಲೆಗಳು**

ಸಾಹಿತ್ಯೇತರ ನೆಲೆಗಳಲ್ಲಿ ದುಡಿಯುವ ವರ್ಗದ ಆರ್ಥಿಕ, ಸಾಮಾಜಿಕ, ರಾಜಕೀಯ ನೆಲೆಗಳಲ್ಲಿ ದುಡಿಯುವ ವರ್ಗವನ್ನು ಗ್ರಹಿಸಿರುವ ಮತ್ತು ಅಭಿವ್ಯಕ್ತಿಸಿರುವ ವಿಧಾನವನ್ನು ಚರ್ಚಿಸಲಾಗುವುದು. ಮಾನವರ ವಿಕಾಸವಾದವನ್ನು ಗಮನಿಸಿದರೆ ಮಾನವರು ಒಂದು ಗುಂಪಾಗಿ ಬದುಕುವುದನ್ನು ಕಲಿತರು ಹಾಗೂ ಗೆಡ್ಡೆಗೆಣಸು ಹಣ್ಣು ಹಂಪಲಗಳನ್ನು ತಿನ್ನುತಿದ್ದವರು ವ್ಯವಸಾಯವನ್ನು ಕಲಿತು ಸ್ಥಿರವಾಗಿ ಬದುಕನ್ನು ಕಟ್ಟಿಕೊಂಡರು. ಈ ಮೂಲಕ ಸ್ಥಿರವಾದ ಆಸ್ತಿಯು ಅಸ್ತಿತ್ವಕ್ಕೆ ಬಂದಿತು. ಮೊದಮೊದಲು ಇದು ಎಲ್ಲರಿಗೂ ಸೇರಿದ ಸಾಮುದಾಯಿಕ ಆಸ್ತಿಯಾಗಿತ್ತು. ಇದನ್ನೇ ನಾವು ಆದಿಮ ಸಮಾಜ ಎಂದು ಗುರುತಿಸುತ್ತೇವೆ. ಕಾರಣ ಇಲ್ಲಿ ಆಸ್ತಿವಂತ ಮತ್ತು ಆಸ್ತಿಹೀನ ಎಂಬ ವರ್ಗತಾರತಮ್ಯಗಳು ಇರಲಿಲ್ಲ. ಆದರೆ ಬಲಿಷ್ಠರು ದುರ್ಬಲರನ್ನು ಹಿಂಸೆ ಬಲಾತ್ಕಾರಗಳಿಂದ ಮಣಿಸಿ ಇಡೀ ಸಮಾಜದ ಆಸ್ತಿಯನ್ನು ತಮ್ಮ ಸ್ವಂತ ಆಸ್ತಿಯನ್ನಾಗಿ ಪರಿವರ್ತಿಸಿಕೊಂಡರು. ಈ ಮೂಲಕ ದುರ್ಬಲರನ್ನು ಅಡಿಯಾಳುಗಳನ್ನಾಗಿ ಮಾಡಿಕೊಂಡರು. ಹೀಗೆ ಆಸ್ತಿವಂತ ಹಾಗೂ ಆಸ್ತಿಹೀನರೆಂಬ ಎರಡು ವರ್ಗಗಳು ಸೃಷ್ಟಿಯಾಗಿರುವುದನ್ನು ಕಾಣುತ್ತೇವೆ. ಆಸ್ತಿವಂತರು ತಮ್ಮ ಆಸ್ತಿಯನ್ನು ಕಾಪಾಡಿಕೊಳ್ಳಲು ತಂದ ಅನೇಕ ಶೋಷಣೆಯ ನೀತಿಗಳನ್ನು ಸಮಾಜದ ಮೇಲೆ ಒತ್ತಾಯಪೂರ್ವಕವಾಗಿ ಹೇರಿದರು. ಇದರಿಂದ ಎಲ್ಲ ಸಂಪತ್ತನ್ನು ಸೃಷ್ಟಿಸುವ ಬಹುಸಂಖ್ಯಾತ ಶೋಷಿತರು ಒಂದು ಕಡೆ. ಇವರ ಶ್ರಮದ ಫಲವನ್ನು ಅನುಭವಿಸುವ ಶೋಷಕ ವರ್ಗ ಮತ್ತೊಂದು ಕಡೆ. ಹೀಗೆ ಆಸ್ತಿವಂತರು ಆಸ್ತಿಹೀನರನ್ನು ಶೋಷಣೆ ಮಾಡಿದ್ದರಿಂದ ಆಳುವ ವರ್ಗ ಮತ್ತು ಆಳಿಸಿಕೊಳ್ಳುವ ವರ್ಗಗಳು ಸೃಷ್ಟಿಯಾಗಿರುವುದರ ಚರಿತ್ರೆಯನ್ನು ಕಾಣುತ್ತೇವೆ. ಹಾಗೆಯೇ ಈ ಎರಡು ವರ್ಗಗಳ ನಡುವಿನ ಅಸಮಾನತೆ, ಶೋಷಣೆಯನ್ನು ಮುಖ್ಯವಾಗಿ ಗಮನಿಸಿ ಈ ಎರಡು ವರ್ಗಗಳ ನಡುವಿನ

ವೈರುಧ್ಯತೆ, ಹೊಂದಾಣಿಕೆ ಮತ್ತು ಸಂಘರ್ಷಗಳು ನಡೆಯುತ್ತಿವೆ. ಹೀಗೆ ದುಡಿಯುವ ವರ್ಗ ಮತ್ತು ದುಡಿಸಿಕೊಳ್ಳುವ ವರ್ಗದ ಇತಿಹಾಸವನ್ನು ತಿಳಿದುಕೊಳ್ಳಲು ಸಾಧ್ಯವಾಗಿದೆ.

ಭಾರತದ ಸಾಮಾಜಿಕ ವ್ಯವಸ್ಥೆಯು ಜಾತಿ ಶ್ರೇಣೀಕರಣ, ವರ್ಗ ಶ್ರೇಣೀಕರಣದಿಂದ ಕೂಡಿದೆ. ಕೆಳಜಾತಿ, ಕೆಳವರ್ಗದ ಜನರು ಬಡವರು. ತಮ್ಮ ಹಕ್ಕುಗಳಿಂದ ವಂಚನೆಗೆ ಒಳಗಾಗಿ ಜಾತಿಶೋಷಣೆ ಮತ್ತು ವರ್ಗಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಆದರೆ ಮೇಲ್‌ಜಾತಿ ಬಡವರು ವರ್ಗಶೋಷಣೆಯನ್ನು ಮಾತ್ರ ಅನುಭವಿಸುತ್ತಿದ್ದಾರೆ. ಹೀಗೆ ಶೋಷಣೆಗೆ ಒಳಗಾದ ಜನರನ್ನು ದುಡಿಯುವ ವರ್ಗವೆಂದು ತಾತ್ವೀಕರಿಸಬಹುದು. ಹಾಗೆಯೇ ಇವರ ಶ್ರಮಶಕ್ತಿ ಅಥವಾ ಶ್ರಮಮೌಲ್ಯ ಇಲ್ಲದೆ ಯಾವುದೇ ವಸ್ತು ಪದಾರ್ಥಗಳು ಸೃಷ್ಟಿಯಾಗುವುದಿಲ್ಲ. ಆದ್ದರಿಂದ ಈ ಶ್ರಮಿಕ ವರ್ಗವನ್ನು ಉತ್ಪಾದಕ ವರ್ಗ, ಉತ್ಪಾದಕ ಶಕ್ತಿಗಳು ಅಥವಾ ದುಡಿಯುವ ವರ್ಗ ಎಂದು ಗುರುತಿಸುತ್ತೇವೆ. ಈ ದುಡಿಯುವ ವರ್ಗದವನ್ನು ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿ ವರ್ಗವು ಬಲಾತ್ಕಾರವಾಗಿ ಅನ್ಯಾಯಕ್ಕೆ ಮತ್ತು ಶೋಷಣೆಗೆ ಒಳಗು ಮಾಡಿ ಇವರನ್ನು ದುಡಿಯುವ ವರ್ಗವಾಗಿ ನಿರ್ಮಾಣ ಮಾಡಿದ್ದಾರೆ. ಸಂಪತ್ತಿನ ಒಡೆತನ ಹೊಂದಿರುವ ಭೂಮಾಲೀಕ ವ್ಯವಸ್ಥೆ ಮತ್ತು ಬಂಡವಾಳಶಾಹಿ ವ್ಯವಸ್ಥೆಯು ಈ ಸಂಪತ್ತಿನ ಒಡೆತನವು ಪಲ್ಲಟವಾಗದ ಹಾಗೆ ತಡೆಗಟ್ಟಲು ಅಸಮಾನತೆ, ಅನ್ಯಾಯ, ಶೋಷಣೆಯನ್ನು ನಿರಂತರವಾಗಿ ಸಮಾಜದ ಮೇಲೆ ಹೇರುತ್ತಿರುತ್ತದೆ. ಅದರಲ್ಲಿಯೂ ಉತ್ಪಾದನಾ ಶಕ್ತಿಗಳಾದ ಕೃಷಿ ಕಾರ್ಮಿಕರು, ಬಡರೈತವರ್ಗ, ದಲಿತ ಸಮುದಾಯಗಳು, ಆದಿವಾಸಿ ಸಮುದಾಯಗಳ ಹಕ್ಕುಗಳನ್ನು ವಂಚಿಸಿದ್ದಲ್ಲದೆ, ಅವರನ್ನು ಶ್ರಮಮೌಲ್ಯದ ಶೋಷಣೆಗೆ ಒಳಪಡಿಸಿ ತನ್ನ ಅಸ್ತಿತ್ವವನ್ನು ಕಾಪಾಡಿ ಕೊಂಡಿದೆ. ಆದ್ದರಿಂದ ಶೋಷಣೆಗೆ ಒಳಗಾಗಿ ತನ್ನದಲ್ಲದ ಭೂಮಿಯಲ್ಲಿ ದುಡಿಯುವ ಇವರನ್ನು ದುಡಿಯುವ ವರ್ಗ ಎಂದು ಕರೆಯಬಹುದು.

ಈ ದುಡಿಯುವ ವರ್ಗವನ್ನು ಕುರಿತು ಮಾರ್ಕ್ಸ್ ಮತ್ತು ಏಂಗಲ್ಸ್ ಅವರು ಪ್ರಥಮ ಬಾರಿಗೆ ತಮ್ಮ ಕಮ್ಯೂನಿಸ್ಟ್ ಪ್ರಣಾಳಿಕೆಯಲ್ಲಿ "ಇತಿಹಾಸ ಎಂಬುದು ಗತಕಾಲದ ಹಾಗೂ ಪ್ರಸ್ತುತ ಸಮಾಜದಲ್ಲಿನ ವರ್ಗಹೋರಾಟದ ಇತಿಹಾಸವೇ"[1] ಎಂದು ಗುರುತಿಸಿದ್ದಾರೆ. ಇಲ್ಲಿ ಇವರು ದುಡಿಯುವ ವರ್ಗವನ್ನು ಕೇಂದ್ರವಾಗಿಟ್ಟುಕೊಂಡು ಅವರನ್ನು ಶೋಷಿತ ಸ್ತರದಿಂದ ಬಿಡುಗಡೆಗೊಳಿಸುವ ಆಲೋಚನೆಯಲ್ಲಿ ಎಲ್ಲ ಜಾತಿಯ ಬಡವರು ಎಲ್ಲ ಜಾತಿಯ ಶೋಷಿತರನ್ನು ಸಮಾನರೆಂದು ಗುರುತಿಸಿ ವರ್ಗಹೋರಾಟಕ್ಕೆ ಕರೆ ನೀಡಿರುವುದನ್ನು ಕಾಣಬಹುದು. ಇಲ್ಲಿಂದಲೇ ದುಡಿಯುವ ವರ್ಗದ ದೃಷ್ಟಿಕೋನದ ಮೂಲಕ ಸಮಾಜ ಆಗುಹೋಗುಗಳನ್ನು ಗ್ರಹಿಸಲು ಶುರುವಾಗಿರುವುದನ್ನು ಗುರುತಿಸುತ್ತೇವೆ. ವರ್ಗ, ವರ್ಗಪ್ರಜ್ಞೆ ಮತ್ತು 'ವರ್ಗಹೋರಾಟ' ಎಂಬುದು ಪರಿಕಲ್ಪನೆ ಮಾತ್ರ ಅಲ್ಲ. ಅದು ಸಮಾಜದ ಅಸಾಮಾನ್ಯವಾದ ಕ್ರಿಯೆಯಾಗಿದೆ. ಸಾಮಾನ್ಯವಾಗಿ ವರ್ಗ ಎಂಬ ಪದವನ್ನು ಬಳಸಿದಾಗ ಅದು ಕೇವಲ ಗುಂಪು ಎಂಬರ್ಥದಲ್ಲಿ ಬರಬಹುದು. ಆದರೆ ಮಾರ್ಕ್ಸ್ ಅವರು ಆರ್ಥಿಕ ಶ್ರೇಣೀಕರಣ, ಆರ್ಥಿಕ ಅಸಮಾನತೆ, ಆರ್ಥಿಕ ಸಮಸ್ಯೆಗಳ ಮೂಲಕ ಈ ವರ್ಗದ ಪರಿಕಲ್ಪನೆಯನ್ನು ಚರ್ಚಿಸಿದ್ದಾರೆ.

ಲೆನಿನ್ ವರ್ಗಗಳ ಕುರಿತು "ಅಧಿಕ ಪ್ರಮಾಣದ ವ್ಯಕ್ತಿಗಳನ್ನೊಳಗೊಂಡ ಗುಂಪುಗಳಾಗಿರುವುದು ವರ್ಗ" ಎನಿಸಿಕೊಳ್ಳುತ್ತದೆ ಎಂದಿದ್ದಾರೆ. ಚಾರಿತ್ರಿಕವಾಗಿ ಸಾಮಾಜಿಕ ಉತ್ಪಾದನೆಯು ಒಂದೊಂದು ಹಂತದಲ್ಲಿ ಒಂದೊಂದು ರೀತಿಯಲ್ಲಿರುತ್ತದೆ. ಉತ್ಪಾದನಾ ಸಾಮಗ್ರಿಗಳೊಂದಿಗೆ ವ್ಯಕ್ತಿಯ ಸಂಬಂಧ ಎಂತಹುದು ಎಂಬುದನ್ನಾಧರಿಸಿ ವರ್ಗಗಳು ಭಿನ್ನವಾಗಿರುತ್ತವೆ. ಆ ಸಂಬಂಧಗಳು ಸ್ಥಿರವಾದುದಾಗಿರ ಬಹುದು, ಕಾನೂನಿನಿಂದ ನಿಗದಿತವಾಗಿರಬಹುದು. ದುಡಿಮೆಯು ಸಾಮಾಜಿಕವಾಗಿ ಸಂಘಟಿತ ವಾದಾಗ ವ್ಯಕ್ತಿಯ ಸ್ಥಾನ ಏನಾಗಿರುತ್ತದೋ ಅದು ಅವನ ವರ್ಗವನ್ನು ಸೂಚಿಸುತ್ತದೆ. ಸಹಜವಾಗಿಯೇ ಈ ಸಂಬಂಧಗಳ ಪರಿಣಾಮವಾಗಿ ವ್ಯಕ್ತಿಗೆ ಲಭ್ಯವಾಗುವ ಸಾಮಾಜಿಕ ಸಂಪತ್ತು ಎಷ್ಟೆಂಬುದು ತೀರ್ಮಾನವಾಗುತ್ತದೆ. ಅಂತೆಯೇ ಸಂಪತ್ತನ್ನು ಹೇಗೆ ಕೂಡಿಸಿಕೊಳ್ಳ ಬಹುದೆಂಬುದು ಕೂಡ ನಿರ್ಧಾರವಾಗುತ್ತದೆ. ಜನರ ಎರಡು ಗುಂಪುಗಳಿದ್ದರೆ, ಅದರಲ್ಲಿ ಒಂದು ಇನ್ನೊಂದರ ದುಡಿಮೆಯ ಫಲವನ್ನು ತನ್ನದಾಗಿಸಿಕೊಳ್ಳುವ ಸಾಧ್ಯತೆ ಇದ್ದರೆ, ಅವನ್ನು ವರ್ಗಗಳು ಎನ್ನಬಹುದು. ಹೀಗೆ ಮಾಡಲು ಸಾಧ್ಯವಾಗಿಸಿಕೊಳ್ಳುವುದು ಹೇಗೆ? ಆಯಾ ಕಾಲದ ಸಾಮಾಜಿಕ ಆರ್ಥಿಕತೆಯು ಆ ಗುಂಪುಗಳಿಗೆ ಪ್ರತ್ಯೇಕ ಸ್ಥಾನಗಳನ್ನು ಗುರುತಿಸಿಕೊಟ್ಟಿರುತ್ತದೆ. ಅದೇ ಅವರ ವರ್ಗ ಪ್ರತ್ಯೇಕತೆ ಎನಿಸಿಕೊಳ್ಳುತ್ತದೆ"[3] ಎಂದಿದ್ದಾರೆ. ಮಾರ್ಕ್ಸ್‌ಗಿಂತ ಹಿಂದೆಯೇ ರಾಜಕೀಯ ಅರ್ಥಶಾಸ್ತ್ರಜ್ಞರು ದುಡಿಮೆ ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಅವರ ಪ್ರಕಾರ ದುಡಿಮೆಯೇ ಸಕಲ ಸಂಪತ್ತಿನ ಮೂಲವೆಂದು ಗುರುತಿಸಿದ್ದಾರೆ.

ಪ್ರಕೃತಿಯು ಒದಗಿಸುವ ಸಾಮಗ್ರಿಗಳನ್ನು ಸಂಪತ್ತನ್ನಾಗಿಸಿ ಮಾರ್ಪಡಿಸುವ ಸಾಧನವೆಂದರೆ ದುಡಿಮೆಯೇ ಸರಿ. ಅಷ್ಟೇ ಅಲ್ಲ, ಮಾನವನ ಎಲ್ಲ ಇರುವಿಕೆಗೆ ದುಡಿಮೆಯೇ ಮೊಟ್ಟಮೊದಲ ಮೂಲ ಆಧಾರ. ಒಂದರ್ಥದಲ್ಲಿ ದುಡಿಮೆಯೇ ಮನುಷ್ಯನನ್ನು ಸೃಷ್ಟಿಸಿತೆಂದು ಗುರುತಿಸಿದ್ದಾರೆ. ಆರ್ಥಿಕ ಪದ್ಧತಿಯ ಪರಿಶೋಧನೆ ನಡೆಸಿದ ಆ್ಯಡಂಸ್ಮಿತ್ ಹಾಗೂ ಡೇವಿಡ್ ರೇಕಾರ್ಡ್ ಅವರು ಮೌಲ್ಯದ ಶ್ರಮ ಸಿದ್ಧಾಂತಕ್ಕೆ ಅಡಿಪಾಯ ಹಾಕಿಕೊಟ್ಟರು. ಈ ಕಾರ್ಯವನ್ನು ಮಾರ್ಕ್ಸ್ ಅವರು ಮುಂದುವರಿಸಿದರು. ಅವರ ಸಿದ್ಧಾಂತದ ಸಮರ್ಪಕತೆಯನ್ನು ನಿಷ್ಠುರತೆಯಿಂದ ಸಾಧಿಸಿ ತೋರಿಸಿ ಮತ್ತು ಅದನ್ನು ಸುಸಂಗತವಾಗಿ ಅಭಿವೃದ್ಧಿಗೊಳಿಸಿದರು. ಪ್ರತಿಯೊಂದು ವಸ್ತುವಿನ ಮೌಲ್ಯವು ಅದರ ಉತ್ಪಾದನೆಯಲ್ಲಿ ಖರ್ಚು ಮಾಡಲಾದ ಸಾಮಾಜಿಕವಾಗಿ ಅವಶ್ಯವಾದ ಶ್ರಮ, ಸಮಯ, ಪ್ರಮಾಣದಿಂದ ನಿರ್ಧರಿಸಲ್ಪಡುತ್ತದೆ ಎಂದು ಗುರುತಿಸಿದ್ದಾರೆ. ಅರ್ಥಶಾಸ್ತ್ರಜ್ಞರು ವಸ್ತುಗಳ ನಡುವೆ ಸಂಬಂಧವನ್ನು ಕಂಡುಕೊಂಡರೆ ಮಾರ್ಕ್ಸ್ ಅವರು ಜನರ ನಡುವಿನ ಸಂಬಂಧವನ್ನು ಗುರುತಿಸಿದ್ದಾರೆ. ಮಾನವನ ಶ್ರಮಶಕ್ತಿಯು ಒಂದು ಸರಕಾಗುವುದನ್ನು, ಪ್ರತಿಯೊಂದು ವಸ್ತುವಿನ ಮೌಲ್ಯವು ಅದರ ಉತ್ಪಾದನೆಯಲ್ಲಿ ಖರ್ಚು ಮಾಡಲಾದ ಸಾಮಾಜಿಕವಾಗಿ ಅವಶ್ಯವಾದ ಶ್ರಮ, ಸಮಯ, ಪ್ರಮಾಣದಿಂದ ನಿರ್ಧರಿಸಲ್ಪಡುತ್ತದೆ ಎಂದು ಗುರುತಿಸಿದ್ದಾರೆ. ಅರ್ಥಶಾಸ್ತ್ರಜ್ಞರು ವಸ್ತುಗಳ ನಡುವೆ ಸಂಬಂಧವನ್ನು ಕಂಡುಕೊಂಡರೆ ಮಾರ್ಕ್ಸ್ ಅವರು ಜನರ ನಡುವಿನ ಸಂಬಂಧವನ್ನು ಗುರುತಿಸಿದ್ದಾರೆ. ಮಾನವನ ಶ್ರಮ ಶಕ್ತಿಯು ಒಂದು ಸರಕಾಗುವುದನ್ನು

ಬಂಡವಾಳವು ಸೂಚಿಸುತ್ತದೆ. ಕೂಲಿ ಕಾರ್ಮಿಕನು ತನ್ನ ಶ್ರಮಶಕ್ತಿಯನ್ನು ಭೂಮಿಯ ಕಾರ್ಖಾನೆಗಳ ಹಾಗೂ ಶ್ರಮ ಸಾಧನಗಳನ್ನು ಮಾಲೀಕನಿಗೆ ಮಾರುತ್ತಾನೆ. ಕಾರ್ಮಿಕನು ದಿನದಲ್ಲಿ ಒಂದು ಭಾಗವನ್ನು ತನ್ನನ್ನು ತನ್ನ ಕುಟುಂಬವನ್ನು ಪೋಷಿಸಿಕೊಂಡಿರಲು ತಗಲುವ ಖರ್ಚನ್ನು (ಕೂಲಿಯನ್ನು) ಸಂಪಾದಿಸುವುದರಲ್ಲಿ ಕಳೆಯುತ್ತಾನೆ ಎಂದು ಚರ್ಚಿಸುತ್ತಾರೆ. ಬಂಡವಾಳಗಾರನಿಗೆ ಮಿಗುತಾಯ ಮೌಲ್ಯವನ್ನು ಲಾಭದ ಆಕರವನ್ನು ಬಂಡವಾಳಶಾಹಿ ವರ್ಗದ ಸಂಪತ್ತಿನ ಆಕರವನ್ನು ಸೃಜಿಸುತ್ತಾನೆ. ಈ ಬೆಳವಣಿಗೆಯನ್ನು ಕುರಿತು ಮಾರ್ಕ್ಸ್ ವರ್ಗಹೋರಾಟವು ಸಮಾಜವಾದಕ್ಕೆ ಕೊಂಡೊಯ್ಯುವ ಹಾದಿ ಎನ್ನುತ್ತಾರೆ. ಹೀಗೆ ವರ್ಗಗಳನ್ನು ಭೌತಿಕವಾದದ ನಿಯಮದಡಿಯಲ್ಲಿ ಮಾರ್ಕ್ಸ್ ಅವರು ವಿಶ್ಲೇಷಣೆ ಮಾಡಿರುವುದನ್ನು ಕಾಣುತ್ತೇವೆ. ಹಿಂದೆ ಭೂಮಿಯ ಮೇಲಿನ ಸಾಮೂಹಿಕ ಒಡೆತನವಿತ್ತು. ಈ ಒಡೆತನವು ಕ್ಷೀಣಿಸುತ್ತ ಬಂದಿದ್ದರಿಂದ ಇದರ ಪರಿಣಾಮ ಉತ್ಪಾದನಾ ವಿಧಾನವು ಜನಸಮೂಹವನ್ನು ವರ್ಗಗಳನ್ನಾಗಿ ವಿಭಾಗಿಸಿ ಆಳುವ ವರ್ಗ ಮತ್ತು ಆಳಿಸಿಕೊಳ್ಳುವ ವರ್ಗಗಳಾಗಿ ಮಾರ್ಪಟ್ಟವು ಎಂದು ಏಂಗೆಲ್ಸ್ ಗುರುತಿಸಿದ್ದಾರೆ. ಇಲ್ಲಿ ಉತ್ಪಾದನೆಯ ವಿಧಾನದಲ್ಲಿ ಆಳುವ ವರ್ಗದ ಹಿತಾಸಕ್ತಿಗಳು ಉತ್ಪಾದನೆಯ ಚಲನಾಶಕ್ತಿಗಳಾಗಿರುವುದರಿಂದ ದುಡಿಯುವವರು ಮತ್ತು ದುಡಿಸಿಕೊಳ್ಳುವ ವರ್ಗಗಳಾಗಿ ಪರಿವರ್ತನೆಯಾದವು ಎಂದು ಅಭಿಪ್ರಾಯ ಪಡುತ್ತಾರೆ. ಹೀಗೆ ದುಡಿಯುವ ವರ್ಗ, ದುಡಿಸಿಕೊಳ್ಳುವ ವರ್ಗವನ್ನು ಕುರಿತು ಸೈದ್ಧಾಂತಿಕವಾಗಿ ವಿವರಿಸಿರುವುದನ್ನು ಕಾಣುತ್ತೇವೆ. ಆದ್ದರಿಂದ ಈ ಎಲ್ಲ ಬೆಳವಣಿಗೆಯನ್ನು ಕುರಿತು ಲೆನಿನ್ 'ಬೆಳವಣಿಗೆ ಎಂಬುದು ವಿರೋಧಗಳ ಸಂಘರ್ಷವಾಗಿದೆ'[೩] ಎಂದಿದ್ದಾರೆ.

ಹೀಗೆ ವರ್ಗ ಮತ್ತು ಅದರ ಸಂಬಂಧಿತ ಪರಿಕಲ್ಪನೆಗಳನ್ನು ವರ್ಗಸಂರಚನೆ, ವರ್ಗಹೋರಾಟ, ವರ್ಗರಚನೆ, ವರ್ಗ ರಾಜಿ(ಹೊಂದಾಣಿಕೆ) ಹೀಗೆ ವಿವಿಧ ಪರಿಭಾಷೆಯಿಂದ ವಿಶ್ಲೇಷಣೆ ಮಾಡಬಹುದು. ಆರ್ಥಿಕ ಅಸಮಾನತೆಯ ಕಾರಣದಿಂದ ಕೆಳವರ್ಗ, ಮಧ್ಯಮವರ್ಗ, ಶ್ರೀಮಂತವರ್ಗ ಎಂದು ವಿಭಾಗಿಸಿ ಚರ್ಚಿಸುವುದನ್ನು ಕಾಣುತ್ತೇವೆ. ಇಲ್ಲಿ ಮಧ್ಯಮ ವರ್ಗವು ವಾಸ್ತವವಾಗಿ ಒಂದು ವಿಭಾಗವನ್ನು ಸೂಚಿಸುತ್ತದೆ. ಇಲ್ಲಿ ಸಣ್ಣ ಬಂಡವಾಳಶಾಹಿ ಮತ್ತು ಕನಿಷ್ಠ ಭೂಮಿಯ ಒಡೆತನ ಹೊಂದಿರುವ, ಹೆಚ್ಚಿನ ವೇತನ ಪಡೆಯುವ ಕೆಲಸಗಾರರನ್ನು ಗುರುತಿಸಬಹುದು. ಇವರು ಬಂಡವಾಳಶಾಹಿ ವರ್ಗದ ಹಿತಾಸಕ್ತಿಗಳನ್ನು ತನ್ನ ವರ್ಗದ ಹಿತಾಸಕ್ತಿಗಳಾಗಿ ಸ್ವೀಕರಿಸುತ್ತಾರೆ. ಕೆಳವರ್ಗದ ಹಕ್ಕಿನ ಪ್ರಶ್ನೆ ಬಂದಾಗ ಮೇಲ್ವರ್ಗದ ಜೊತೆ ಕೈಜೋಡಿಸಿ ದುಡಿಯುವ ವರ್ಗದ ವಿರುದ್ಧ ನಿಲ್ಲುತ್ತದೆ. ಕಾರ್ಮಿಕ ವರ್ಗವು ತನ್ನ ಹಕ್ಕುಗಳಿಗಾಗಿ ಒತ್ತಾಯಿಸಿದಾಗ ಅಥವಾ ವರ್ಗ ಶೋಷಣೆಯ ವಿರುದ್ಧ ಹೋರಾಟಕ್ಕೆ ಇಳಿದಾಗ ಈ ಹೋರಾಟ ವರ್ಗರಹಿತ ವ್ಯವಸ್ಥೆಯ ಬೆಳವಣಿಗೆ ಕಾರಣವಾಗುತ್ತದೆ ಎಂದು ವರ್ಗಸಂಧಾನಕ್ಕೆ ಆಳುವವರ್ಗ ಮುಂದಾಗುತ್ತದೆ.

ವಸಾಹತುಶಾಹಿ ಪೂರ್ವಭಾರತವು ತನ್ನದೇ ಆದ ಉತ್ಪಾದನಾ ವಿಧಾನದ ಮೂಲಕ ತನ್ನದೇ ಆದ ನಿರ್ದಿಷ್ಟ ಸಾಮಾಜಿಕ, ಆರ್ಥಿಕ ವ್ಯವಸ್ಥೆಯನ್ನು ಹೊಂದಿದ್ದನ್ನು ಕಾಣಬಹುದು. ವಿಶಾಲವಾದ ಸ್ವಾವಲಂಬಿ ಹಾಗೂ ಕೃಷಿ ಸಂಬಂಧಗಳ ಮೂಲಕ ತನ್ನದೇ ಆದ ಉತ್ಪಾದನಾ ಚಟುವಟಿಕೆಗಳನ್ನು ಮಾಡಿಕೊಂಡು ಬಂದಿದೆ. ಈ ಸಂದರ್ಭದ ಊಳಿಗಮಾನ್ಯಶಾಹಿ ಸಮಾಜವು ಜಾತಿಶ್ರೇಣೀಕರಣ ಮತ್ತು ವರ್ಗ ಶ್ರೇಣೀಕರಣಗಳಿಂದ ಕೂಡಿದ್ದು ಜಮೀನು ಇರುವವರು ಭೂಮಾಲೀಕರು ಇವರು ಕೆಳಜಾತಿ ಕೆಳವರ್ಗದ ಜನರ ಹಕ್ಕುಗಳನ್ನು ಕಿತ್ತುಕೊಂಡು ಶ್ರೀಮಂತ ವರ್ಗವಾಗಿ ಪರಿವರ್ತನೆಯಾಗಿದ್ದಾರೆ. ಈ ವರ್ಗತಾರತಮ್ಯ ಕುರಿತು ಸಾಹಿತ್ಯ ಮತ್ತು ಸಮಾಜಶಾಸ್ತ್ರದ ಬರವಣಿಗೆಗಳು ಚರ್ಚಿಸುತ್ತಲೇ ಬಂದಿವೆ. ಅದರಲ್ಲಿಯೂ ವರ್ಣ, ಜಾತಿ, ವರ್ಗಗಳ ಕುರಿತು ಅನೇಕ ಬರವಣಿಗೆಗಳಿವೆ. ಇಲ್ಲಿ ಜಾತಿ ಮತ್ತು ವರ್ಣವ್ಯವಸ್ಥೆಯನ್ನು ಕುರಿತು ಬರವಣಿಗೆಗಳು ವರ್ಗಪರಿಧಿಯನ್ನು ಬಿಟ್ಟು ನಿರೂಪಿಸಿರುವುದೇ ಹೆಚ್ಚು. ವರ್ಗ ಅಸಮಾನತೆಯನ್ನು ಮುಚ್ಚಿಡಲು ತನ್ನದೇ ಆದ ವರ್ಣ, ಜಾತಿ ತಿಳುವಳಿಕೆಗಳನ್ನು ಸಮಾಜದಲ್ಲಿ ಹರಡುತ್ತಿರುತ್ತದೆ.

**ಭಾರತೀಯ ಸಮಾಜದಲ್ಲಿ ವರ್ಗ ವಿಶ್ಲೇಷಣೆ**

ಭಾರತದ ಪ್ರಸ್ತುತ ಸಮಾಜದಲ್ಲಿ ನವವಸಾಹತು ವ್ಯವಸ್ಥೆಯನ್ನು ಗುರುತಿಸಬಹುದು. ಈ ಸಮಾಜದಲ್ಲಿ ಶ್ರಮಜೀವಿ ವರ್ಗ ಮತ್ತು ರೈತಾಪಿ ವರ್ಗ ಎಲ್ಲಾ ವರ್ಗಕ್ಕಿಂತ ಹೆಚ್ಚು ಶೋಷಣೆಗೆ ಒಳಗಾದ ವರ್ಗಗಳಾಗಿವೆ. ಕಳೆದ ದಶಕಗಳಲ್ಲಿ ಈ ವರ್ಗಗಳಲ್ಲಿ ಗುರುತರವಾದ ಬದಲಾವಣೆಗಳಾಗಿವೆ. ಈ ಬದಲಾವಣೆಯನ್ನು ಪರಿಗಣಿಸಿ ಈ ಕೆಳಕಂಡಂತೆ ವರ್ಗ ವಿಶ್ಲೇಷಣೆ ಮಾಡಬಹುದು.

೨.೧.೧. **ದಲ್ಲಾಳಿ ಅಧಿಕಾರರೂಢ ಬಂಡವಾಳಶಾಹಿ ವರ್ಗ:** ಆಳುವ ವರ್ಗದ ಮುಂದಾಳತ್ವದ ವರ್ಗವನ್ನು ದಲ್ಲಾಳಿ ಅಧಿಕಾರರೂಢ ಬಂಡವಾಳಶಾಹಿ ವರ್ಗ ಎಂದು ಗುರುತ್ತಿಸಬಹುದು. ಈ ವರ್ಗಗಳು ಸಾಮ್ರಾಜ್ಯವಾದದೊಂದಿಗೆ ಸಂಬಂಧವನ್ನು ಹೊಂದಿರುತ್ತವೆ. ಭಾರತದ ದೊಡ್ಡ ಬಂಡವಾಳಶಾಹಿ ಹಾಗೂ ಅಧಿಕಾರಶಾಹಿ ವರ್ಗಗಳು ಸಾಮ್ರಾಜ್ಯಶಾಹಿಯ ವೈರುಧ್ಯತೆಗಳನ್ನು ತಮ್ಮ ಲಾಭಕ್ಕಾಗಿ ಬಳಸಿಕೊಳ್ಳುತ್ತವೆ. ಇದರ ಜೊತೆಗೆ ಸಾಮ್ರಾಜ್ಯಶಾಹಿಯೊಂದಿಗೆ ಶಾಮೀಲಾಗಿರುವುದು ಇದರ ಗುಣ ಸ್ವಭಾವವಾಗಿದೆ. ಬಂಡವಾಳಶಾಹಿ ಪೂರ್ವ ಉತ್ಪಾದನಾ ಸಂಬಂಧಗಳೊಂದಿಗೆ ಕೈಕುಲುಕಿಸಿ, ದೇಶದಲ್ಲಿ ಸ್ವತಂತ್ರ ಉತ್ಪಾದಕ ಶಕ್ತಿಗಳ ಬೆಳವಣಿಗೆಗೆ ಅಡ್ಡಿಯಾಗಿರುವುದರಿಂದ ಇದನ್ನು ಸಮಾಜವಾದದ ಕಿರಿಯ ಶಾಮೀಲುದಾರ ಶಕ್ತಿ ಅಥವಾ ಅವಲಂಬಿತ ಬೂರ್ಜ್ವಾ ಎಂದು ಕರೆಯಬಹುದು. ಇದರ ಮೂಲಭೂತ ಸ್ವಭಾವ ಎಂದರೆ ಸಾಮ್ರಾಜ್ಯಶಾಹಿಗೆ ಸೇವೆ ಮಾಡುವ ದಲ್ಲಾಳಿತನವನ್ನು ಹೊಂದಿದೆ. ಈ ವರ್ಗಗಳು ದುಡಿಯುವ ವರ್ಗದ ಹಕ್ಕಿನ ಪ್ರಶ್ನೆ ಬಂದಾಗ ಸಾಮ್ರಾಜ್ಯಶಾಹಿಗಳ ಜೊತೆ ಒಂದಾಗಿ ದುಡಿಯುವ ವರ್ಗದ ಹೋರಾಟವನ್ನು ಹತ್ತಿಕ್ಕುವ ಕೆಲಸ ಮಾಡುತ್ತದೆ. ದುಡಿಯುವ ವರ್ಗದ ಎಲ್ಲ ಹಕ್ಕುಗಳನ್ನು ತನ್ನ ಹಿತಾಸಕ್ತಿಗೆ ಪೂರಕವಾಗಿ ಮಾಡಿಕೊಂಡು ಬಂದಿರುವ ಆಳುವ ಶಕ್ತಿಯಾಗಿ ಗುರುತಿಸಬಹುದು.

೨.೧.೨. **ದೊಡ್ಡ ಭೂಮಾಲೀಕ ವರ್ಗ:** ಇವರು ಊಳಿಗಮಾನ್ಯ ದೊರೆಗಳ ವಾರಸುದಾರರು. ಬ್ರಿಟಿಷ್ ವಸಾಹತುಶಾಹಿಗಳ ಜೊತೆ ಸೇರಿ ಭಾರತದ ಕೃಷಿಯನ್ನು ಬಂಡವಾಳಶಾಹಿ ವ್ಯವಸ್ಥೆಗೆ ಬಲಿಕೊಟ್ಟ ವರ್ಗವಿದು. ಬ್ರಿಟೀಷರು ತಂದ ರೈತವಾರಿ ಜಮೀನ್ದಾರಿ ಪದ್ಧತಿಯ ಜಾರಿಗೆ ಬೆಂಬಲಿಸಿ ಕೃಷಿ ಆರ್ಥಿಕ ನೀತಿಯ ಅಡಿಯಲ್ಲಿ ತಮ್ಮ ವರ್ಗವನ್ನು ಗಟ್ಟಿಗೊಳಿಸಿಕೊಂಡ ವರ್ಗವಿದು. ಈ ವರ್ಗ ಸಾವಿರಾರು ಎಕರೆ ಭೂಮಿಯನ್ನು ಹೊಂದಿದೆ ಮತ್ತು ಕೃಷಿರಂಗದ ಬದಲಾವಣೆಗೆ ಸದಾ ಅಡ್ಡಿಯುಂಟು ಮಾಡುತ್ತದೆ. ಭೂಸುಧಾರಣೆ, ಭೂಮಿತಿ ಕಾಯ್ದೆಯು ಜಾರಿಯಾದ ನಂತರವೂ ತಮ್ಮ ಭೂಮಿಯ ಒಡೆತನವನ್ನು ಉಳಿಸಿಕೊಂಡು ಸಾಮ್ರಾಜ್ಯಶಾಹಿ ಮಾರುಕಟ್ಟೆಯ ಹಿತಕ್ಕೆ ತಕ್ಕಂತೆ ಭೂಮಿಯ ಹಿಡುವಳಿ ಬದಲಾಗಬೇಕೆಂಬುವವರು ಈ ವರ್ಗದವರೇ. ಇವರು ದೇಶದ ಇಡೀ ಜನಸಂಖ್ಯೆಯಲ್ಲಿ ಶೇ. ೧೦%ರಷ್ಟು ಇದ್ದು ಇಡೀ ಭೂಮಿಯಲ್ಲಿ ಶೇ. ೩೦ರಿಂದ ಶೇ. ೪೫ರವರೆಗೆ ಭೂಮಿಯನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದಾರೆ. ಈ ವರ್ಗವು ವಿದೇಶಿ ಬಂಡವಾಳ, ವಿದೇಶಿ ಮಾರುಕಟ್ಟೆಯನ್ನು ಈ ದೇಶದಲ್ಲಿ ಪ್ರಾರಂಭಿಸಲು ಪ್ರೋತ್ಸಾಹ ನೀಡುತ್ತಿರುತ್ತದೆ. ಈ ವರ್ಗವು ದೊಡ್ಡ ಪ್ರಮಾಣದ ಕೃಷಿ ಕೂಲಿಗಳು, ದಲಿತರು, ಕಾರ್ಮಿಕ ವರ್ಗದವರು ಇವರ ಭೂಮಿಯಲ್ಲಿ ದುಡಿಯುವ ವರ್ಗವಾಗಿ ದುಡಿಸಿಕೊಳ್ಳುತ್ತಿದ್ದಾರೆ. ದುಡಿಯುವ ವರ್ಗದ ಎಲ್ಲ ಹಕ್ಕುಗಳನ್ನು ವಂಚಿಸಿದ ವರ್ಗ ಇದು. ಶ್ರಮಿಕ ವರ್ಗದ ಶ್ರಮಮೌಲ್ಯ ಶೋಷಣೆ ವರ್ಗಶೋಷಣೆ ಮಾಡುತ್ತಿರುವ ಶೋಷಕವರ್ಗವಾಗಿ ಈ ಭಾರಿ ಭೂಮಾಲೀಕ ವರ್ಗವನ್ನು ಗುರುತಿಸಬಹುದು.

೨.೧.೩. **ರಾಷ್ಟ್ರೀಯ ಬಂಡವಾಳಶಾಹಿ ವರ್ಗ:** ಇಂದು ಹಣಕಾಸು ಬಂಡವಾಳ ಮತ್ತು ಮಾರುಕಟ್ಟೆ ತಂತ್ರಜ್ಞಾನದ ಮೂಲಕ ದೇಶದ ಎಲ್ಲಾ ವಲಯದ ಮೇಲೆ ಹಕ್ಕನ್ನು ಚಲಾಯಿಸುತ್ತಿರುವ ವರ್ಗವೇ ಬಹುರಾಷ್ಟ್ರೀಯ ಕಂಪನಿಗಳು. ಕಾರ್ಪೋರೇಟ್ ಕುಟುಂಬಗಳೆಂದರೆ ಭಾರತದ ದಲ್ಲಾಳಿ ಬಂಡವಾಳಿಶಾಹಿಗಳು ನವವಸಾಹತು ಮಾರುಕಟ್ಟೆಗೆ ಅನುಕೂಲವಾಗುವಂತ ಹೊಸ ಕೃಷಿ ನೀತಿ ಹೆಸರಲ್ಲಿ ಭೂಮಿ, ಭೂಸಂಪನ್ಮೂಲ, ಬೀಜ, ಗೊಬ್ಬರ, ಕೃಷಿ ಸಲಕರಣೆ, ಸಂಶೋಧನೆ, ರಫ್ತು-ಆಮದು ಇತ್ಯಾದಿ ಚಟುವಟಿಕೆಗಳ ಮೂಲಕ ಭಾರತದ ಕೃಷಿರಂಗದ ಮೇಲೆ ದೊಡ್ಡ ದಾಳಿ ಮಾಡುತ್ತಿರುವ ವರ್ಗವಿದು. ಸಾಮ್ರಾಜ್ಯಶಾಹಿ ಶೋಷಣೆಯೊಂದಿಗೆ ನೇರವಾಗಿ ಕೈಜೋಡಿಸಿರುವ ವರ್ಗವಿದು. ಹೊಸ ಅಭಿವೃದ್ಧಿ ಆರ್ಥಿಕ ನೀತಿಗಳ ಹೆಸರಲ್ಲಿ ವಿಶೇಷ ಆರ್ಥಿಕ ವಲಯ, ವಿಶೇಷ ರಫ್ತು ವಲಯ, ಭೂ ಅಭಿವೃದ್ಧಿ ಮುಂತಾದ ಹೆಸರಲ್ಲಿ ಭೂಮಿಯನ್ನು ಈ ವರ್ಗ ಕಬಳಿಸುತ್ತದೆ ಹಾಗೂ ಆಹಾರದ ಬೆಳೆಯುವ ಜಾಗದಲ್ಲಿ ಕೈಗಾರಿಕೋದ್ಯಮ ಸ್ಥಾಪಿಸುವ ವರ್ಗವಿದು. ಭಾರತದ ಕೃಷಿಯ ಉತ್ಪಾದನಾ ಪ್ರಮಾಣವು ಕಡಿಮೆಯಾಗಲು ಈ ವರ್ಗವೇ ಕಾರಣವಾಗಿದೆ. ಇದನ್ನು ಕಾರ್ಮಿಕ ವರ್ಗ, ರೈತವರ್ಗ, ದಲಿತ ವರ್ಗ, ಆದಿವಾಸಿಗಳು ಹೀಗೆ ದುಡಿಯುವ ದೊಡ್ಡ ಸಮುದಾಯಗಳನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡು ಅವರ ಶ್ರಮ ಶೋಷಣೆ ಮಾಡುವ ಆಳುವ ವರ್ಗವಾಗಿ

ಗುರುತಿಸಬಹುದು. ಈ ವರ್ಗವು ದುಡಿಯುವ ವರ್ಗದ ಶ್ರಮದಿಂದ ಉತ್ಪಾದನೆಯಾಗುವ ವಸ್ತುಗಳು ಮೇಲೆ ಹಕ್ಕನ್ನು ಹೊಂದಿರುತ್ತದೆ. ಈ ವರ್ಗವು ವರ್ಗಶೋಷಣೆ ಮಾಡುವುದರಿಂದ ಅಸಮಾನತೆ, ಅನ್ಯಾಯಗಳು ಹೆಚ್ಚು ಹೆಚ್ಚು ನಡೆಯಲು ಕಾರಣವಾದ ಶೋಷಕ ವರ್ಗವಾಗಿ ಗುರುತಿಸಬಹುದು.

**೨.೧.೪. ಚಿಲ್ಲರೆ ಬಂಡವಾಳಶಾಹಿ ವರ್ಗ:** ಸಾಮ್ರಾಜ್ಯಶಾಹಿ ಜಾಗತೀಕರಣದ ಪರಿಣಾಮ ಎಲ್ಲ ಕ್ಷೇತ್ರಗಳ ಮೇಲೆ ಪ್ರಭಾವ ಆದ ನಂತರ ಅದರಲ್ಲೂ ಸಾಂಸ್ಕೃತಿಕ ಕ್ಷೇತ್ರವು ಇದರ ಪ್ರಭಾವಕ್ಕೆ ಒಳಗಾದ ಮೇಲೆ, ಇದರ ಸ್ವಭಾವ. ಹೊಯ್ದಾಟ ಹಾಗೂ ಭ್ರಮೆಗಳಿಂದ ತುಂಬಿ ಹೋಗಿದೆ. ಇದರಿಂದ ಕೆಳಮಧ್ಯಮವರ್ಗವು ಇದರ ಪರಿಣಾಮದಿಂದ ಕೆಲಸ ಮತ್ತು ಆಸ್ತಿಯನ್ನು ಕಳೆದುಕೊಂಡು ಸಂತ್ರಸ್ತರಾಗಿದ್ದಾರೆ. ಇದರ ಮೂಲ ಉದ್ದೇಶ ಲಾಭಕ್ಕಾಗಿ ಹೂಡಿಕೆ ಮಾಡುವಂತಹ ವಾತಾವರಣವನ್ನು ನಿರ್ಮಾಣ ಮಾಡುತ್ತಿರುತ್ತದೆ. ಜೊತೆಗೆ ಒಳ್ಳೆಯ ಶಿಕ್ಷಣ ಕೊಡಿಸಬೇಕು, ಸಗಟು ಬಂಡವಾಳ ಸ್ನೇಹ ಮಾಡಬೇಕು ಎಂದು ಮಧ್ಯಮವರ್ಗವನ್ನು ತನ್ನ ಹಿತಾಸಕ್ತಿಗೆ ಒಳಪಡಿಸುತ್ತಿರುತ್ತದೆ. ಹಾಗೆಯೆ ಜಾತಿವಾದಿ, ಕೋಮುವಾದಿ, ಧಾರ್ಮಿಕ ಮೂಲಭೂತವಾದಿ ಚಟುವಟಿಕೆಯನ್ನು ಸಕ್ರಿಯವಾಗಿ ಈ ವರ್ಗ ಹರಡುತ್ತಿರುತ್ತದೆ. ಈ ಮೂಲಕ ಕ್ರಾಂತ್ರಿಕಾರಿತನವನ್ನು ಕಳೆದುಕೊಂಡು ಆಳುವ ವರ್ಗದ ಹಿತಾಸಕ್ತಿಯ ಕಡೆಗೆ ಈ ವರ್ಗವು ಚಲಿಸುತ್ತದೆ. ಹೀಗೆ ಕೆಳಮಧ್ಯಮವರ್ಗವು ಇದರ ನೇರ ಸ್ವಭಾವವನ್ನು ಹೊಂದಿರುತ್ತದೆ. ಈ ವರ್ಗವು ದುಡಿಯುವ ವರ್ಗವನ್ನು ಶೋಷಣೆ ಮಾಡುತ್ತಲೇ ಬೆಳೆಯುತ್ತಿರುವುದನ್ನು ಗುರುತಿಸಬಹುದು.

**೨.೧.೫. ಭೂಹೀನ ವರ್ಗ:** ಈ ವರ್ಗವು ದುಡಿಯುವ ವರ್ಗವಾಗಿದೆ. ತನ್ನ ಹಕ್ಕುಗಳನ್ನು ಕಳೆದುಕೊಂಡು ಮೇಲ್ವರ್ಗದ ಶೋಷಣೆಗೆ ಒಳಗಾಗಿರುವ ವರ್ಗ ಇದಾಗಿದೆ. ಈ ವರ್ಗದವರೇ ಭೂಮಿಯ ನಿಜವಾದ ಉಳುಮೆದಾರರು. ಯಾಕೆಂದರೆ, ಇವರಿಗೂ ಭೂಮಿಗೂ ಅವಿನಾಭಾವ ಸಂಬಂಧ ಇದೆ. ಇಲ್ಲಿ ದಲಿತ, ಆದಿವಾಸಿಗಳು ಹಾಗೂ ಅತ್ಯಂತ ಹಿಂದುಳಿದ ವರ್ಗಗಳನ್ನು ಇಲ್ಲಿ ಗುರುತಿಸಬಹುದು. ಈ ವರ್ಗಗಳು ಮೇಲ್ವರ್ಗದಿಂದ ದಮನಿತವಾದ ಸಮೂಹವಾಗಿದೆ. ತನ್ನದಲ್ಲದ ಭೂಮಿಯಲ್ಲಿ ದುಡಿಯುತ್ತಿರುವ ಶ್ರಮಜೀವಿಗಳು, ಮೇಲ್ವರ್ಗವು ಈ ವರ್ಗವನ್ನು ಶ್ರಮಮೌಲ್ಯ ಶೋಷಣೆ ಮಾಡುವುದರ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಿರುತ್ತದೆ. ಈ ವರ್ಗವು ತನ್ನ ಮೇಲೆ ನಡೆಯುತ್ತಿರುವ ಮೇಲುವರ್ಗದ ಶೋಷಣೆಯನ್ನು ಪ್ರತಿಭಟಿಸುತ್ತದೆ. ಈ ಎರಡು ವರ್ಗಗಳ ನಡುವೆ ಹೊಂದಾಣಿಕೆ ಇರುವುದಿಲ್ಲ. ಬದಲಿಗೆ ವೈರುಧ್ಯತೆ ಇರುವುದನ್ನು ಗುರುತಿಸಬಹುದು.

**೨.೧.೬. ಬಡ ರೈತವರ್ಗ:** ಭೂಹೀನ ರೈತರೆಂದರೇ ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾಗಿ ಗೇಣಿ ಭೂಮಿಯಲ್ಲಿ ಕೃಷಿ ಮಾಡುವ ಶ್ರಮಜೀವಿ ವರ್ಗ. ಹಾಗೆಯೇ ಬಡ ರೈತ ವರ್ಗವು ತುಂಡುಭೂಮಿ ಬಿಟ್ಟರೇ, ಕೃಷಿ ಸಲಕರಣೆಗಳಾಗಲೀ ಕೃಷಿಯಲ್ಲಿ ಹೂಡುವ

ಬಂಡವಾಳವಾಗಲಿ ಇಲ್ಲದೇ ಇರುವ ವರ್ಗ. ಈ ಎರಡು ವರ್ಗಗಳು ಭೂಮಾಲೀಕ ವರ್ಗದ ಹಾಗೂ ಬಂಡವಾಳಶಾಹಿ ವರ್ಗದ ಶೋಷಣೆಗೆ ಒಳಗಾಗಿವೆ. ಇವರು ಹಸಿವನ್ನು ಎದುರಿಸಲು ತಮ್ಮದಲ್ಲದ ಭೂಮಿಯಲ್ಲಿ ದುಡಿಯುವ ಶ್ರಮಿಕ ವರ್ಗ. ಈ ವರ್ಗವು ಭೂಮಿಯನ್ನು ವಂಚಿಸಿರುವ ಭೂಮಾಲೀಕ ವರ್ಗದ ವಿರುದ್ಧ ಭೂಮಿಯ ಹಕ್ಕಿಗಾಗಿ ಹೋರಾಡುತ್ತಿರುವ ದುಡಿಯುವ ವರ್ಗವಾಗಿ ಗುರುತಿಸಬಹುದು.

೨.೧.೭. **ಕೃಷಿ ಕಾರ್ಮಿಕ ವರ್ಗ:** ಬ್ರಿಟಿಷ್ ಸಾಮ್ರಾಜ್ಯಶಾಹಿ ದೇಶದ ಸ್ವಾವಲಂಬಿ ಕೃಷಿ ಪದ್ಧತಿಯನ್ನು ನಾಶ ಮಾಡಿದ ನಂತರದ ಹಸಿರುಕ್ರಾಂತಿಯ ಪರಿಣಾಮವಾಗಿ ಕೃಷಿ ಕಸುಬು ಹಾಗೂ ಭೂಮಿ ಹಕ್ಕಿನಿಂದ ವಂಚನೆಗೊಳಗಾದ ವರ್ಗವೇ ಕೃಷಿ ಕಾರ್ಮಿಕ ವರ್ಗ. ಈ ವರ್ಗವೇ ಭೂಮಿಯ ನಿಜವಾದ ಉಳುಮೆ ಮಾಡುವ ವರ್ಗ. ಇಲ್ಲಿ ಆದಿವಾಸಿಗಳು, ದಲಿತರು ಹಾಗೂ ಅತ್ಯಂತ ಹಿಂದುಳಿದ ವರ್ಗಗಳು ಸೇರಿರುವ ದಮನಿತ ಜನಸಮೂಹವಿದು. ಊಳಿಗಮಾನ್ಯಶಾಹಿ ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿ ವರ್ಗಗಳು ಇವರ ಭೂಮಿಯನ್ನು ಅಕ್ರಮವಾಗಿ ಕಿತ್ತುಕೊಂಡು ಅವರನ್ನು ಹೊಲಗದ್ದೆಗಳಲ್ಲಿ ದುಡಿಸಿ, ಅವರ ಶ್ರಮಮೌಲ್ಯ ಶೋಷಣೆ ಮಾಡುತ್ತದೆ. ಇದರಿಂದ ಈ ಭೂಮಾಲೀಕ ವರ್ಗ ಭೂಮಿಯ ಹಕ್ಕನ್ನು ಅಕ್ರಮವಾಗಿ ಸಂಪಾದಿಸಿ ಆ ಭೂಮಿಯಲ್ಲಿ ದುಡಿಯುವ ಕೃಷಿ ಕಾರ್ಮಿಕರು ತಮ್ಮ ಹಕ್ಕುಗಳನ್ನು ಕಳೆದುಕೊಂಡು ಹಸಿವು, ಅಪಮಾನಕ್ಕೆ ಒಳಗಾಗಿ ಭೂಹೀನರಾಗಿ ದುಡಿಯುತ್ತಿದ್ದಾರೆ. ಇವರ ಭೂಮಿಯ ಹಕ್ಕಿಗಾಗಿ ವರ್ಗ ಶೋಷಣೆಯ ವಿರುದ್ಧ ಪ್ರತಿಭಟಿಸುವ ದುಡಿಯುವ ವರ್ಗವಾಗಿ ಗುರುತಿಸಬಹುದು.

**ಕೃಷಿ ರಂಗದಲ್ಲಿ ವರ್ಗವಿಶ್ಲೇಷಣೆ**

ಕೃಷಿ ವಲಯದಲ್ಲಿ ಭೂಮಿಯ ಮಾಲೀಕತ್ವ ಮತ್ತು ಕೃಷಿಕಾರ್ಮಿಕರ ನಡುವಿನ ಭೂಸಂಬಂಧಗಳ ಮೂಲಕ ವರ್ಗಗಳನ್ನು ಗುರುತಿಸಬಹುದು. ಭೂಮಿಯ ಹಕ್ಕನ್ನು ಹೊಂದಿರುವವರು ಭೂಮಿಯ ಒಡೆಯರಾದರೆ ಭೂಮಿಯ ಹಕ್ಕಿನಿಂದ ವಂಚನೆಗೊಳಗಾದ ಕೃಷಿ ಕಾರ್ಮಿಕರು, ದಲಿತರು, ಆದಿವಾಸಿಗಳನ್ನು ಉತ್ಪಾದನಾ ಶಕ್ತಿಗಳಾಗಿ ಗುರುತಿಸಬಹುದು. ಈ ಉತ್ಪಾದಕ ಶಕ್ತಿಗಳನ್ನು ದುಡಿಯುವ ವರ್ಗವೆಂದು ಕರೆದುಕೊಳ್ಳಬಹುದು.

೧. **ಕೃಷಿ ಕಾರ್ಮಿಕ ವರ್ಗ:** ಬ್ರಿಟಿಷ್ ಸಾಮ್ರಾಜ್ಯಶಾಹಿ ದೇಶದ ಸ್ವಾವಲಂಬಿ ಕೃಷಿ ಪದ್ಧತಿಯನ್ನು ನಾಶ ಮಾಡಿದ ನಂತರದ ಹಸಿರುಕ್ರಾಂತಿಯ ಪರಿಣಾಮವಾಗಿ ಕೃಷಿ ಕಸಬು ಹಾಗೂ ಭೂಮಿ ಹಕ್ಕಿನಿಂದ ವಂಚನೆಗೊಳಗಾಗಿದ ವರ್ಗವೇ ಕೃಷಿ ಕಾರ್ಮಿಕ ವರ್ಗ. ಊಳಿಗಮಾನ್ಯಶಾಹಿ ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿ ವರ್ಗಗಳು ಈ ಕೃಷಿಕಾರ್ಮಿಕ ವರ್ಗದ ಭೂಮಿಯನ್ನು ಅಕ್ರಮವಾಗಿ ಕಿತ್ತುಕೊಂಡು ಅವರನ್ನು ಹೊಲಗದ್ದೆಗಳಲ್ಲಿ ದುಡಿಸಿ ಅವರ ಶ್ರಮಮೌಲ್ಯ ಶೋಷಣೆ ಮಾಡಿದೆ. ಇದರಿಂದ ಈ ಭೂಮಾಲೀಕ ವರ್ಗ ಭೂಮಿಯ

ಹಕ್ಕನ್ನು ಅಕ್ರಮವಾಗಿ ಸಂಪಾದಿಸಿ ಆ ಭೂಮಿಯಲ್ಲಿ ದುಡಿಯುವ ಕೃಷಿ ಕಾರ್ಮಿಕರು ತಮ್ಮ ಹಕ್ಕುಗಳನ್ನು ಕಳೆದುಕೊಂಡು ಹಸಿವು, ಅಪಮಾನಕ್ಕೆ ಒಳಗಾಗಿ ಭೂಹೀನರಾಗಿ ದುಡಿಯುತ್ತಿದ್ದಾರೆ. ಇವರನ್ನು ಭೂಮಿಯ ಹಕ್ಕಿಗಾಗಿ ವರ್ಗ ಶೋಷಣೆಯ ವಿರುದ್ಧ ಪ್ರತಿಭಟಿಸುವ ದುಡಿಯುವ ವರ್ಗವಾಗಿ ಗುರುತಿಸಬಹುದು.

೨. **ಮಧ್ಯಮ ತರಗತಿಯ ರೈತವರ್ಗ:** ಭೂಹೀನ ಹಾಗೂ ಬಡರೈತರ ಆಚೆಗೆ ಹಾಗೂ ಶ್ರೀಮಂತ ರೈತರ ಈಚೆಗೆ ಇರುವ ವರ್ಗವೇ ಮಧ್ಯಮತರಗತಿಯ ರೈತವರ್ಗ. ಈ ವರ್ಗವು ಭೂಮಿಯ ಹಕ್ಕನ್ನು ಹೊಂದಿರುವ ವರ್ಗವಾಗಿದೆ. ಇವರು ಭೂಹೀನ ಬಡರೈತರು ಹಾಗೂ ಕೃಷಿ ಕೂಲಿಗಳ ದಲಿತ ವರ್ಗದವರನ್ನು ತಮ್ಮ ಭೂಮಿಯಲ್ಲಿ ದುಡಿಸಿಕೊಂಡು ಅತ್ತ ಶ್ರೀಮಂತ ವರ್ಗದ ಕಡೆ ಸಾಗದೆ ಇತ್ತ ಭೂಹೀನ ವರ್ಗದ ಕಡೆ ವಾಲದೆ ಇರುವ ವರ್ಗ. ಇವರು ಕೃಷಿಯ ಜೊತೆಗೆ ವ್ಯಾಪಾರದಲ್ಲಿ ಬಂಡವಾಳ ಹೂಡುತ್ತಿರುವ ಮೇಲ್ವರ್ಗದ ಹಿತಾಸಕ್ತಿ ಹೊಂದಿರುವ ವರ್ಗವಾಗಿ ಗುರುತಿಸಬಹುದು. ಈ ವರ್ಗವು ಶ್ರಮಿಕ ವರ್ಗವನ್ನು ನಿರಂತರವಾಗಿ ಶೋಷಣೆಯನ್ನು ಮಾಡುವ ವರ್ಗವಾಗಿ ಗುರುತಿಸಬಹುದು.

೩. **ಶ್ರೀಮಂತ ರೈತವರ್ಗ:** ಮಧ್ಯಮವರ್ಗದ ಆಚೆಗೆ ಹಾಗೂ ಭಾರೀ ಭೂಮಾಲೀಕ ವರ್ಗದ ಈಚೆಗೆ ಇರುವ ವರ್ಗವಿದು. ತಾವು ದುಡಿಯದೇ ಕೃಷಿ ಕಾರ್ಮಿಕರು, ಭೂಹೀನ ಬಡವರು ಹಾಗೂ ದಲಿತವರ್ಗ, ಆದಿವಾಸಿಗಳನ್ನು ಭೂಮಿಯ ಹಕ್ಕಿನಿಂದ ವಂಚಿಸಿ ತಮ್ಮ ಭೂಮಿಯಲ್ಲಿ ದುಡಿಸಿಕೊಳ್ಳುವುದು. ದುಡಿಯುವ ಶ್ರಮಜೀವಿಗಳ ಶ್ರಮ ಮೌಲ್ಯ ಶೋಷಣೆ ಮಾಡಿದ ಶ್ರೀಮಂತ ವರ್ಗವಾಗಿ ಇದನ್ನು ಗುರುತಿಸಬಹುದು. ಕೃಷಿ ಸಲಕರಣೆ, ಗೊಬ್ಬರ, ಬೀಜದಂತಹ ಚಿಲ್ಲರೆ ಕೃಷಿ ವ್ಯಾಪಾರವು ಈ ವರ್ಗದ ಮತ್ತೊಂದು ಕಸುಬಾಗಿದೆ. ಕೃಷಿ ವ್ಯಾಪಾರ ಮತ್ತು ಕೃಷಿ ರಫ್ತು ಇವರ ಆಧುನಿಕ ಲಾಭದ ವಿಧಾನಗಳು. ಈ ವರ್ಗವು ದೊಡ್ಡ ಭೂಮಾಲೀಕ ವರ್ಗ ಹಾಗೂ ಸಾಮ್ರಾಜ್ಯಶಾಹಿ ಎದುರು ತನಗೆ ಸರಿಯಾದ ಪಾಲು ಹಾಗೂ ಅವಕಾಶ ಸಿಕ್ಕಿಲ್ಲ ಎಂದು ಮುಸುಕಿನ ಗುದ್ದಾಟ ಮಾಡುತ್ತದೆ. ಇದಕ್ಕೆ ತಾನೇ ನೇರವಾಗಿ ಬೀದಿಗಿಳಿಯದೇ ತನ್ನ ಸಮಸ್ಯೆಯನ್ನು ಬಡರೈತರ ಸಮಸ್ಯೆ ಎಂದು ಅವರನ್ನು ನಂಬಿಸಿ ಅವರನ್ನು ಎತ್ತಿ ಕಟ್ಟುತ್ತದೆ. ಭೂಹೀನ, ಶ್ರಮಿಕರು, ದಲಿತರು, ಆದಿವಾಸಿಗಳ ಭೂಮಿಯ ಹಕ್ಕಿನ ಪ್ರಶ್ನೆ ಬಂದಾಗ ಆಳುವ ವರ್ಗದ ಜೊತೆ ಸೇರಿ ದುಡಿಯುವ ವರ್ಗವನ್ನು ಶೋಷಣೆ ಮಾಡುವ ಆಳುವ ವರ್ಗವಾಗಿ ನಿಲ್ಲುವುದನ್ನು ಗುರುತಿಸಬಹುದು.

**ಕೈಗಾರಿಕಾ ವಲಯದಲ್ಲಿ ವರ್ಗ ವಿಶ್ಲೇಷಣೆ**

**ಕಾರ್ಮಿಕ ವರ್ಗ:** ಈ ವರ್ಗವು ಕೈಗಾರಿಕಾ ವಲಯದಲ್ಲಿ ದುಡಿಯುವ ಉತ್ಪಾದಕ ಶಕ್ತಿಯಾಗಿದೆ. ಇಲ್ಲಿ ಈ ಕಾರ್ಮಿಕ ವರ್ಗದ ಶ್ರಮವಿಲ್ಲದೆ ಯಾವುದೆ ಮಾನವ ನಿರ್ಮಿತ ವಸ್ತುಗಳು ಉತ್ಪಾದನೆಯಾಗಲು ಸಾಧ್ಯವಿಲ್ಲ. ಹಾಗಾಗಿ ಈ ವರ್ಗವು ಸಮಾಜದ ಮುಖ್ಯವಾದ

ಭಾಗವಾಗಿ ಕೆಲಸ ಮಾಡುತ್ತಿರುತ್ತದೆ. ಆದರೆ ಈ ವರ್ಗವು ಮಾಲೀಕ ವರ್ಗದ ಶೋಷಣೆಗೆ ಒಳಗಾಗಿದೆ. ಈ ವರ್ಗವನ್ನು ಬಂಡವಾಳಶಾಹಿ ನಿರಂತರವಾಗಿ ಶೋಷಣೆ ಮಾಡುತ್ತ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ಈ ಶ್ರಮಜೀವಿ ವರ್ಗ ಮತ್ತು ಮಾಲೀಕ ವರ್ಗಗಳ ನಡುವೆ ಒಂದಿಲ್ಲ ಒಂದು ಸಂಘರ್ಷಗಳು ನಡೆಯುತ್ತಿರುತ್ತವೆ. ಮಾಲೀಕ ವರ್ಗದ ಶೋಷಣೆಯ ವಿರುದ್ಧ ನಿರಂತರವಾಗಿ ಈ ವರ್ಗ ಹೋರಾಡುತ್ತಿರುತ್ತದೆ. ಬಂಡವಾಳಶಾಹಿ ವರ್ಗದ ಅಧೀನದಲ್ಲಿರುವ ಸಂಸ್ಥೆಗಳಲ್ಲಿ ಸಂಬಳ ಅಥವಾ ವೇತನದ ಮೂಲಕ ದುಡಿಯುವ ಶ್ರಮಿಕರನ್ನು ಕಾರ್ಮಿಕ ವರ್ಗವೆಂದು ಗುರುತಿಸುತ್ತೇವೆ. ಶಿಕ್ಷಕರು, ಉಪನ್ಯಾಸಕರು, ಸರ್ಕಾರಿ ನೌಕರರು, ಕಾರ್ಖಾನೆಗಳಲ್ಲಿ ದುಡಿಯುವ ಶ್ರಮಜೀವಿಗಳನ್ನು ನಾವು ಕಾರ್ಮಿಕ ವರ್ಗ ಎಂದು ಕರೆದುಕೊಳ್ಳಬೇಕು. ಈ ವರ್ಗವು ಬಂಡವಾಳಶಾಹಿ ಸಂಸ್ಥೆಯ ಮಾಲೀಕನ ಶ್ರಮಮೌಲ್ಯ ಶೋಷಣೆ ಒಳಗಾಗಿ ವರ್ಗವಾಗಿರುತ್ತದೆ. ಈ ವಲಯದಲ್ಲಿ ಸಂಘಟಿತ ಕಾರ್ಮಿಕರು ಮತ್ತು ಅಸಂಘಟಿತ ಕಾರ್ಮಿಕ ವರ್ಗವನ್ನು ಸಹ ಗುರುತಿಸಬಹುದು. ಈ ಎರಡು ವರ್ಗಗಳು ಬಂಡವಾಳಶಾಹಿ ವರ್ಗದ ವಿರುದ್ಧ ಸಮಾನ ವೇತನಕ್ಕಾಗಿ ಒತ್ತಾಯಿಸುತ್ತವೆ. ಇಲ್ಲಿ ಸಂಘಟಿತ ಕಾರ್ಮಿಕ ವರ್ಗ ಮತ್ತು ಅಸಂಘಟಿತ ಕಾರ್ಮಿಕ ವರ್ಗವನ್ನು ಕಾಣುತ್ತೇವೆ. ಈ ಎರಡು ವರ್ಗಗಳು ಬಂಡವಾಳಶಾಹಿ ವ್ಯವಸ್ಥೆಯ ಶೋಷಣೆಯ ವಿರುದ್ಧ ಹೋರಾಡುತ್ತವೆ.

**ಮಧ್ಯಮವರ್ಗ:** ಈ ವರ್ಗವು ವಾಸ್ತವವಾಗಿ ಒಂದು ಆರ್ಥಿಕ ವಿಭಾಗವನ್ನು ಸೂಚಿಸುತ್ತದೆ. ಈ ವರ್ಗವನ್ನು ಸಣ್ಣ ಬಂಡವಾಳಶಾಹಿ ವರ್ಗ ಎಂದು ಗುರುತಿಸಬಹುದು. ಮಾರುಕಟ್ಟೆಯಲ್ಲಿ ವ್ಯಾಪಾರ ಮಾಡುವ, ಹೆಚ್ಚಿನ ವೇತನ ಗಳಿಸುವ ಕಾರ್ಮಿಕ ವರ್ಗವನ್ನು ಮಧ್ಯಮವರ್ಗವಾಗಿ ಗುರುತಿಸಬಹುದು. ಈ ವರ್ಗವು ಕೆಳವರ್ಗದ ಪ್ರಶ್ನೆ ಬಂದಾಗ ಶ್ರೀಮಂತವರ್ಗದ ಪರವಾಗಿ ನಿಲ್ಲುತ್ತದೆ. ಕೆಳಸ್ತರದ ಸಣ್ಣ ವರ್ತಕರು, ಅಂಗಡಿಯವರು ಮತ್ತು ರೈತರನ್ನು ಈ ವರ್ಗದ ಪ್ರತಿನಿಧಿಗಳಾಗಿ ಗುರುತಿಸಬಹುದು.

**ಬಂಡವಾಳಶಾಹಿ ವರ್ಗ:** ಬಂಡವಾಳ ವರ್ಗವು ಕಾರ್ಮಿಕರ ಎಲ್ಲಾ ಹಕ್ಕುಗಳನ್ನು ವಂಚಿಸಿ ಬೆಳೆಯುತ್ತಿರುತ್ತದೆ. ಆದ್ದರಿಂದ ಬಂಡವಾಳಶಾಹಿ ವರ್ಗದ ಅಭಿವೃದ್ಧಿ ಎಂದರೆ ಕಾರ್ಮಿಕ ವರ್ಗದ ಶ್ರಮಮೌಲ್ಯ ಶೋಷಣೆ ಆಗುತ್ತಿದೆ ಎಂದರ್ಥ. ಈ ವರ್ಗವು ಕೆಳವರ್ಗ ಮತ್ತು ಮಧ್ಯಮವರ್ಗದವನ್ನು ಶೋಷಣೆ ಮಾಡುತ್ತಿರುತ್ತದೆ. ಈ ವರ್ಗವು ಯಜಮಾನಿಕೆಯ ಪರಿಕಲ್ಪನೆ ಹೊಂದಿರುತ್ತದೆ. ದಬ್ಬಾಳಿಕೆಯ ಮೂಲಕ ನೇರ ನಿರಂಕುಶಾಧಿಕಾರ ಬಳಕೆಯನ್ನು ಮಾಡುತ್ತಿರುತ್ತದೆ. ದಬ್ಬಾಳಿಕೆ ಈ ವರ್ಗದ ರಕ್ಷಾಕವಚ. ನಿರಂತರವಾಗಿ ಕಾರ್ಮಿಕರ ಮೇಲೆ ವರ್ಗ ಹೋರಾಟವನ್ನು ನಿಯಂತ್ರಿಸಲು ಸಕ್ರಿಯವಾಗಿ ಈ ಕ್ರಿಯೆಯಲ್ಲಿ ತೊಡಗಿರುತ್ತದೆ. ಕಾರ್ಮಿಕ ವರ್ಗದವರು ತನ್ನ ವರ್ಗದ ಹಿತಾಸಕ್ತಿಯಾಗಿ ಭಾಗವಾಗಬೇಕು ಎನ್ನುತ್ತದೆ. ಈ ವರ್ಗದ ಶ್ರಮ ಶೋಷಣೆಯ ವಿರುದ್ಧ ಕಾರ್ಮಿಕ ವರ್ಗ ಪ್ರತಿಭಟನೆ ಮಾಡುತ್ತಿರುತ್ತದೆ.

ಒಟ್ಟಾರೆಯಾಗಿ ದುಡಿಯುವ ವರ್ಗವೆಂದರೆ ಒಂದು ನಿರ್ದಿಷ್ಟವಾದ ಉತ್ಪಾದನಾ ವಿಧಾನದಲ್ಲಿ ನಾವು ಎಲ್ಲಿ ನಿಲ್ಲುತ್ತೇವೆಂಬುವುದಕ್ಕೆ ಸಂಬಂಧಿಸಿದ ಪ್ರಶ್ನೆಯಾಗಿದೆ. ಉತ್ಪಾದನಾ ವಿಧಾನದಲ್ಲಿ ಗುಲಾಮರಾಗಿರುವರೋ, ಸ್ವಯಂ ಉದ್ಯೋಗದ ರೈತಾಪಿಗಳಾಗಿದ್ದಾರೋ, ಹಣಕಾಸಿನ ವಹಿವಾಟುದಾರರೋ, ಚಿಲ್ಲರೆ ವ್ಯಾಪಾರದ ಮಾಲೀಕರೋ ಅಥವಾ ಶ್ರಮಶಕ್ತಿಯನ್ನು ಮಾರುವ ಕಾರ್ಮಿಕರೋ, ಭೂಮಿಯ ಮಾಲೀಕರೋ, ಭೂಹೀನರೋ ಎಂಬುದನ್ನು ಆಧಾರಿಸಿಯೇ ವರ್ಗದ ನೆಲೆ ನಿರ್ಧಾರವಾಗುವುದು. ಹಾಗೆಯೇ ಜಾತಿ-ವರ್ಗಗಳು ಪರಸ್ಪರ ಒಂದರೊಳಗೆ ಇನ್ನೊಂದು ಹೆಣೆದುಕೊಂಡಿರುತ್ತವೆ. ವರ್ಗಗಳೊಳಗೆ ಹಲವು ಜಾತಿಗಳಿವೆ. ಪ್ರತಿ ಜಾತಿಯೊಳಗೂ ವರ್ಗಗಳಿವೆ. ಇದನ್ನು ಈ ಶ್ರೇಣೀಕರಣ ವ್ಯವಸ್ಥೆಯಲ್ಲಿ ಗುರುತಿಸಬಹುದು. ಜಾತಿ ಶ್ರೇಣೀಕರಣದ ವ್ಯವಸ್ಥೆಯ ಅತ್ಯಂತ ಕೆಳಸ್ತರದಲ್ಲಿ ದಲಿತವರ್ಗ ಮತ್ತು ಆದಿವಾಸಿ ಸಮುದಾಯಗಳನ್ನು ಗುರುತಿಸಬಹುದು. ಈ ವರ್ಗಗಳು ಆರ್ಥಿಕ ಶೋಷಣೆ ಮತ್ತು ಸಾಮಾಜಿಕ ದಮನಗಳಿಗೆ ಈಡಾಗುತ್ತಿರುತ್ತದೆ. ಆದ್ದರಿಂದ ಜಾತಿ ಮತ್ತು ವರ್ಗಗಳನ್ನು ಕುರಿತು ಬಂದಿರುವ ಬರಹಗಳು ಜಾತಿ ಅಸ್ಪೃಶ್ಯತಾವಿರೋಧಿ ಹೋರಾಟ ವರ್ಗಹೋರಾಟದ ಭಾಗವಾಗಬೇಕು ಎಂದು ತಿಳಿಸುತ್ತಿವೆ. ಹೀಗೆ ವರ್ಗ ಮತ್ತು ಜಾತಿ ಸಮಸ್ಯೆಗಳನ್ನು ಉತ್ಪಾದನಾ ವಿಧಾನದ ಮೂಲಕ ಗುರುತಿಸುವುದು ಅಗತ್ಯ. ಜಾತಿಶೋಷಣೆ, ವರ್ಗಶೋಷಣೆಗೆ ಒಳಗಾದ ಸಮುದಾಯಗಳು, ಶ್ರಮಿಕರು ಮತ್ತು ಇವರ ಶ್ರಮದಿಂದಲೇ ವಸ್ತು ಪದಾರ್ಥಗಳು ಸೃಷ್ಟಿ ಅಗುವುದು. ಆದ್ದರಿಂದ ಈ ವರ್ಗಗಳನ್ನು ದುಡಿಯುವ ವರ್ಗವೆಂದ ತಾತ್ವೀಕರಿಸಬಹುದು.

### ೨.೨. ದುಡಿಯುವ ವರ್ಗದ ಸಾಹಿತ್ಯಕ ನೆಲೆಗಳು

ಭಾರತದ ಸಮಾಜವನ್ನು ಅಧ್ಯಯನ ಮಾಡುವಾಗ ಸಮಾಜದ ಉತ್ಪಾದನಾ ಸಂಬಂಧಗಳು, ವರ್ಗಗಳು, ಅವುಗಳ ಪರಸ್ಪರ ಸಂಬಂಧಗಳನ್ನು ಅಧ್ಯಯನ ಮಾಡಬೇಕಾಗಿದೆ. ಉತ್ಪಾದಕ ಶಕ್ತಿಯಾದ ಭೂಮಿಯ ಮಾಲೀಕತ್ವವನ್ನು ಹೊಂದಿರುವವರು ಭೂಮಾಲೀಕರಾಗಿದ್ದಾರೆ. ಇವರ ಭೂಮಿಯಲ್ಲಿ ದುಡಿಯುವ ಕೃಷಿ ಕಾರ್ಮಿಕರು ಭೂಮಿಯ ಹಕ್ಕನ್ನು ಕಳೆದುಕೊಂಡು ಭೂಹೀನರಾಗಿದ್ದಾರೆ. ಹೀಗೆ ಸಂಪತ್ತು ಸಮಾಜದ ಕೆಲವೇ ವ್ಯಕ್ತಿಗಳಲ್ಲಿ ಕೇಂದ್ರೀಕೃತವಾಗಿ ಶೋಷಕ ಮತ್ತು ಶೋಷಿತ ವರ್ಗಗಳು ನಿರ್ಮಾಣವಾಗಿವೆ. ಹೀಗೆ 'ಮನುಷ್ಯ-ಮನುಷ್ಯರ ನಡುವೆ ಏರ್ಪಡುವ ಅಸಮಾನತೆಯ ಸಾಮಾಜಿಕ ಸಂಬಂಧವು ಉತ್ಪಾದಕ ಶಕ್ತಿಗಳ ಮೇಲೆ ಸಾಧಿಸಿದ ಹತೋಟಿ ಮೂಲದ್ದಾಗಿದೆ"[೪] ಎಂಬುದನ್ನು ಇಲ್ಲಿ ಗಮನಿಸಬಹುದು. "ಭೂಮಿಯ ಒಡೆತನ ಯಾರಿಗಿದೆಯೋ ಅವರು ಭೂಮಾಲೀಕರು, ಭೂ ಒಡೆಯರು, ಸಾಹುಕಾರರು, ದಣಿಗಳು. ಭೂಮಿಯ ಒಡೆತನ ಯಾರಿಗಿಲ್ಲವೋ ಅವರು ಕೂಲಿ ಕಾರ್ಮಿಕರು, ಕೆಲಸಗಾರರು, ಆಳುಗಳು ಭೂಮಿಯೊಂದಿಗಿನ ಈ ಸಂಬಂಧವನ್ನು ಅವಲಂಬಿಸಿ ಆಳು-ಒಡೆಯ ಸಂಬಂಧಗಳು ನಿರ್ಮಾಣವಾಗಿವೆ. ಅವು ಇನ್ನೂ ಮುಂದುವರಿದಿವೆ."[೫] ಈ ಸಾಮಾಜಿಕ ವೈರುಧ್ಯತೆಯನ್ನು ಮಾರ್ಕ್ಸ್ ಅವರು ಇತಿಹಾಸವೆಂಬುದು ಗತಕಾಲದ ಹಾಗೂ ಪ್ರಸ್ತುತ ಸಮಾಜದಲ್ಲಿನ ವರ್ಗ

ಹೋರಾಟದ ಇತಿಹಾಸವೇ"[5] ಎಂದು ಗುರುತಿಸಿದ್ದಾರೆ. ಹೀಗೆ ಆಳುವವರ ಮತ್ತು ಆಳಿಸಿಕೊಳ್ಳುವವರ ನಡುವಿನ ವೈರುಧ್ಯತೆಯನ್ನು ಕನ್ನಡ ಕಾದಂಬರಿ ಸಾಹಿತ್ಯ ಹೇಗೆ ಗ್ರಹಿಸಿದೆ ಮತ್ತು ಅಭಿವ್ಯಕ್ತಿಸಿದೆ ಎಂಬುದನ್ನು ಅಧ್ಯಯನದಲ್ಲಿ ಚರ್ಚಿಸಲಾಗುವುದು.

ಸಾಹಿತ್ಯದ ಪರಂಪರೆಯನ್ನು ಗಮನಿಸಿದರೆ ನಮಗೆ ಸಿಕ್ಕಿರುವ ಲಿಖಿತ ರೂಪದ ಬರವಣಿಗೆಯಿಂದ ಇಲ್ಲಿಯ ತನಕ ವರ್ಗ ಅಸಮಾನತೆಯ, ಸಂಪತ್ತಿನ ಅಸಮಾನತೆಯ ವರ್ಗಶೋಷಣೆಯ, ಜಾತಿಶೋಷಣೆ ಮುಂತಾದ ವಸ್ತುವಿಷಯಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಅಭಿವ್ಯಕ್ತಿಸುತ್ತಾ ಬಂದಿದೆ. ಊಳಿಗಮಾನ್ಯಶಾಹಿ ಸಮಾಜದ ಶ್ರಮವಿಭಜನೆಯಿಂದ ಇಂದಿನ ಸರಕು ಸಂಸ್ಕೃತಿಯವರೆಗೆ ವೈಚಾರಿಕ ನಿಲುವುಗಳನ್ನು ಪ್ರಕಟಿಸಿರುವುದನ್ನು ಕಾಣುತ್ತೇವೆ. ಕನ್ನಡದಲ್ಲಿ ೧೦ನೇ ಶತಮಾನದಿಂದ ೧೨ನೇ ಶತಮಾನದ ಅವಧಿಯನ್ನು ನೋಡುವುದಾದರೆ, ಈ ಕಾಲದಲ್ಲಿ ರಚನೆಯಾದ ಸಾಹಿತ್ಯವು ಆಳುವ ವರ್ಗ ಅಥವಾ ಪ್ರಭುತ್ವವನ್ನು ವೈಭವೀಕರಿಸಿ ಬರೆದಿರುವುದೇ ಹೆಚ್ಚು. ಏಕೆಂದರೆ ಆ ಕಾಲದ ಪ್ರಭುತ್ವವು ಬರಹಗಾರರನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ತನ್ನ ವರ್ಗದ ಹಿತಾಸಕ್ತಿಗಾಗಿ ಸಾಹಿತ್ಯವನ್ನು ಬರೆಯುವಂತಹ ರಾಜಾಜ್ಞೆ ಇರುವುದರಿಂದ ಹೆಚ್ಚಿನ ಕೃತಿಗಳು ಆಳುವ ವರ್ಗದ ರಾಜಕೀಯ ಧೋರಣೆಯ ಒಳಗೆ ಅಭಿವ್ಯಕ್ತಿಯಾಗಿವೆ. ಆದರೂ ಈ ಆಳುವ ವರ್ಗವನ್ನು ಮೀರುವ ಕಾರ್ಯಗಳನ್ನು ಗುರುತಿಸಬಹುದು. ಇವು ಚರಿತ್ರೆಯನ್ನು ಹೇಳುತ್ತಿವೆ. ಇಲ್ಲಿ ಆಳುವ ವರ್ಗದ ಆಜ್ಞೆಗಳಿಗೆ ಮಾತ್ರ ಆ ಕಾಲದ ಬರಹ ಸೀಮಿತವಾಗಿರುವುದನ್ನು ಕಾಣುತ್ತೇವೆ.

ಕನ್ನಡದ ಮೊದಲ ಗದ್ಯ ಕೃತಿಯಾದ 'ವಡ್ಡಾರಾಧನೆ'ಯ ಕಾರ್ತಿಕ ಋಷಿಯ ಕಥೆಯಲ್ಲಿ ಅಗ್ನಿರಾಜನು ಭೂಮಿಯ ಒಡೆತನವು ಬೇರೆಯವರಿಗೆ ಪಲ್ಲಟವಾಗುವುದನ್ನು ತಡೆಯಲು ತನ್ನ ಮಗಳನ್ನೇ ಮೋಹಿಸುತ್ತಾನೆ. ಅದು ಕೈಗೂಡಬೇಕಾದರೆ ತನ್ನ ಮಗಳನ್ನೇ ತಾನು ಮದುವೆಯಾಗ ಬೇಕು. ಹಾಗೆ ಮದುವೆಯಾದರೆ ಅದಕ್ಕೆ ವಿರೋಧ ಬರಬಹುದು. ಅದಕ್ಕೆ ಅಗ್ನಿರಾಜ ಒಂದು ಉಪಾಯ ಮಾಡುತ್ತಾನೆ. ತನ್ನ ಆಸ್ಥಾನದ ಮಂತ್ರಿಗಳು "ಈ ರಾಜ್ಯದಲ್ಲಿರುವ ಸುಂದರವಾದ ವಸ್ತು ಯಾರಿಗೆ ಸೇರಬೇಕು? ಎಂದು ಕೇಳುತ್ತಾನೆ. ಅದಕ್ಕೆ ಮಂತ್ರಿಗಳು ಆ ವಸ್ತು ಯಾವುದು ಎಂದು ಹೇಳಿ' ಎನ್ನುತ್ತಾರೆ. ಆಗ ಅಗ್ನಿರಾಜನಿಗೆ ಕೋಪ ಬರುತ್ತದೆ. ಅವನು ಇವರನ್ನು ಈ ಪಟ್ಟಣದಿಂದ ಹೊರಗಟ್ಟಿ ಎಂದು ಆಜ್ಞೆ ಮಾಡುತ್ತಾನೆ'. ಎರಡನೇ ಆಸ್ಥಾನದ ಪಂಡಿತರನ್ನು ಕರೆಸುತ್ತಾನೆ. 'ಈ ರಾಜ್ಯದಲ್ಲಿರುವ ಸುಂದರವಾದ ವಸ್ತು ಯಾರಿಗೆ ಸೇರಬೇಕು? ಎಂದು ಕೇಳುತ್ತಾನೆ. ಅದಕ್ಕೆ ಅವರು ಆ ಸುಂದರವಾದ ವಸ್ತು ರಾಜನಾದ ತಮಗೆ ಸೇರಬೇಕು' ಎನ್ನುತ್ತಾರೆ. ಆ ಮೂಲಕ ಅಗ್ನಿರಾಜನಿಗೆ ತನ್ನ ಮಗಳು ಕೃತಿಕೆಯ ಜೊತೆ ಮದುವೆ ಆಗುತ್ತದೆ. ಇಲ್ಲಿ ರಾಜಪ್ರಭುತ್ವ ಸಂಪತ್ತಿನ ಒಡೆತನವನ್ನು ಉಳಿಸಿಕೊಳ್ಳಲು ಮಗಳನ್ನೇ ಮದುವೆ ಯಾಗುತ್ತದೆ. ಈ ಅಭಿಪ್ರಾಯವನ್ನು ಈ ಕೃತಿ ಚಿತ್ರಿಸುತ್ತಿದೆ. ಅಂದರೆ ರಾಜನ ಆಸ್ತಿಯು ಪಲ್ಲಟವಾಗುವುದನ್ನು ಅಂದಿನ ಆಳುವ ವರ್ಗ ತಡೆಗಟ್ಟುವುದನ್ನು ಕಾಣುತ್ತೇವೆ. ಹೀಗೆ ಸಂಪತ್ತಿನ

ಅಸಮಾನತೆಯನ್ನು ಉಳಿಸಿಕೊಂಡು ಬಂದಿರುವ ಆಳುವ ವರ್ಗದ ಆಲೋಚನೆಯನ್ನು ಗುರುತಿಸಬಹುದು. ಪಂಪನು ಕೂಡ ಅರಿಕೇಸರಿ ಆಸ್ಥಾನದ ಕವಿ. ಇವನು 'ಪೇರರೀವುದೇಂ... ಪೆರರಿಂದಪ್ಪುದೇಂ' ಎನ್ನುವಾಗ ಇಲ್ಲಿ ಅರಿಕೇಸರಿಯನ್ನು ಅರ್ಜುನನ ಮುಖಾಂತರ ವೈಭವೀಕರಿಸಿದರೂ, ಭಾರತದಲ್ಲಿ ಶೂದ್ರ ವರ್ಣನಾದ ಕರ್ಣನನ್ನು ಮಾತ್ರ ನೆನೆಯಬೇಕೆನ್ನುವುದು ಇದು ಆಳುವ ವರ್ಗವನ್ನು ಒಪ್ಪಿಕೊಂಡು ಅದನ್ನು ಮೀರುವ ಕ್ರಿಯೆಯನ್ನು ಕಾಣಬಹುದು.

೧೨ನೇ ಶತಮಾನದ ವಚನ ಸಾಹಿತ್ಯವು ಆಳುವ ವರ್ಗದ ಸಾಮಾಜಿಕ ಮೌಲ್ಯಗಳನ್ನು ಮೀರುವ ಕ್ರಿಯೆ ಮಾಡಿದೆ. ಈ ಸಂದರ್ಭದಲ್ಲಿ ಜಾತಿ ಅಸಮಾನತೆ, ವರ್ಗ ಅಸಮಾನತೆಯನ್ನು ಕುರಿತು ಅನೇಕ ವಚನಗಳು ರಚನೆಯಾಗಿವೆ. ಈ ಕಾಲದಲ್ಲಿ ಎಲ್ಲ ವ್ಯಕ್ತಿಗಳೂ ಒಂದೇ ಸ್ಥಿತಿಯಲ್ಲಿ ಇರಲಿಲ್ಲ. ಅಸಮಾನತೆ ಮತ್ತು ಶೋಷಣೆಗಳಿಂದ ನಲುಗಿ ಹೋಗಿರುವ ಸಮಾಜದ ಸ್ಥಿತಿ 'ಒಡಲುಗೊಂಡವ ಹಸಿವ; ಒಡಲುಗೊಂಡವ ಹುಸಿವ ಎನ್ನಂತೆ ನೀನೊಮ್ಮೆ ಒಡಲುಗೊಂಡು ನೋಡ' ಎನ್ನುವ ಹಸಿವಿನ ಪ್ರಶ್ನೆಯ ಮೂಲಕ ವರ್ಗಪ್ರಜ್ಞೆಯನ್ನು ತಿಳಿಸುತ್ತದೆ. ಅದೇ ರೀತಿಯಲ್ಲಿ ಜಾತಿ ಅಸಮಾನತೆ, ಲಿಂಗತಾರತಮ್ಯ ಮುಂತಾದ ಧೋರಣೆಯಲ್ಲಿ ಸಾಹಿತ್ಯ ರಚನೆ ಆಗಿದೆ. ಹೀಗೆ ವಸಾಹತುಪೂರ್ವ ಕಾಲದಲ್ಲಿ ಊಳಿಗಮಾನ್ಯಶಾಹಿ ಭೂಮಾಲೀಕ ವರ್ಗದ ಅಸಮಾನತೆ ಮತ್ತು ಶೋಷಣೆಯ ಮೌಲ್ಯಗಳಿಗೆ ಹೆಚ್ಚು ಒತ್ತುಕೊಟ್ಟಿದೆ. ಆದರೆ ವರ್ಗ ಅಸಮಾನತೆ, ವರ್ಗ ಶೋಷಣೆಯನ್ನು ವಿರೋಧಿಸುವ ದುಡಿಯುವ ವರ್ಗದ ಆಲೋಚನೆ ಅಷ್ಟು ಪ್ರಾಮುಖ್ಯ ಕೊಟ್ಟಿಲ್ಲ. ಆದರೆ ವೈದಿಕ ಧರ್ಮದ ಅಸಹನೀಯ ಕಟ್ಟಳೆಗಳ ವಿರುದ್ಧ ನಡೆದ ವಚನ ಚಳುವಳಿ ತನ್ನದೇ ವರ್ಗವೊಂದನ್ನು ಸೃಷ್ಟಿಸಿತು. ಇಲ್ಲಿಯವರೆಗೆ ಸಾಮಾಜಿಕ ಅನ್ಯಾಯಕ್ಕೊಳಗಾಗಿದ್ದ ದುಡಿಯುವ ವರ್ಗವನ್ನು ಆಕರ್ಷಿಸುವುದರ ಮೂಲಕ ವಿಶಿಷ್ಟ ಶಕ್ತಿ ತಂದುಕೊಂಡಿತು. "ಧಾರ್ಮಿಕ ಸ್ವರೂಪದ ಚಳುವಳಿ ಸ್ವಾಭಾವಿಕವಾಗಿ ಅದನ್ನು ತಳಹದಿ ಯನ್ನಾಗಿಟ್ಟುಕೊಂಡಿತು. ಬಲಿಷ್ಠ ವರ್ಗ ಬಡವರನ್ನು ಕಡೆಗಣಿಸಿದ ಸತ್ಯ ಕೆಲವು ವಚನಕಾರರಿಗೆ ಗೊತ್ತಿತ್ತಾದರೂ ಹೋರಾಟದ ಮೂಲೋದ್ದೇಶದ ಮುಖಾಂತರ ಅದನ್ನು ವ್ಯಾಖ್ಯಾನ ಮಾಡಿರುವುದರಿಂದ, ಶೋಷಣೆಯ ಸಮಗ್ರತೆಯ ಪತ್ತೆಗಿಂತ ವ್ಯವಸ್ಥೆಯ ಸುಧಾರಿತ ಮಾದರಿಯೊಂದು ಗುರಿಯಾಗಿರುವುದು ವಚನ ಸಾಹಿತ್ಯದಲ್ಲಿ ವ್ಯಕ್ತವಾಗಿದೆ. ಆ ಕಾಲಕ್ಕೆ ಇದು ತೀರ ಸ್ವಾಭಾವಿಕ. ಆದ್ದರಿಂದ ಈ ಚಳುವಳಿಯ ಸ್ವರೂಪವನ್ನು ನಮ್ಮ ಸಾಂಸ್ಕೃತಿಕ ಪರಂಪರೆ ಒಡ್ಡುವ ಮಿತಿಗಳನ್ನು ಚೆನ್ನಾಗಿ ಪರಿಚಯಿಸುತ್ತದೆ".[೬] ಹೀಗೆ ದುಡಿಯುವ ವರ್ಗದ ಸಮಸ್ಯೆಗಳನ್ನು ಜಾತಿ, ಧರ್ಮದ ನೆಲೆಯಲ್ಲಿ ವಿವರಿಸುವ ವರ್ಗ ಶೋಷಣೆಯ ವಿರುದ್ಧ ಧ್ವನಿಯು ಗೌಣಗೊಂಡಿದೆ.

ಊಳಿಗಮಾನ್ಯಶಾಹಿ ಪದ್ಧತಿಯ ಸಂದರ್ಭದಲ್ಲಿ ಭೂಮಿಯ ಒಡೆಯರಾದವರು ಭೂಮಿಯನ್ನು ವಂಚಿಸಿಕೊಂಡು ಶ್ರೀಮಂತರಾಗಿ ದುಡಿಯುವ ಜನರನ್ನು ಆಳುತ್ತಿದ್ದರು. ಬುದ್ಧಿಬಲವುಳ್ಳವರ ಸಹಕಾರದಿಂದ ತೋಳಬಲವುಳ್ಳವರು ಆಳುತ್ತಿದ್ದ ಕಾಲ. ಇವರ ಸಂಪತ್ತಿನ ಒಡೆತನ ಮತ್ತು ರಾಜಕೀಯ ಆಡಳಿತಕ್ಕೆ ಧಕ್ಕೆಯಾಗದ ರೀತಿಯಲ್ಲಿ ಅನೇಕ ಸಾಮಾಜಿಕ ಕಟ್ಟುಪಾಡುಗಳ

ಮೂಲಕ ಅಸಮಾನತೆಯನ್ನು ಸೃಷ್ಟಿಸಿ ದುಡಿಯುವ ಜನರನ್ನು ಶೋಷಣೆ ಮಾಡುತ್ತಿದ್ದಾರೆ. ಈ ಕಾಲದಲ್ಲಿ ದುಡಿಯುವ ವರ್ಗದವರಿಗೆ ಆಳುವವರ ಆಶಯಗಳೇ ಉನ್ನತ ಜೀವನದ ಮೌಲ್ಯವಾಗಿ ಕಂಡಿತ್ತು. ನಂತರದ ದಿನಗಳಲ್ಲಿ ವಸಾಹತುಶಾಹಿಗಳು ಪ್ರವೇಶಿಸುವುದರ ಜೊತೆಗೆ ಇಲ್ಲಿ ಭಾವಗೀತೆ, ಸಣ್ಣಕತೆ, ಕಾದಂಬರಿ, ಜೀವನಚರಿತ್ರೆ, ಆತ್ಮಚರಿತ್ರೆ, ಲಲಿತ ಪ್ರಬಂಧ, ಗ್ರಂಥಸಂಪಾದನೆ, ಸಂಶೋಧನೆ, ಜಾನಪದ ಮುಂತಾದ ಸಾಹಿತ್ಯ ಪ್ರಕಾರಗಳು ಕಾಣಿಸಿಕೊಳ್ಳುತ್ತವೆ.

ಹಾಗೆಯೇ ಕೈಗಾರಿಕೆ, ವ್ಯಾಪಾರ, ವಾಣಿಜ್ಯಗಳು ಸಮಾಜದ ಆರ್ಥಿಕ ಸಂರಚನೆಯನ್ನು ರೂಪಿಸಿದರೆ ಹಿಂದಿನ ಊಳಿಗಮಾನ್ಯಶಾಹಿ ಶೋಷಣೆಯ ಮೌಲ್ಯಗಳನ್ನು ಮತ್ತಷ್ಟು ಬಡ್ತಿ ಮಾಡಿ ಶೋಷಣೆ ಮಾಡಲು ಶುರುವಾಗಿದೆ. ಆದರೆ ಜಾತಿಗೆ ಸಂಬಂಧಿಸಿದ ಕುಲಕಸುಬುಗಳು ಸಡಿಲಗೊಳಿಸಿರುವುದನ್ನು ಗುರುತಿಸಿದೆ. ಉದ್ಯೋಗ, ಅಕ್ಷರಜ್ಞಾನ ನಿರ್ದಿಷ್ಟ ಜಾತಿಗಳಿಗೆ ಸೀಮಿತ ವಾಗಿತ್ತು. ಆದರೆ ಈ ಸಂದರ್ಭದಲ್ಲಿ ಯಂತ್ರಶಕ್ತಿ ಮತ್ತು ಇಂಗ್ಲಿಷ್ ಜ್ಞಾನಗಳು ಆರ್ಥಿಕ ಪದ್ಧತಿಯ ಬೇರುಗಳು ಸಡಿಲಗೊಂಡು ಸಾಮಾಜಿಕ ಸಂಬಂಧಗಳು ವ್ಯತ್ಯಾಸವಾಗಿದೆ. ಈ ಸಂದರ್ಭದಲ್ಲಿ ಮಧ್ಯಮವರ್ಗದ ಉದಯ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಬಂಡವಾಳಶಾಹಿ ಪದ್ಧತಿಯ ಪ್ರಾರಂಭಕ್ಕೆ ನಾಂದಿಯಾಯಿತು.

ಈ ಕಾಲದಲ್ಲಿ ಕನ್ನಡದಲ್ಲಿ ಹೊಸ ಕಾವ್ಯ ಸೃಷ್ಟಿಯ ತುಡಿತ ಪ್ರಾರಂಭವಾಗಿದ್ದನ್ನು ಕಾಣಬಹುದು. ಹಿಂದಿನ ಆಳುವ ವರ್ಗದ ಆಶ್ರಯವಿಲ್ಲದೆ ಅದರ ಆಶಯವನ್ನು ನೇರವಾಗಿ ಪ್ರತಿಪಾದಿಸಿದೆ ಹೊಸ ಸಾಮಾಜಿಕ ಆಶಯಗಳನ್ನು ಈ ಸಂದರ್ಭದಲ್ಲಿ ಸೃಷ್ಟಿಸಿದ್ದು ನವೋದಯ ಸಾಹಿತ್ಯದಲ್ಲಿ ಗುರುತಿಸಬಹುದು. ಬೇಂದ್ರೆ, ಕುವೆಂಪು, ತನ್ನ ಕಾವ್ಯಗಳ ಮೂಲಕ ಸಮಾಜದ ಸಾಮಾಜಿಕ ಅನ್ಯಾಯಗಳ ವಿರುದ್ಧ ದನಿ ಮಾಡಿದ್ದಾರೆ. ಬಿ.ಎಂ.ಶ್ರೀ.ಯವರ ಇಂಗ್ಲಿಷ್ ಗೀತೆಗಳ ಮೂಲಕ ಹೊಸ ಕವಿತೆಗೆ ಪ್ರೇರಣೆಯಾಗುವ ಶಕ್ತಿ ಪಡೆಯಿತು. ಕುವೆಂಪು ಅವರು 'ಕಲ್ಕಿ' ಕವನದಲ್ಲಿ 'ಕಲ್ಕಿ ಕಲ್ಕಿ' ಎನ್ನುತ್ತ ಚೀರಿದವರು. 'ಕನಸೊಡೆದೆದ್ದ ಇನ್ನೆಲ್ಲಿಯ ನಿದ್ದೆ' ಎನ್ನುತ್ತಾರೆ. ಹಾಗೆಯೇ

ಕತ್ತಿ ಪರಕೀಯರದಾದರೆ ಮಾತ್ರ ನೋವೆ!
ನಮ್ಮವರೆ ಹದಹಾಕಿ ತಿವಿದರೆ ಅದು ಹೂವೆ!

ಹೀಗೆ ಶೋಷಣೆ ವಿರುದ್ಧ ದನಿ ಮಾಡುತ್ತಾರೆ. ಪುರೋಹಿತಶಾಹಿ ಮತ್ತು ವಸಾಹತುಶಾಹಿ ಶೋಷಣೆಯನ್ನು ವಿವರಿಸುತ್ತಾರೆ. ಆದರೆ ದುಡಿಯುವ ವರ್ಗದ ಉತ್ಪಾದನೆ ಸಂಬಂಧಗಳು ಕಾಣಿಸುವುದಿಲ್ಲ. ಬೇಂದ್ರೆ ಕೂಡ 'ಕುರುಡು ಕಾಂಚಾಣ' ಕವಿತೆಯಲ್ಲಿ

ಸಣ್ಣ ಕಂದಮ್ಮಗಳ
ಕಣ್ಣಿನ ಕವಡೆಯ
ತಣ್ಣನ್ನ ಜೋಮಾಲೆ ಕೊರಳೊಳಗಿತ್ತೊ

ಬಡವರ ಒಡಲಿನ ಬಡಬಾನಲದಲ್ಲಿ
ಸುಡುಸುಡು ಪಂಜು ಕೈಯೊಳಗಿತ್ತು
ಕೂಲಿ ಕಂಬಳಿಯವರ ಪಾಲಿನ ಮೈದೊಗಲ
ದೊಳಿಯ ಭಂಡಾರ ಹಣೆಯೊಳಗಿತ್ತೊ

ಹೀಗೆ ವ್ಯವಸ್ಥೆಯ ಶೋಷಣೆ ಮತ್ತು ಬಡತನದ ಸಮಸ್ಯೆಯು ಕಾವ್ಯದ ಮೂಲಕ ಅಭಿವ್ಯಕ್ತಿಯಾಗಿವೆ. "ಕುವೆಂಪು, ಬೇಂದ್ರೆಯವರು ಸಮಾಜದ ವರ್ಗ ಸ್ವರೂಪವನ್ನು ಸ್ಥೂಲವಾಗಿ ಕಂಡಿದ್ದಾರೆ. ವರ್ಗಶೋಷಣೆಯ ಅಸ್ತಿತ್ವವನ್ನು ಗುರುತಿಸುವಷ್ಟರಮಟ್ಟಿಗೆ ಮಹತ್ವದ ದೃಷ್ಟಿ ತೋರಿಸುವ ಬೇಂದ್ರೆ ವರ್ಗ ಹೋರಾಟವನ್ನು ಪ್ರತಿಪಾದಿಸುವುದಿಲ್ಲ. ವರ್ಗಹೋರಾಟ ಪ್ರತಿಪಾದಿಸದಿರುವುದೇ ದೋಷವೆಂದು ನಾನಿಲ್ಲಿ ಹೇಳುತ್ತಿಲ್ಲ. ಇನ್ನೊಂದು ಪರಿಹಾರದ ಕಡೆಗೆ ಅವರ ಮನಸ್ಸಿದೆ ಎಂಬುದು ನನಗಿಲ್ಲಿ ಮುಖ್ಯ".[೮] ಅಂದರೆ ಶೋಷಿತವರ್ಗದ ಶೋಷಣೆಯನ್ನು ವಸ್ತುವಿಷಯದಲ್ಲಿ ಅಭಿವ್ಯಕ್ತಿಸುತ್ತಾರೆ ಹೊರತು ದುಡಿಯುವ ಜನರ ವರ್ಗಪ್ರಜ್ಞೆಯ ಭಾಗವಾಗಿ ನಿರೂಪಣೆಗೊಂಡಿಲ್ಲ.

ಕುವೆಂಪು ಅವರ ಕಾದಂಬರಿಗಳನ್ನು ಗಮನಿಸಿದರೆ "ಊಳಿಗಮಾನ್ಯಶಾಹಿ ವ್ಯವಸ್ಥೆಯ ಕ್ರೂರ ವಾಸ್ತವತೆಯನ್ನು ಕಟ್ಟಿಕೊಡಲಾಗಿದೆ. "ಮಲೆಗಳಲ್ಲಿ ಮದುಮಗಳು" ಕಾದಂಬರಿಯಲ್ಲಿ ಬರುವ 'ಹೊನ್ನಾಳಿ ಹೊಡ್ತ' ಭೂಮಾಲೀಕ ವ್ಯವಸ್ಥೆಯ ಕ್ರೂರತೆಗಳ ಅನಾವರಣ ಮಾಡಿದೆ. ಅಂದರೆ ದುಡಿಯುವ ಜನರ ಹಕ್ಕುಗಳನ್ನು ವಂಚಿಸಿ ಅವರನ್ನು ಶೋಷಣೆ ಮಾಡುವುದು. ದುಡಿಯುವ ಜನತೆ ಯಾವುದೇ ಪ್ರತಿರೋಧವಿಲ್ಲದೆ ತಮ್ಮ ಶೋಷಣೆಯನ್ನು ಒಪ್ಪಿಕೊಂಡು ನಡೆಯುವ ಪಾತ್ರಗಳು ಕಾಣಿಸಿಕೊಳ್ಳುತ್ತವೆ. ದುಡಿಯುವ ಜನರ ದುಡಿಮೆಯ ಶೋಷಣೆಯ ವಿರುದ್ಧ ಪ್ರತಿರೋಧ ಇರಲೇಬೇಕು. ಆದರೆ ಕಾದಂಬರಿಯಲ್ಲಿ ಆ ಬಗೆಯ ಪ್ರತಿರೋಧದ ಚಿತ್ರಣ ಇಲ್ಲ. ಬಿ. ಕೃಷ್ಣಪ್ಪ ಅವರು ಗುರುತಿಸಿರುವಂತೆ ಕುವೆಂಪು ಕಾದಂಬರಿಗಳ ದಲಿತಲೋಕದ ಚಿತ್ರಣ ಅದು ಮೇಲ್ನೋಟದ ಚಿತ್ರಣವೆಂದು ಈಗಾಗಲೇ ಗುರುತಿಸಿದ್ದಾರೆ. ಅಂದರೆ ದುಡಿಯುವ ವರ್ಗದ ಉತ್ಪಾದನಾ ಸಂಬಂಧಗಳು ಕಾಣಿಸಿದರೂ ಶೋಷಣೆಯ ಮೂಲಕೇಂದ್ರವಾದ ಸಂಪತ್ತಿನ ಅಸಮಾನ ಹಂಚಿಕೆಯಲ್ಲಿ ಭೂಮಿಯ ಒಡೆತನವನ್ನು ಮೇಲುಜಾತಿ, ಮೇಲುವರ್ಗಗಳಿಗೆ ಸೀಮಿತಗೊಳಿಸಿ, ಆ ಭೂಮಿಯಲ್ಲಿ ದುಡಿಯುವ ಶ್ರಮಿಕ ವರ್ಗದ ಭೂಮಿಯ ಹಕ್ಕನ್ನು ಮುಚ್ಚಿಡಲಾಗಿದೆ. ಅದರ ಜೊತೆಗೆ ಜೀತಪದ್ಧತಿಯನ್ನು ದುಡಿಯುವರ ಮೇಲೆ ಹೇರಿ ಅವರನ್ನು ಶೋಷಣೆ ಮಾಡಲಾಗಿದೆ. ಎರಡು ಕಾದಂಬರಿಗಳಲ್ಲಿ ಬರುವ ದುಡಿಯುವ ವರ್ಗದ ಪಾತ್ರಗಳು ಜೀತದಾಳುಗಳು. ಅವರು ಭೂಮಾಲೀಕ ವರ್ಗದ ಭೂಮಿಯಲ್ಲಿ ದುಡಿಯುತ್ತಾರೆ. ಧಣಿಯ ಮನೆ ಪಾಲಾದಾಗ ಮನೆಯ ವಸ್ತುಗಳನ್ನು ಪಾಲು ಮಾಡಿಕೊಳ್ಳುವಂತೆ ಜೀತಗಾರರನ್ನು ಪಾಲು ಮಾಡಿಕೊಳ್ಳುತ್ತಾರೆ. ಇಂತಹ ಕೆಳಜಾತಿ ಜನರ ಜೀವನವನ್ನು ಕಾದಂಬರಿಯ ನಿರೂಪಣೆಯಲ್ಲಿ ತಂದಿದ್ದಾರೆ. ಆದರೆ ಆ ವರ್ಗದ ಶೋಷಣೆಗೆ ಊಳಿಗಮಾನ್ಯಶಾಹಿ ವ್ಯವಸ್ಥೆಯ ಶೋಷಣೆಯೇ ಕಾರಣ ಎಂದು ಗೊತ್ತಿರುವ ಲೇಖಕರು ಆ ವರ್ಗದ ಪ್ರತಿಕ್ರಿಯೆಯನ್ನು

ಚಿತ್ರಿಸುವಲ್ಲಿ ಆಳುವ ವರ್ಗದ ಸ್ವಭಾವವನ್ನು ಅಳವಡಿಸಿಕೊಂಡಿದ್ದಾರೆ. ದುಡಿಯುವ ವರ್ಗದ ಅಸಮಾನತೆಯನ್ನು ಕುರಿತು ಮೌನ ವಹಿಸುವ ಕಾದಂಬರಿಕಾರರ ಹಿಂದೆ ಭೂಮಿಯ ಒಡೆತನ ಹೊಂದಿರುವ ಆಳುವ ವರ್ಗದ ಆಲೋಚನೆ ಮನೆ ಮಾಡಿಕೊಂಡಿದೆ.

ಶಿವರಾಮ ಕಾರಂತರ "ಚೋಮನ ದುಡಿ" ಕಾದಂಬರಿಯಲ್ಲಿ ಚೋಮನು ಶ್ರಮಜೀವಿ. ಗೇಣಿಗಾಗಿ ಭೂಮಿಯನ್ನು ಕೇಳುತ್ತಾನೆ. ಇದು ಪ್ರಜ್ಞಾಪೂರ್ವಕ ಅಪೇಕ್ಷೆಯಾಗಿ ಕಾಣುತ್ತದೆ. ಯಾಕೆಂದರೆ ಚೋಮನ ಸ್ಥಿತಿಗೆ ಸಂಕಪ್ಪಯ್ಯನು ಪ್ರತಿನಿಧಿಸುವ ಆಳುವ ವರ್ಗದ ವ್ಯವಸ್ಥೆಯಲ್ಲಿ ಕಾರಣ ಹುಡುಕುವ ಚೋಮನ ಸುತ್ತು ಆಸೆ, ಆಕಾಂಕ್ಷೆಗಳು ಕಾಣುತ್ತವೆ. ಅದರಲ್ಲಿ ಬರಿ ಸುಧಾರಣವಾದಿ ನೆಲೆಯಲ್ಲಿ ತನ್ನ ಈ ಸ್ಥಿತಿಗೆ ಕಾರಣವಾದ ಆಳುವ ವರ್ಗದ ಬಗೆಗೆ ಚೋಮನ ಪ್ರತಿಕ್ರಿಯೆ ಯಾಂತ್ರಿಕವಾಗಿ ಕಾಣುತ್ತದೆ. ಜಾತಿ, ಧರ್ಮಗಳ ಮೂಲಕ ಭೂಸಂಬಂಧ ಗಳನ್ನು ವಿವರಿಸುವಾಗ ಆಳುವ ವರ್ಗದ ಮತ್ತು ದುಡಿಯುವ ನಡುವೆ ಸಹಬಾಳ್ವೆಯನ್ನು ಕಾಪಾಡಿಕೊಳ್ಳುವ ಪ್ರಯತ್ನ ಮಾಡಿದೆ. ಆದರೆ ತನ್ನ ವರ್ಗದ ಆಲೋಚನೆಯನ್ನು ಚೋಮನ ಮೂಲಕ ಕೇಳಿಸುವುದನ್ನು ಕಾಣುತ್ತೇವೆ. ಚೋಮನು ಜೀತದಾಳು. ತನ್ನ ಭೂಮಿಯ ಹಕ್ಕನ್ನು ಕಳೆದುಕೊಂಡು, ಬೆವರು ಸುರಿಸಿ ದುಡಿಯುವ ಭೂಮಿಯ ಮೇಲೆ ಹಕ್ಕನ್ನು ಕೇಳಬೇಕಾಗಿತ್ತು. ಆದರೆ ಕಾದಂಬರಿಯಲ್ಲಿ ಹಕ್ಕಿನ ಬಗೆಗೆ ಚಕಾರವಿಲ್ಲ. ಗೇಣಿಗಾಗಿ ಭೂಮಿಯನ್ನು ಕೇಳಿಸಿದೆ. ಭೂಮಿಗೆ ಒಡೆಯನಾಗಬೇಕು ಎನ್ನುವ ಆಲೋಚನೆ ಮೂಡುವುದಿಲ್ಲ. ಈ ಬಗೆಯ ಧೋರಣೆಗಳು ಊಳಿಗಮಾನ್ಯಶಾಹಿ ಮೌಲ್ಯಪ್ರಜ್ಞೆಯನ್ನು ಪ್ರಜ್ಞಾಪೂರ್ವಕವಾಗಿ ಮುಚ್ಚಿಡುತ್ತದೆ. ಆಳುವ ವರ್ಗಕ್ಕೂ, ದುಡಿಯುವ ವರ್ಗಕ್ಕೂ ಶೋಷಕ-ಶೋಷಿತ ಸಂಬಂಧಗಳು ಇದ್ದರೂ ಚೋಮನು ಎಲ್ಲಿಯೂ ಆ ಶೋಷಕ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವುದಿಲ್ಲ. ಆ ವ್ಯವಸ್ಥೆಯನ್ನು ಒಪ್ಪಿಕೊಂಡು ಚಲಿಸುತ್ತಾನೆ ಮತ್ತು ವೈಯಕ್ತಿಕ ನೆಲೆಯಲ್ಲಿ ಅವನ ಪ್ರತಿಭಟನೆ ಕಾಣಿಸುತ್ತದೆ. ಒಟ್ಟಾರೆ ಚೋಮನ ವರ್ತನೆ, ಸ್ವಭಾವಗಳು ಆಳುವ ವರ್ಗದ ಪ್ರಜ್ಞೆಯ ಭಾಗವಾಗಿ ನಿರೂಪಣೆಗೊಂಡಿವೆ ಹೊರತು ದುಡಿಯುವ ವರ್ಗದ ಭೂಸಂಬಂಧಗಳ ನೆಲೆಯಲ್ಲಿ ಮೂಡಿಬಂದಿಲ್ಲ. ಈ ಕಾದಂಬರಿ ದಲಿತರ ಭೂಮಿಯ ಹಕ್ಕಿನ ಬಗೆ ವಸ್ತುವಿಷಯದಲ್ಲಿ ನಿರೂಪಣೆ ಮಾಡಿದೆ. ಆದರೆ ದುಡಿಯುವ ಜನರ ವರ್ಗಪ್ರಜ್ಞೆಯನ್ನು ಆಳದಲ್ಲಿ ಮುಚ್ಚಿಟ್ಟಿದೆ.

ಗೊರೂರರ "ಹೇಮಾವತಿ" ಕಾದಂಬರಿಯಲ್ಲಿ ಬರುವ ದಲಿತ ಸಮುದಾಯದ ಪಾತ್ರಗಳು ದುಡಿಯುವ ವರ್ಗವನ್ನು ಪ್ರತಿನಿಧಿಸುತ್ತವೆ. ಕಾಳನ ಪಾತ್ರವು ಜೀತಪದ್ಧತಿಯನ್ನು ಪ್ರತಿನಿಧಿಸುತ್ತದೆ. ಇಲ್ಲಿ ಬರುವ ಹೊಲೆಯ ಸಮುದಾಯದವರೆಲ್ಲರೂ ಭೂಮಿಯ ಹಕ್ಕಿನಿಂದ ವಂಚಿತರಾದ ಭೂರಹಿತರು. ಕಾಳನ ಪಾತ್ರವನ್ನು ಗಮನಿಸಿದರೆ ಅವನ ತಂದೆ, ಅಜ್ಜ, ಮುತ್ತಜ್ಜ, ಎಲ್ಲರ ಹೆಸರು ಕಾಳ ಎಂದೇ. ಇವರೆಲ್ಲರೂ ತಲೆತಲಾಂತರದಿಂದ ಜೀತಗಾರರೇ. ಇವರನ್ನು ಭೂಮಾಲೀಕ ವರ್ಗ ಶೋಷಣೆ ಮಾಡುತ್ತಾ ಬಂದಿದೆ. ಜೀತಕ್ಕಿದ್ದ ಹೊಲೆಯರ ಕೆಂಚನ ಮಗಳು 'ಲಕ್ಕಿ'ಯನ್ನು ದಣಿ ರಾಮಕೃಷ್ಣ ಬಳಸಿಕೊಂಡುದು, ಹೊಲೆಯರೆಲ್ಲ ಕತ್ತಿ, ದೊಣ್ಣೆ, ಮಚ್ಚು ಕೊಡಲಿಗಳನ್ನು

ಹಿಡಿದು ರಾಮಕೃಷ್ಣನ ಮನೆಗೆ ನ್ಯಾಯ ಕೇಳಲು ಬರುತ್ತಾರೆ. 'ಲಕ್ಕಿ ಮಾಡಿದುದನ್ನು ಕಂಡುಹಿಡಿದು ಅವಳಿಗೆ ದಂಡ ಹಾಕಿದ್ದೇವೆ. ನಿಮ್ಮ ಬ್ರಾಹ್ಮಣರೂ ನಿಮ್ಮ ತಪ್ಪನ್ನು ಕಂಡುಹಿಡಿದು ನಿಮಗೆ ದಂಡ ಹಾಕಬಹುದೆಂದು ನೋಡಿದೆವು. ನಿಮ್ಮಲ್ಲಿ ಅಂತಹ ಕಟ್ಟೇನೂ ಇಲ್ಲ. ನೀವೇನೋ ನಿಮ್ಮ ಪಾಡಿಗೆ ಇರುತ್ತೀರಿ. ಇನ್ನು ಹುಡುಗಿಯ ಗತಿಯೇನು?'[೯] ಎಂದು ಕೇಳುತ್ತಾರೆ. ಅವಳನ್ನೂ ಅವಳ ಮಗುವನ್ನೂ ತಾನೂ ಸಾಕುವುದಾಗಿ ರಾಮಕೃಷ್ಣ ಒಪ್ಪಿಕೊಳ್ಳುತ್ತಾನೆ. ಇಲ್ಲಿ ದಲಿತ ವರ್ಗದ ಜಾಗೃತಿಯನ್ನು ಗುರುತಿಸಬಹುದು. ಮೇಲುಜಾತಿಯ ವಾಸು ಕೆಳಜಾತಿಯ ಚೆನ್ನಿಯೇ ಗಾನಶಾರದೆ ಎಂದು ತಿಳಿದು ಮದುವೆಯಾಗುತ್ತಾನೆ. ಹಾಗೆಯ ಹರಿಜನರಿಗೆ ದೇವಾಲಯ ಪ್ರವೇಶ ಹೀಗೆ ಅಸ್ಪೃಶ್ಯತೆಯನ್ನು ನಿವಾರಿಸುವ ಕಾರ್ಯದ ಪ್ರಶ್ನೆಯನ್ನು ಚರ್ಚಿಸಿದೆ. ಆದರೆ ದುಡಿಯುವ ವರ್ಗದ ಶೋಷಣೆ ಕಾರಣವಾದ ಆರ್ಥಿಕ ಅಸಮಾನತೆಯ ಪ್ರಶ್ನೆಯನ್ನು ಕಾದಂಬರಿಯು ಚರ್ಚಿಸುವುದಿಲ್ಲ. ಅಸಮಾನತೆ, ಜಾತಿಶೋಷಣೆ, ಅಸ್ಪೃಶ್ಯತೆಯು ಊಳಿಗಮಾನ್ಯ ವ್ಯವಸ್ಥೆಯ ಶೋಷಣೆಯ ಪರಿಣಾಮದಿಂದ ಹುಟ್ಟಿರುವಂತಹವು. ಆದರೆ ಈ ಭೂಮಾಲೀಕ ವರ್ಗದ ಅಸಮಾನತೆಯ ಸಮಾಜದಲ್ಲಿ ಸುಧಾರಣೆಯು ಸಮಾಜವನ್ನು ಬದಲಾಯಿಸಬಹುದು. ಆದರೆ ವರ್ಗಪ್ರಜ್ಞೆಯಲ್ಲಿ, ವರ್ಗಶೋಷಣೆಯಲ್ಲಿ ಯಾವ ಬದಲಾವಣೆ ಆಗುವುದಿಲ್ಲ. ದಲಿತರ ಮೇಲೆ ಕನಿಕರ ಮೂಡಬಹುದು ಹೊರತು ಅದು ಬದಲಾವಣೆಯೂ ಅಲ್ಲ. ಹೀಗೆ ಕಾದಂಬರಿಯು ಸುಧಾರಣೆ ಬಯಸುತ್ತ ಆಳುವ ವರ್ಗದ ರಾಜಕೀಯ ಧೋರಣೆಗೆ ಒಳಗಾಗಿದೆ.

ರಾವ್‌ಬಹದ್ದೂರ್ ಅವರ 'ಗ್ರಾಮಾಯಣ'ದಲ್ಲಿ ದುಡಿಯುವ ವರ್ಗದ ರಾಜಕೀಯ ಖಚಿತತೆ ಕಾಣಿಸುವುದಿಲ್ಲ. ದುಡಿಯುವ ವರ್ಗ ಭೂಸಂಬಂಧಗಳನ್ನು, ಭೂಮಿಯ ಬಗೆಗೆ ಅವರಿಗಿದ್ದ ಪ್ರಜ್ಞೆಯನ್ನು ಮುಚ್ಚಿಟ್ಟು ವಿವರಿಸುವ ಆಳುವ ವರ್ಗದ ರಾಜಕೀಯ ಧೋರಣೆಯನ್ನು ಗುರುತಿಸಬಹುದು. ದುಡಿಯುವ ವರ್ಗದ ದುಡಿಮೆಯ ಶ್ರಮದಿಂದ ಕಟ್ಟಿದ ವಾಡೆ, ಮಠ, ಗೌಡನ ಹೊಲಗಳು ಇಂದು ವರ್ಗವೈರುಧ್ಯತೆಯ ಕೇಂದ್ರಗಳಾಗಿದ್ದಾವೆ. ರಾಣೋಜಿರಾಯನ ಮರಣವು ಆಸ್ತಿ, ಅಧಿಕಾರದ ಕಲಹಕ್ಕೆ ಕಾರಣವಾಗುತ್ತದೆ. ಆದರೆ ಈ ಸಂಘರ್ಷವು ಮೇಲುವರ್ಗಗಳ ನಡುವೆ ನಡೆಯುತ್ತದೆ. ಆದರೆ ಇದರ ಪರಿಣಾಮವನ್ನು ದುಡಿಯುವ ವರ್ಗದವರು ಎದುರಿಸಬೇಕಾಗಿದೆ. ಆಳುವ ವರ್ಗದ ಆಡಳಿತ, ಕಲಹದಲ್ಲಿ ದುಡಿಯುವ ಜನರನ್ನು ತನ್ನ ಹಿತಾಸಕ್ತಿಗಾಗಿ ಬಳಸಿಕೊಳ್ಳುತ್ತದೆ. ಇದರಿಂದ ಈ ದುಡಿಯು ವರ್ಗವು ತನ್ನ ವರ್ಗದ ಬಗೆಗೆ ಯಾವ ಅರಿವೂ ಬರದಂತೆ ಅವರನ್ನು ನಿಯಂತ್ರಿಸುತ್ತದೆ. ಇಲ್ಲಿ ಕಾದಂಬರಿಗೆ ದುಡಿಯುವ ವರ್ಗದ ವರ್ಗಪ್ರಜ್ಞೆ ಮತ್ತು ಅವರ ಮೇಲೆ ನಡೆಯುವ ಶೋಷಣೆಯನ್ನು ಕುರಿತು ಬಿಡಿಬಿಡಿಯಾಗಿ ಚಿತ್ರಣ ಬರುತ್ತದೆ. ಆದರೆ ದುಡಿಯುವ ವರ್ಗದ ರಾಜಕೀಯ ಧೋರಣೆಯಾಗಿ ಅವರ ಸಮಸ್ಯೆಗಳಿಗೆ ಕಾದಂಬರಿಯಲ್ಲಿ ಉತ್ತರ ಕಾಣುವುದಿಲ್ಲ. ಕಾದಂಬರಿಯು ರಚನೆಯಾದ ಕಾಲದ ಸಮಾಜದ ವಸ್ತುವಿಷಯಗಳನ್ನು ಗ್ರಹಿಸಿದೆ. ಆದರೆ ಅದನ್ನು ಅಭಿವ್ಯಕ್ತಿಸುವ ಮಾದರಿಯಲ್ಲಿ ದುಡಿಯುವ ವರ್ಗದ ಪ್ರಜ್ಞೆಯನ್ನು ಗೌಣಗೊಳಿಸಿರುವುದನ್ನು ಕಾಣುತ್ತೇವೆ.

ಭೂಮಿಗಾಗಿ ಹೋರಾಡುತ್ತಿದ್ದ ತೆಲಂಗಾಣ ರೈತ ಹೋರಾಟದ ವಸ್ತುವಿಷಯ ಭೂಮಿಯ ಹಕ್ಕು ದುಡಿಯುವ ಜನರಿಗೆ ಸೇರಬೇಕು. 'ಉಳುವವನೆ ಭೂಮಿಯ ಒಡೆಯ' ಎನ್ನುವ ದುಡಿಯುವ ವರ್ಗದ ರಾಜಕೀಯ ಹೋರಾಟವನ್ನು ಮುಚ್ಚಿಟ್ಟು ನಿರೂಪಿಸುವ ಕಾದಂಬರಿಯ ರಾಜಕೀಯವು ಆಳುವ ವರ್ಗದ ಭಾಗವಾಗಿದೆ.

ಶಿವರಾಮ ಕಾರಂತರ 'ಮರಳಿ ಮಣ್ಣಿಗೆ', 'ಕುಡಿಯರ ಕೂಸು' ಮುಂತಾದ ಕಾದಂಬರಿಗಳು ದುಡಿಯುವ ಜನರ ಸಾಂಸ್ಕೃತಿಕ ವಿವರಗಳನ್ನು ಒದಗಿಸುವುದರ ಮೂಲಕ ಮೇಲಿನ ಅಭಿಪ್ರಾಯದ ಆಶಯಕ್ಕೆ ಬರುತ್ತವೆ. ಈ ನವೋದಯ ಬರಹಗಾರರು ದಲಿತ ವರ್ಗದ, ಗಂಭೀರವಾದ ಸಮಸ್ಯೆಗಳನ್ನು ಚರ್ಚಿಸಲಿಲ್ಲ. ದಲಿದ ವರ್ಗದವರು ಮತಾಂತರ ಹೊಂದುತ್ತಿದ್ದಾರೆ ಎನ್ನುವ ಪ್ರಶ್ನೆಯನ್ನು ಹಿಂದೆ ಇಟ್ಟು ಅವರ ಮೇಲೆ ನಡೆಯುತ್ತಿರುವ ಶೋಷಣೆಯನ್ನು ಮುಚ್ಚಿಡುವುದನ್ನು ಕಾಣುತ್ತೇವೆ. ಅಸಮಾನತೆ ಮತ್ತು ಶೋಷಣೆಗಳಿಂದ ನಲುಗಿರುವ ಸಮುದಾಯವನ್ನು ಜಾತಿ, ವೃತ್ತಿಗಳ ಮೂಲಕ ವಿವರಿಸುತ್ತದೆ. ಆದರೆ ಈ ದುಡಿಯುವ ವರ್ಗದ ಶೋಷಣೆಗೆ ಕಾರಣವಾದ ಶೋಷಕ ವ್ಯವಸ್ಥೆಯ ವಿರುದ್ಧ ಇಲ್ಲಿಯ ಪಾತ್ರಗಳು ಮಾತನಾಡುವುದಿಲ್ಲ. ಸಾಮಾಜಿಕ ಸಮಸ್ಯೆಗಳನ್ನು, ಘಟನೆಗಳನ್ನು ತರುವ ಕಾದಂಬರಿಯು ಶೋಷಣೆಗೆ ಕಾರಣವಾದ ವ್ಯವಸ್ಥೆಯ ಕುರಿತು ನಿರೂಪಿಸುವಾಗ ಮೌನ ವಹಿಸುವ ಆಳುವ ವರ್ಗದ ರಾಜಕೀಯ ಧೋರಣೆಗೆ ಒಳಗಾಗಿರುವುದನ್ನು ಕಾಣುತ್ತೇವೆ. ಚೋಮನ ದುಡಿಯಲ್ಲಿ ವ್ಯಕ್ತಿಕೇಂದ್ರಿತ, ಜಾತಿಕೇಂದ್ರಿತ ಚರ್ಚೆಗೆ ಒತ್ತು ಕೊಟ್ಟಿದೆ. ಕುವೆಂಪು ಕಾದಂಬರಿಗಳು ದುಡಿಯುವ ಜನರ ಹಕ್ಕುಗಳ ಬಗೆಗೆ ಮಾತಾಡುವುದಿಲ್ಲ. ಗ್ರಾಮಾಯಣ, ವರ್ಗ ಅಸಮಾನತೆ, ದುಡಿಯುವ ವರ್ಗದ ವರ್ಗಹೋರಾಟವನ್ನು ಆಳದಲ್ಲಿ ವಿರೋಧಿಸುತ್ತದೆ. ಹೀಗೆ ಈ ಸಂದರ್ಭದ ಬರಹಗಳು ದುಡಿಯುವ ವರ್ಗದ ಜನರ ಸಮಸ್ಯೆಗಳನ್ನು ಗ್ರಹಿಸಿದರೂ ಅದನ್ನು ವರ್ಗಪ್ರಜ್ಞೆಯ ಭಾಗವಾಗಿ ನಿರೂಪಿಸುವುದಿಲ್ಲ. ಹೀಗಾಗಿ ತನ್ನ ವರ್ಗವನ್ನು ಆರೋಪಿಸಿದ ನಿರೂಪಣೆಯೇ ಹೆಚ್ಚಿದೆ.

ನಿರಂಜನ "ಚಿರಸ್ಮರಣೆ', ಕಾದಂಬರಿಯಲ್ಲಿ ದುಡಿಯುವ ವರ್ಗದ ಹಕ್ಕಿನ ಪ್ರಶ್ನೆಯನ್ನು ಚಿತ್ರಿಸಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಶೋಷಕವರ್ಗದ ಶೋಷಣೆಯನ್ನು ವಿರೋಧಿಸಿ ಪ್ರತಿಭಟನೆಗೆ ಮುಂದಾದ ದುಡಿವ ಜನರ ಚರಿತ್ರೆಯನ್ನು ಕಾಣಬಹುದು. ಕಾದಂಬರಿಯಲ್ಲಿ ಬರುವ ಕೃಷಿ-ಕಾರ್ಮಿಕ ವರ್ಗವು ತನ್ನ ಭೂಮಿಯ ಹಕ್ಕನ್ನು ಕಳೆದುಕೊಂಡು ಭೂಮಾಲೀಕನ ಮನೆಯ ಆಳುಗಳಾಗಿ ದುಡಿಯುತ್ತಿದ್ದಾರೆ. ಆದರೆ ಈ ದುಡಿಯುವ ವರ್ಗದ ಭೂಮಿಯನ್ನು ಅಕ್ರಮವಾಗಿ ಕಿತ್ತುಕೊಂಡಿರುವ ಭೂಮಾಲೀಕ ವರ್ಗ ಆಳುವ ವರ್ಗವಾಗಿದೆ. ಈ ಆಳುವವರು ಮತ್ತು ಆಳಿಸಿಕೊಳ್ಳುವ ಜನರ ನಡುವಿನ ಸಂಘರ್ಷವನ್ನು ಕಾದಂಬರಿಯಲ್ಲಿ ನಿರೂಪಣೆ ಮಾಡಲಾಗಿದೆ. 'ಚಿರಸ್ಮರಣೆ' ಕಾದಂಬರಿ ರಚನೆಗೂ ಮುಂಚಿತವಾಗಿ ಕನ್ನಡದಲ್ಲಿ ಶಿವರಾಮ ಕಾರಂತರ "ಚೋಮನದುಡಿ" ಕಾದಂಬರಿಯು ದುಡಿಯುವ ಜನರ ಭೂಮಿಯ ಬಗೆಗೆ ಪ್ರಜ್ಞೆಯನ್ನು ರೂಪಿಸಿತ್ತು. ಜೊತೆಗೆ ತೆಲಂಗಾಣ ರೈತ ಹೋರಾಟವು ದುಡಿವ ಜನರ ಭೂಮಿಯ ಹಕ್ಕನ್ನು

ಕುರಿತ ಹೋರಾಟವಾಗಿತ್ತು. ಈ ವಸ್ತುವಿಷಯವನ್ನು ವರ್ಗಸಂಘರ್ಷದ ನೆಲೆಯಲ್ಲಿ "ಉಳುವವನೇ ಹೊಲದ ಒಡೆಯ" ಎನ್ನುವ ಆಲೋಚನೆಯನ್ನು ಈ ಕಾದಂಬರಿಯು ನಿರೂಪಣೆಯಲ್ಲಿ ಕಾಣಬಹುದು. ಭೂಮಿಯ ಹಕ್ಕಿಗಾಗಿ ಹೋರಾಡುವ ದುಡಿಯುವ ವರ್ಗದ ಪಾತ್ರಗಳು ಸಮಾಜದ ಬದಲಾವಣೆಯನ್ನು ಬಯಸುತ್ತಿವೆ. ನಂಬಿಯಾರ ಮತ್ತು ನಂಬೂದರಿ ದುಡಿಯುವ ಜನರನ್ನು ಎಲ್ಲಾ ಹಕ್ಕಗಳಿಂದ ವಂಚಿಸಿ ಶೋಷಣೆ ಮಾಡುವ ವರ್ಗ. ಈ ವರ್ಗ ಶೋಷಣೆಯ ವಿರುದ್ಧ ರೈತರು ಸಂಘಟಿತರಾಗಿ, ಭೂಮಿಯ ಅಸಮಾನತೆ, ವರ್ಗಶೋಷಣೆ, ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಹೋರಾಡಿರುವ ಚರಿತ್ರೆಯನ್ನು ಕಟ್ಟಿಕೊಡುತ್ತಿದೆ. "ದಲಿತ ಕೋಟೆಯ ಎಲುಬುಗೂಡಿನ ಮೇಲೆ ಕಟ್ಟಿದ ಈ ಸಾಮ್ರಾಜ್ಯ ಖಂಡಿತ ಪುಡಿ ಪುಡಿಯಾಗ್ತದೆ! ಲೋಕದೆಲ್ಲ ದುಡಿಯವ ಜನ ವಿಜಯಪತಾಕೆ ಹಾರಿಸಿಯೇ ಹಾರಿಸ್ತಾರೆ!"[೫೦] ಎನ್ನುವ ನಿರೂಪಣೆಯ ಆಳದಲ್ಲಿ ಸಮಾಜದ ಸಮಾನತೆಯನ್ನು ಅಭಿವ್ಯಕ್ತಿಸುತ್ತಿದೆ.

ಯು.ಆರ್. ಅನಂತಮೂರ್ತಿ ಅವರ "ಸಂಸ್ಕಾರ" ಮತ್ತು "ಭಾರತೀಪುರ" ಕಾದಂಬರಿಗಳಲ್ಲಿ ದುಡಿಯುವ ವರ್ಗದ ಪಾತ್ರಗಳು ಕಾಣಿಸಿಕೊಳ್ಳುತ್ತದಾದರೂ ಅವರ ಭೂಮಿಯ ಒಡೆತನದ ಪ್ರಶ್ನೆ ಏಳುವುದಿಲ್ಲ. ಭಾರತೀಪುರದಲ್ಲಿ ಪಿಳ್ಳನಾದಿಯಾಗಿ ಎಲ್ಲ ಹೊಲೆಯ ಸಮುದಾಯದವರು ತನ್ನ ಭೂಮಿಯನ್ನು ಕಳೆದುಕೊಂಡು ಸವರ್ಣೀಯ ಜಮೀನಿನಲ್ಲಿ ಜೀತಗಾರರಾಗಿ ದುಡಿಯುತ್ತಾರೆ. ಹಾಗೆಯೇ ಮಲ ಹೊರುವ ವೃತ್ತಿಯನ್ನು ಸಹ ಮಾಡುವ ಪಾತ್ರಗಳು ಇವೆ. ಆದರೆ ಈ ಪಾತ್ರಗಳು ಭೂಮಾಲೀಕ ವ್ಯವಸ್ಥೆಯ ಶೋಷಣೆಯನ್ನು ಒಪ್ಪಿಕೊಂಡು ಹೋಗುವುದನ್ನು ಕಾಣುತ್ತೇವೆ. ಜಗನ್ನಾಥನು ಈ ಭೂಮಿವಂಚಿತ, ಶಿಕ್ಷಣವಂಚಿತ ದಲಿತ ಸಮುದಾಯಕ್ಕೆ ಅಕ್ಷರವನ್ನು ಕಲಿಸುವ ಪ್ರಯತ್ನ ಮಾಡುತ್ತಾನೆ ಮತ್ತು ದೇವಾಲಯ ಪ್ರವೇಶ ಮಾಡುವುದರಿಂದ ಇವರ ಮನಃಸ್ಥಿತಿಯನ್ನು ಬದಲಾಯಿಸುವ ಪ್ರಯತ್ನ ಇದೆ. ಇದು ಬರಿ ಸುಧಾರಣೆಯಾಗಿ ಕಾಣಿಸುತ್ತದೆ ಹೊರತು ಶೋಷಕ ವ್ಯವಸ್ಥೆಯ ಶೋಷಣೆಯ ವಿರುದ್ಧ ಬದಲಾವಣೆಯ ಬೆಳವಣಿಗೆ ಅಲ್ಲ. ದುಡಿಯುವ ವರ್ಗಶೋಷಣೆಯನ್ನು ಮುಚ್ಚಿಡುವ ಸಲುವಾಗಿ ಕಾದಂಬರಿಯು ಅವರಲ್ಲಿ ಜ್ಞಾನದ ಅರಿವಿನ ಹೆಸರಲ್ಲಿ ಅವರಲ್ಲಿ ಜಾಗೃತಿ ಮೂಡಿಸುವ ಪ್ರಯತ್ನವಾದರೂ ಮುಖ್ಯವಾದ ಭೂಮಿಯ ಒಡೆತನ, ಆಳುವ ವರ್ಗದ ಶೋಷಣೆಯನ್ನು ಆಳದಲ್ಲಿ ಮುಚ್ಚಿಡುತ್ತದೆ. ವರ್ಗ ಅಸಮಾನತೆಯನ್ನು ಕುರಿತು ಮಾತನಾಡುವ ಕಾದಂಬರಿಯು ಆ ವರ್ಗದ ಅಸಮಾನತೆಯ ವಿರುದ್ಧ ಧ್ವನಿ ಮಾಡುವುದಿಲ್ಲ. ಹೀಗಾಗಿ ದುಡಿಯುವ ವರ್ಗದ ಪಾತ್ರಗಳು ತನ್ನ ವರ್ಗಪ್ರಜ್ಞೆಯನ್ನು ಮುಚ್ಚಿಟ್ಟ ಶ್ರಮಿಕ ವರ್ಗವಾಗಿ ಗುರುತಿಸಬಹುದು.

ದೇವನೂರ ಮಹಾದೇವ ಅವರ 'ಒಡಲಾಳ' ಮತ್ತು 'ಕುಸುಮಬಾಲೆ' ಕಾದಂಬರಿಗಳು ದಲಿತ ಸಮುದಾಯದ ಸೂಕ್ಷ್ಮ ನೋಟಗಳನ್ನು ದಾಖಲಿಸುತ್ತವೆ. 'ಒಡಲಾಳ'ದಲ್ಲಿ ಸಾಕವ್ವನ ಕುಟುಂಬವು ಕಳೆದುಕೊಂಡಿರುವ ಹಕ್ಕನ್ನು ಹುಡುಕುವ ಪ್ರಯತ್ನವಿದೆ. ಇಲ್ಲಿ ಬರುವ ಹುಂಜವನ್ನು ಇವರ ಹಕ್ಕಿನ ಭಾಗವಾಗಿ ಗ್ರಹಿಸಿದರೆ, ಆ ಹುಂಜವನ್ನು ಕಳೆದುಕೊಂಡ ಕುಟುಂಬವು ಅದರ

ಅನ್ವೇಷಣೆಗೆ ಮುಂದಾಗುವುದು. ಈ ಪ್ರಕ್ರಿಯೆ ಗಮನಿಸಿದ ಆಳುವ ವರ್ಗವು ಎತ್ತಪ್ಪನ ಮೂಲಕ ಕಡಲೆಕಾಯಿ ಆರೋಪವನ್ನು ಹೊರಿಸಿ ಇವರ ಮೇಲೆ ದೌರ್ಜನ್ಯ ಮಾಡುವುದನ್ನು ಚಿತ್ರಿಸುತ್ತದೆ. ಇಲ್ಲಿ ಬರುವ ಭೂಮಾಲೀಕ ವರ್ಗ ಮತ್ತು ಪ್ರಭುತ್ವದ ಶೋಷಣೆಯಿಂದ ಇವರು ಹೊಂದಿರುವ ಹಕ್ಕುಗಳು ಕೂಡ ಕಳೆದುಕೊಳ್ಳುವುದು ಎರಡನೇ ಹುಂಜದ ಘಟನೆಯಿಂದ ಧ್ವನಿಸುತ್ತದೆ. ಆದರೆ ಕಾದಂಬರಿಯಲ್ಲಿ ಮೇಲುವರ್ಗವು ಶೋಷಣೆ ಮಾಡುತ್ತಿದ್ದರೂ ಕೆಳವರ್ಗದ ಪಾತ್ರಗಳು ಅವರ ವಿರುದ್ಧ ಜಾಗೃತಿಯಾಗುತ್ತಾರೆ ಹೊರತು ಆ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವುದಿಲ್ಲ. "ಎತ್ತಪ್ಪನೇನ ದುಡುದು ಬೆವರಿಳಿಸಿ ರಗತ ಬಸುದು ಸಂಪಾದ್ನ ಮಾಡಿದ್ದನ ತಗಾ. ಹೋದ್ರ ಅವನ್ದೇ ನೋದ್ದು ಗುಡ್ಡ ಹಾಕಿರೊ ಬಡ್ಡಿ ದುಡ್ಡದಲ್ಲಿ ಸಿವುರುಕನ"[೫೨] ಎಂದು ಕಾಳಣ್ಣ ಹೇಳಿದ್ದು. ಹಾಗೆಯೇ ಗುರುಸಿದ್ಧನು ಪೊಲೀಸರನ್ನು ನೋಡಿದ ಕ್ರಮದಲ್ಲಿ ಜಾಗೃತಿಯಾಗುತ್ತಿರುವುದು ಕಾಣುತ್ತೇವೆ. ಆದರೆ ಕಾದಂಬರಿಯಲ್ಲಿ ಗೌರಮ್ಮ, ಪುಟಗೌರಿ ಕೂಲಿ ಮಾಡುವುದನ್ನು ಚಿತ್ರಿಸಲಾಗಿದೆ. ಆದರೆ ಅವರ ಭೂಮಿಯ ಹಕ್ಕಿನ ಕುರಿತು ಮಾತನಾಡುವುದಿಲ್ಲ. ಇದರಿಂದ ಕಾದಂಬರಿಯು ದುಡಿಯುವ ಜನರ ಹಕ್ಕಿನ ಪ್ರಶ್ನೆಯನ್ನು ಗೌಣಗೊಳಿಸಿ ನಿರೂಪಿಸಿ ರುವುದನ್ನು ಕಾಣುತ್ತೇವೆ.

"ಕುಸುಮಬಾಲೆ"ಯಲ್ಲಿ ಕೂಡ ದಲಿತ ಸಮುದಾಯದ ಸಮಸ್ಯೆಗಳಿಗೆ ಹೆಚ್ಚು ಒತ್ತು ಕೊಟ್ಟಿದೆ. ಜಾತಿ ಸಂಬಂಧಗಳು, ಜಾತಿ ಸಂಘರ್ಷವನ್ನು ಕುರಿತು ಮಾತನಾಡುತ್ತಿದೆ. ಕುಸುಮ ಮತ್ತು ಹೊಲೆಯರ ಚನ್ನನ ಸಂಬಂಧವನ್ನು ಸಹಿಸದ ಮೇಲುವರ್ಗ ಅವನನ್ನು ಕೊಲೆ ಮಾಡುತ್ತದೆ. "ಆ ಕೊಲೆಯನ್ನು ಮುಚ್ಚಿಡಲಾಗಿರುತ್ತದೆ ಮತ್ತು ಆ ಕೊಲೆಯನ್ನು ಮರೆಸುವ ಸಲುವಾಗಿ ಚನ್ನನು ಬಾಂಬೆಯಲ್ಲಿ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದಾನೆ. ದಿಲ್‌ದಾರಿನಿಂದ ಕಾರಿನಲ್ಲಿ ಓಡಾಡುತ್ತಿದ್ದಾನೆ, ಅವನನ್ನು ಎಂಥೆಂತವರೋ ಬಂದು ಮಾತನಾಡಿಸಿಕೊಂಡು ಹೋಗುತ್ತಿದ್ದಾರೆ... ಮುಂತಾದ ಸುದ್ದಿಯನ್ನು ಹರಡಲಾಗುತ್ತದೆ. ಚೆನ್ನನ ತಾಯಿ-ತಂದೆಗೂ ಈ ವಿಷಯವನ್ನು ಮುಟ್ಟಿಸಲಾಗುತ್ತದೆ. ಇದನ್ನು ಅವರಿಬ್ಬರೂ ಪರಸ್ಪರ ಮಾತನಾಡಿಕೊಂಡು ಸಂಭ್ರಮ ಪಡುತ್ತಾರೆ. ಅವರ ಆ ಸಂಭ್ರಮದ ಹಿಂದೆ ಅದೆಂತ ಘೋರವಾದ ದುರಂತವಿದೆ ಎಂದರೆ ಅದನ್ನು ನೆನೆಸಿಕೊಂಡರೆ ಸಾಕು ಮೈ ಜುಂ! ಎನ್ನುತ್ತದೆ".[೫೩] ಇಲ್ಲಿ ಮೇಲುವರ್ಗವು ಕೆಳವರ್ಗದವರ ಮೇಲೆ ದೌರ್ಜನ್ಯ ಮಾಡಿ, ಅವರನ್ನು ಕೊಲೆ ಮಾಡುವ ಮಟ್ಟಕ್ಕೆ ಇಳಿಯುವ ಜಾತಿಯ ಶೋಷಣೆಯನ್ನು ಕಾದಂಬರಿಯು ಚಿತ್ರಿಸುತ್ತದೆ. ಹಾಗೆಯೇ ಚನ್ನ ಮತ್ತು ಆತನ ಗುರು ಮಧ್ವಾಚಾರ್ಯರ ನಡುವಿನ ಸಂವಾದದಲ್ಲಿ ಅಂತರ್‌ಜಾತಿ ವಿವಾಹದ ಕುರಿತು ಉಲ್ಲೇಖ ಬರುತ್ತದೆ. ಗಾರಸಿದ್ಮಾವನ ಪ್ರಸಂಗ, ಚನ್ನ-ಮಧ್ವಾಚಾರ್ಯರ ಸಂವಾದ, ಮಾರಿಗುಡಿಯಲ್ಲಿ ದಸಂಸ ಸಭೆ ಈ ಎಲ್ಲ ಸನ್ನಿವೇಶಗಳು ಮೇಲುವರ್ಗದ ಶೋಷಣೆಯ ವಿರುದ್ಧ ಜಾಗೃತಿಯ ಸಂಕೇತವಾಗಿವೆ. ಆದರೆ ಕಾದಂಬರಿಯಲ್ಲಿ ಈ ಶ್ರಮಜೀವಿಗಳು ಭೂಮಿಯ ಹಕ್ಕಿನ ಬಗೆಗೆ ಮಾತನಾಡುವುದಿಲ್ಲ. ಜೊತೆಗೆ ಮೇಲುವರ್ಗದ ಜಾತಿಶೋಷಣೆಯ ವಿರುದ್ಧ, ವರ್ಗಶೋಷಣೆಯ ವಿರುದ್ಧ

ಕಾದಂಬರಿಯಲ್ಲಿ ಪ್ರತಿಭಟನೆ ಇಲ್ಲ. ಇದರಿಂದ ಕಾದಂಬರಿಯು ದುಡಿಯುವ ವರ್ಗ ಸಮಸ್ಯೆಗಳನ್ನು ಎತ್ತುತ್ತದೆ ಹೊರತು ಅದನ್ನು ವರ್ಗಪ್ರಜ್ಞೆಯ ಭಾಗವಾಗಿ ಗ್ರಹಿಸದೆ ಇರುವುದನ್ನು ಕಾಣುತ್ತೇವೆ.

ಆರ್.ವಿ. ಭಂಡಾರಿಯವರ 'ಬೆಂಕಿಯ ಮಧ್ಯ' ಕಾದಂಬರಿಯ ದಲಿತ ಸಮುದಾಯದವರು ಮೇಲುಜಾತಿ, ಭೂಮಾಲೀಕರ ದಬ್ಬಾಳಿಕೆ ಒಳಗಾಗಿ, ಅದರಿಂದ ಬಿಡುಗಡೆಗಾಗಿ ಒತ್ತಾಯಿಸುತ್ತದೆ. ಕಾದಂಬರಿಯ ಮುನಿಯಪ್ಪನ ಪಾತ್ರವನ್ನು ಗಮನಿಸಿದರೆ ಬಾಲಕನಾಗಿದ್ದಾಗ ಸವರ್ಣಿಯರ ಶೋಷಣೆ, ದೌರ್ಜನ್ಯಗಳನ್ನು ಸಹಿಸಿ ಓದಿ, ಹೆಚ್ಚಿನ ವಿದ್ಯಾಭ್ಯಾಸಕ್ಕೆ ನಗರಕ್ಕೆ ಬಂದು ಅಧ್ಯಯನ ಕೈಗೊಳ್ಳುತ್ತಾನೆ. ಕಬಡ್ಡಿ ಆಟದಲ್ಲಿ ತನ್ನ ಮಗನ ಕಾಲು ಎಳೆದಿದ್ದಕ್ಕಾಗಿ, ಅಪ್ಪನಿಂದಲೇ ಮಗನನ್ನು ಹೊಡೆಯಿಸಿದ ಭೂಮಾಲೀಕರ ಕ್ರೌರ್ಯವನ್ನು ಸಹಿಸಿ, ಧಿಕ್ಕರಿಸಿ ಓದಲು ನಗರಕ್ಕೆ ಬಂದು ಅಧ್ಯಯನ ಮಾಡಿ ದಕ್ಷ ಅಧಿಕಾರಿಯಾಗುತ್ತಾನೆ. ಅಂಬೇಡ್ಕರ್ ಚಿಂತನೆಗಳ ಅಧ್ಯಯನ ಅವನ ಜ್ಞಾನಕ್ಷೇತ್ರವನ್ನು ವಿಸ್ತರಿಸುತ್ತದೆ. ದಲಿತ ಸಂಘರ್ಷ ಸಮಿತಿಯ ಮೂಲಕ ಅಸ್ಪೃಶ್ಯತಾ ನಿವಾರಣೆಯ ಹೋರಾಟಕ್ಕೆ ಧುಮುಕುತ್ತಾನೆ. ಸವರ್ಣೀಯ ಗೂಂಡಾಗಳು ದಲಿತರ ಪ್ರತಿಭಟನೆಯ ಮೇಲೆ ದೌರ್ಜನ್ಯ ಮಾಡುತ್ತಾರೆ. ಹೀಗೆ ಹಳ್ಳಿಯ ಭೂಮಾಲೀಕ ವರ್ಗ ಮತ್ತು ಮೇಲುವರ್ಗದ ಅಧಿಕಾರಿಗಳು, ಕೆಳವರ್ಗದ ಪ್ರತಿನಿಧಿಗಳ ಮೇಲೆ ಶೋಷಣೆ ಮಾಡುವ ಚಿತ್ರಣವನ್ನು ಕಟ್ಟಿಕೊಡುವುದರ ಮೂಲಕ ದುಡಿಯುವ ಜನರ ಬದಲಾವಣೆಗಾಗಿ ಶ್ರಮಿಸುವ ಜನರನ್ನು ಈ ವ್ಯವಸ್ಥೆ ಹೇಗೆ ನಿಯಂತ್ರಿಸುತ್ತದೆ ಎಂಬುದಕ್ಕೆ ಮುನಿಯಪ್ಪನಿಗೆ ಆದ ಅನ್ಯಾಯವನ್ನು ಗಮನಿಸಬಹುದು. ಮುನಿಯಪ್ಪ ಚಿಕ್ಕಣ್ಣನ ಸಂಭಾಷಣೆ ಗಮನಿಸಿದರೆ "ಹೌದು ನಾನು ಮಾತ್ರ ಅಲ್ಲ ಸಾರ್ ನಮ್ಮ ಜನಾಂಗವೇ ಬೆಂಕಿಯಲ್ಲಿದೆ. ದಿನಬೆಳಗಾದ್ರೆ ಪೇಪರಿನಲ್ಲಿ ನೋಡ್ತೇವಲ್ಲ: ಅಲ್ಲಿ ಅಷ್ಟು ಹರಿಜನರನ್ನು ಥಳಿಸಿದ್ರು ಇಲ್ಲಿ ಎಷ್ಟು ಹರಿಜನರನ್ನು ಸುಟ್ಟರು ಅಂತ"[೧೪] "ರಾಕ್ಷಸ್ರು ತಮ್ಮ ಜೀತದಲ್ಲಿ ಜೀವನ ಕಳಿಬೇಕು ತಮ್ಮ ತಲ್ಬಿಗೆ ನಮ್ಮ ಹೆಣ್ಣುಗಳಾಗಬೇಕು. ನ್ಯಾಯ ಕೇಳಿದ್ರೆ ಬೋಳಿ ಮಕ್ಳು ಉರ್ದ ಬೀಳ್ತಾವೆ. ನಮ್ಮ ಜನಾ ಎಚ್ಚೆತ್ತಿದ್ದಾರೆ. ನೋಡಿ ಈ ಎಚ್ಚೆತ್ತವರ ಪ್ರತಿಭಟನೆ ಅಡಗಿಸಲು ಎಂತ ನೀಚ ಕೃತ್ಯ ಮಾಡ್ತಾರೆ. ಎಲ್ಲಿ ನೋಡಿದ್ರೂ ಹರಿಜನರ ಕೊಲೆ"[೧೫] ಎಂದು ಮುನಿಯಪ್ಪನ ಮಾತುಗಳು ಭೂಮಾಲೀಕ ವ್ಯವಸ್ಥೆ ಮತ್ತು ಪ್ರಭುತ್ವದ ಶೋಷಣೆಯ ಮುಖಗಳನ್ನು ನಿರೂಪಿಸುತ್ತಿದೆ.

ದುಡಿಯುವ ಜನರು ಹಳ್ಳಿಯಿಂದ ನಗರಕ್ಕೆ ಬಂದರೆ ಜೀತದಾಳು ಇಲ್ಲವಾಗುತ್ತಾರೆ. ಗದ್ದೆ, ತೋಟಗಳಲ್ಲಿ ದುಡಿಯುವವರು ಇಲ್ಲವಾಗುತ್ತಾರೆ ಎಂದು ಭೂಮಾಲೀಕ ವ್ಯವಸ್ಥೆ ಶ್ರಮಿಕರ ಮೇಲೆ ದೌರ್ಜನ್ಯ ಮಾಡುತ್ತಾರೆ. ಕೊನೆಯಲ್ಲಿ ಕಾದಂಬರಿಯು ಈ ಶೋಷಕ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುತ್ತದೆ. "ಈಗ ದಲಿತರನ್ನು ಬೆಂಕಿಯಲ್ಲಿ ಹಾಕ್ತಿರೋ ಜನ ತಾವು ಬೆಂಕಿ ಮಧ್ಯದಲ್ಲಿದ್ದೇವೆ ಎಂದು ತಿಳಿದಿಲ್ಲ. ಈ ಬೆಂಕಿ ಯಾವಾಗ ಬುಗಿಲ್ ಎನ್ನುತ್ತೋ ಈ ಇವರನ್ನೆಲ್ಲ ಬೂದಿಮಾಡುತ್ತೋ ತಿಳೀದು"[೧೬] ಎನ್ನುವ ಮುನಿಯಪ್ಪನ ಮಾತಿನಲ್ಲಿ ಶೋಷಣೆ ವ್ಯವಸ್ಥೆ ನಾಶದ ಸಂಕೇತವಾಗಿ ಕಾಣಿಸುತ್ತದೆ. ಒಟ್ಟಾರೆ ಕಾದಂಬರಿಯಲ್ಲಿ ದುಡಿಯುವ ಜನರು

ಆಳುವ ವರ್ಗದ ಶೋಷಣೆಯ ನಡುವೆ ಶಿಕ್ಷಣ ಕಲಿತು, ನೌಕರಿ ಪಡೆದು ಶೋಷಣೆಯ ವ್ಯವಸ್ಥೆಯ ವಿರುದ್ಧ ಹೋರಾಡುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಇಲ್ಲಿ ಜಾತಿಶೋಷಣೆಯ ವಿರುದ್ಧ ಧ್ವನಿ ಇದೆ. ಆದರೆ ಈ ಶೋಷಣೆಗೆ ಒಳಗಾದ ಜನರ ಹಕ್ಕಿನ ಕುರಿತು ಕಾದಂಬರಿಯು ಒತ್ತಾಯಿಸುವುದಿಲ್ಲ. ಇಲ್ಲಿ ಬರುವ ಹರಿಜನರು ದುಡಿಯುವ ವರ್ಗದ ಪ್ರತಿನಿಧಿಗಳಾಗಿ ಗುರುತಿಸಬಹುದು.

ಬರಗೂರು ರಾಮಚಂದ್ರಪ್ಪ ಅವರ "ಸೂರ್ಯ" ಕಾದಂಬರಿಯಲ್ಲಿ ಕರಿಯ ಗೌಡನ ಮನೆಯ ಜೀತದ ಆಳು. ಇವನ್ನು ಗೌಡನ ಶೋಷಣೆಯನ್ನು ಒಪ್ಪಿಕೊಂಡು ದುಡಿಯುತ್ತಿದ್ದ. ಗೌಡನ ಅಪ್ಪಣೆ ಇಲ್ಲದೆ ಒಂದು ಹುಲ್ಲು ಕಡ್ಡೀನೂ ಅಲುಗಾಡೋ ಹಂಗಿಲ್ಲ. ಅಂತಹ ಹೀನಾಯ ಸ್ಥಿತಿಯಲ್ಲಿ ಅವನನ್ನು ನಡೆಸಿಕೊಳ್ಳುತ್ತಿದ್ದನು. ಇಲ್ಲಿ ಗೌಡ ಮತ್ತು ಕರಿಯನಿಗೆ ಒಡೆಯ-ಆಳಿನ ಸಂಬಂಧವಿದೆ. ಜೊತೆಗೆ ಶೋಷಕ-ಶೋಷಿತ ಸಂಬಂಧಗಳಿವೆ. ಕರಿಯನ ಮನೆಯ ಜಗಳವು, ಗೌಡನ ಮನೆಯ ತೀರ್ಮಾನಕ್ಕೆ ಹೋಯಿತು. ಇಲ್ಲಿ ಭೂಮಾಲೀಕ ನಮ್ಮ ಮನೆಯಲ್ಲಿ ಜೀತಕ್ಕಿದ್ದು ನಮಗೆ ಕೆಟ್ಟ ಹೆಸರು ತಂದ ಎಂದು ಯಾರ ಬಿಟ್ಟು ಹೋಗುವುದಕ್ಕೆ ತೀರ್ಮಾನ ಕೊಡುತ್ತಾನೆ. ಆದರೆ ಗೌಡ ಹೆಂಡತಿ ಸೀತಕ್ಕ ಕರಿಯನ ಪರವಾಗಿ ನಿಲ್ಲುತ್ತಾಳೆ. ಇದರಿಂದ ಗೌಡನು ಕರಿಯನ ಮೇಲೆ ದ್ವೇಷವನ್ನು ಮತ್ತಷ್ಟು ಹೆಚ್ಚಿಗೆ ಮಾಡಿಕೊಳ್ಳುತ್ತಾನೆ. ಆದರೆ ಗೌಡನ ಮನೆಯ ಆಂತರಿಕ ಭಿನ್ನಾಭಿಪ್ರಾಯಗಳು ಗೌಡನು ಪ್ರತಿನಿಧಿಸುವ ಊಳಿಗಮಾನ್ಯ ಶಾಹಿ ವ್ಯವಸ್ಥೆಯನ್ನು ಮೀರಿ ಸೀತಕ್ಕ ಕರಿಯನ ನಡುವೆ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತಾಳೆ. ಇದರಿಂದ ಕರಿಯ ಗೌಡನ ವಿರೋಧಿಯಾಗುತ್ತಾನೆ. ಇಲ್ಲಿ ಕರಿಯ ಪ್ರತಿನಿಧಿಸುವ ದುಡಿಯುವ ವರ್ಗವೇ ವರ್ಗಹೋರಾಟ ವೈರಿಯಾಗಿರುವುದನ್ನು ಇದು ಸೂಚಿಸುತ್ತದೆ. ಅಂದರೆ ಗ್ರಾಮೀಣ ಪ್ರದೇಶದಲ್ಲಿ ಶ್ರಮಜೀವಿ ವರ್ಗವು ಊಳಿಗಮಾನ್ಯಶಾಹಿ ಶಕ್ತಿಗಳಿಗೆ ಶತ್ರುವಾಗಿರುವುದನ್ನು ಅಭಿವ್ಯಕ್ತಿಸುತ್ತಿದೆ. ಸೀತಕ್ಕ ಮಾತ್ರ ಮೇಲ್ವರ್ಗದ ಮೌಲ್ಯಗಳನ್ನು ಧಿಕ್ಕರಿಸಿ ಕರಿಯನ ಜೊತೆ ಹೋಗುವುದು ಸಾಮಾಜಿಕ ಸಮಸ್ಯೆಗಳಿಗೆ ಚಾರಿತ್ರಿಕ ಶಕ್ತಿಯಾಗಿ ಕಾಣಿಸುತ್ತದೆ. ಮೇಲುವರ್ಗದ ಶೋಷಣೆಗೆ ಒಳಗಾದ ಕರಿಯ ಮತ್ತು ಸೀತಕ್ಕ, ಶೋಷಿತ ಶಕ್ತಿಯಾಗಿ ಒಂದಾಗುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಇಲ್ಲಿ ಮೇಲುವರ್ಗ, ಶೋಷಣೆಯ ವಿರುದ್ಧದ ಪ್ರತಿಭಟನೆ ಮಾಡುವ ಕಾದಂಬರಿಯು ದುಡಿಯುವ ವರ್ಗದ ಹಕ್ಕಿನ ಪ್ರಶ್ನೆಯ ಬಗೆಗೆ ಚರ್ಚಿಸುವುದಿಲ್ಲ. ಅವರ ಸಮಸ್ಯೆಗಳ ಮೂಲಕ ವರ್ಗಶೋಷಣೆಯ ವಿರುದ್ಧ ಶೋಷಿತರ ಜಾಗೃತಿಗೆ ಹೆಚ್ಚಿನ ಒತ್ತನ್ನು ಕೊಟ್ಟಿದೆ.

ಮುಳ್ಳೂರು ನಾಗರಾಜ ಅವರ "ಮರಣ ಮಂಡಲ ಮಧ್ಯದೊಳಗೆ" ಕಾದಂಬರಿಯಲ್ಲಿ ಮೇಲುವರ್ಗವು ಕೆಳವರ್ಗದ ಜನರ ಮೇಲೆ ಜಾತಿದೌರ್ಜನ್ಯ ಮಾಡುವುದರ ಮೂಲಕ ಅವರನ್ನು ಶೋಷಣೆ ಮಾಡುತ್ತದೆ. ಅದಕ್ಕೆ ಪ್ರತಿಯಾಗಿ ಕೆಳವರ್ಗವು ಈ ಜಾತಿ ಶೋಷಕ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವ ಮನೋಭಾವವನ್ನು ಕಾದಂಬರಿಯು ನಿರೂಪಿಸುತ್ತದೆ.

ಕಾದಂಬರಿಯಲ್ಲಿ ಬಸವರಾಜನ ಪಾತ್ರವು ಮೇಲುವರ್ಗದ ಶೋಷಣೆಯನ್ನು ವಿರೋಧಿಸುವುದಾಗಿದೆ. ಹೊಲ್ಯಾರ ಸಿದ್ದಿ ಮತ್ತು ಗೌಡರ ಕಿರಿಯ ಮಗ ಚಂದ್ರಪ್ಪ ಇವರ ಸಂಬಂಧ, ಹೋಟೆಲು ನಿಂಗವ್ವ ಅಸ್ಪೃಶ್ಯರನ್ನು ಕಾಣುವ ರೀತಿ, ಹೊಲ್ಯಾರ ರಂಗಿ-ರಂಗಿಯರ ಪ್ರಕರಣ ಹೀಗೆ ಜಾತಿ ವ್ಯವಸ್ಥೆಯ ವಿಭಿನ್ನ ಮುಖಗಳು ಇಲ್ಲಿ ಕಣ್ಣಿಗೆ ಕಟ್ಟುತ್ತವೆ. ಹಾಗಾಗಿ ಕಾಡೂರಲ್ಲಿ ಅಂಬೇಡ್ಕರ್ ಸಂಘವನ್ನು ತಾನೇ ಕಟ್ಟಬೇಕೆಂದು ಯತ್ನಿಸುತ್ತಾನೆ. ಈ ಮೂಲಕ ಮೇಲುವರ್ಗದವರ ಶೋಷಣೆಯ ವಿರುದ್ಧ ಹೋರಾಟವನ್ನು ಸುರು ಮಾಡುತ್ತಾನೆ. ಹೀಗೆ ಕಾದಂಬರಿ ಕೊನೆಗೊಂಡರೂ ದಲಿತ ಹೋರಾಟ ಸೂಚನೆಯನ್ನು ಕೊಡುತ್ತದೆ. ಹೀಗೆ ದಲಿತ ಚಳುವಳಿಯ ತಾತ್ವಿಕತೆಯನ್ನು ಕೃತಿಯಲ್ಲಿ ಅಳವಡಿಸಿಕೊಂಡಿದ್ದಾರೆ. ಆದರೆ ದುಡಿಯುವ ವರ್ಗದ ಪಾತ್ರಗಳು ತನ್ನ ವರ್ಗ ಶೋಷಣೆಯನ್ನು ವಿರೋಧಿಸುವುದಿಲ್ಲ. ಅವು ಶೋಷಣೆಯನ್ನು ಒಪ್ಪಿಕೊಳ್ಳುತ್ತವೆ. ಬಸವರಾಜನ ಪಾತ್ರ ಮಾತ್ರ ವ್ಯವಸ್ಥೆಯ ವಿರುದ್ಧ ಧ್ವನಿ ಮಾಡುತ್ತದೆ. ಆದರೆ ದುಡಿಯುವ ಜನರ ವರ್ಗಶೋಷಣೆ, ಅವರ ಭೂಮಿಯ ಹಕ್ಕಿನ ಬಗೆಗೆ ಮಾತನಾಡುವುದಿಲ್ಲ.

ಶಿವರುದ್ರ ಕಲ್ಲೋಳಿಕರ ಅವರ "ಹೊಲಗೇರಿಯ ರಾಜಕುಮಾರ" ಕಾದಂಬರಿಯು ಸಮಾಜದ ಸೂಕ್ಷ್ಮವಾದ ವಾಸ್ತವ ಘಟನೆಯನ್ನು ವಸ್ತುವಾಗಿ ನಿರೂಪಿಸಿದೆ. ಸಂಪತ್ತಿನ ಅಸಮಾನತೆಯ ಕಾರಣಕ್ಕಾಗಿ ಮೇಲು-ಕೀಳು ಎಂಬ ಭಿನ್ನ ನಿಲುವುಗಳನ್ನು ಸೃಷ್ಟಿಸಿರುವ ಸಮಾಜದ ಮೌಲ್ಯಗಳನ್ನು ಮುರಿಯುವ ಪ್ರಯತ್ನ ಇದರಲ್ಲಿದೆ. ಭೂಮಿಯ ಒಡೆತನ ಕಳೆದುಕೊಂಡಿರುವ ದುಡಿಯುವ ವರ್ಗ ಅದರ ಹಕ್ಕಿಗಾಗಿ ಪ್ರತಿಭಟಿಸುತ್ತದೆ. ಆದರೆ ಭೂಮಿಯ ಒಡೆತನ ಪಲ್ಲಟವಾಗುತ್ತದೆ ಎಂದು ಭೂಮಾಲೀಕ ವರ್ಗ ಈ ಶೋಷಿತ ವರ್ಗದವರ ಮೇಲೆ ನಿರಂತರವಾಗಿ ಶೋಷಣೆಯನ್ನು ಮುಂದುವರೆಸುತ್ತಿರುತ್ತದೆ. ಈ ವಾಸ್ತವದ ಚಿತ್ರಣವನ್ನು ಕಾದಂಬರಿಯಲ್ಲಿ ಕಾಣಬಹುದು. ಕೆಳವರ್ಗದವರಾದ ಹೊಲೆಯರು, ಮಾದಿಗರು, ಸಮಗಾರರು ಕೆಳವರ್ಗವನ್ನು ಪ್ರತಿನಿಧಿಸುತ್ತಿದ್ದಾರೆ. ಮರಾಠಿಗರು, ಪಾಟೀಲರು, ಒಣಮುಕಳೇರು ಮೇಲುವರ್ಗದ ಪ್ರತಿನಿಧಿಗಳು. ಇವರು ಕೆಳವರ್ಗದ ಜನರ ಭೂಮಿಯ ಹಕ್ಕನ್ನು ವಂಚಿಸಿದ ಭೂಮಾಲೀಕ ವರ್ಗವಾಗಿ ಕಾದಂಬರಿ ಚಿತ್ರಿಸುತ್ತದೆ. ಇಲ್ಲಿ ಕೆಳವರ್ಗದವರಿಗೆ ಮೇಲುವರ್ಗದವರಿಗೆ ಉತ್ಪಾದನಾ ಸಂಬಂಧವಿದೆ. ರಾಮಕ್ಕ, ಸುಮತಿ, ಸೀತವ್ವ ಶ್ರಮಜೀವಿಗಳಾಗಿ ದುಡಿಯುತ್ತಿದ್ದಾರೆ. ಆದ್ದರಿಂದ ಇವರ ನಡುವೆ ಶೋಷಿಕ-ಶೋಷಿತ ಸಂಬಂಧಗಳು ಏರ್ಪಟ್ಟಿವೆ. ಅದೇ ರೀತಿ ಮಾದೇವ ಕೆಳವರ್ಗದಲ್ಲಿ ಬೆಳೆದು, ಶಿಕ್ಷಣ ಕಲಿತು ನೌಕರಿ ಪಡೆದುಕೊಂಡು, ತನ್ನ ವರ್ಗದ ಶೋಷಣೆಯ ವಿರುದ್ಧ ಹೋರಾಟಕ್ಕೆ ಇಳಿಯುತ್ತಾನೆ. ಖಂಡೋಬಾನ ಪಾತ್ರವು ಹಸಿವಿನಲ್ಲಿ ಬೆಂದು ಹೋಗುತ್ತಿರುವ ದುಡಿಯುವ ಜನರನ್ನು ಪ್ರತಿನಿಧಿಸುತ್ತಿದೆ. ಹೀಗೆ ಆಳುವ ವರ್ಗದ ಶೋಷಣೆಯ ಪರಿಣಾಮವಾಗಿ ಹುಟ್ಟಿಕೊಂಡಿರುವ ಈ ಸಮಸ್ಯೆಗಳನ್ನು 'ಮಾದೇವ' ಹೋರಾಟ ಮಾಡುವುದರ ಮೂಲಕ ನಾಶ ಮಾಡಬೇಕು ಎನ್ನುವ ನಿಲುವಿಗೆ ಬರುವುದನ್ನು ಗಮನಿಸಿದರೆ ಕಾದಂಬರಿಯು ವರ್ಗಶೋಷಣೆಯನ್ನು ವಿರೋಧಿಸುತ್ತಲೇ ಅದರ ಆಳದಲ್ಲಿ ಸಮಾನತೆಯ ಸಮಾಜಕ್ಕಾಗಿ ದುಡಿಯುತ್ತದೆ.

ಮಾದೇವನು ದುಡಿಯುವ ವರ್ಗದಲ್ಲಿ ಬೆಳೆದು ತನ್ನ ಹುಟ್ಟಿನ ಮೂಲ ತಿಳಿದು ತಾನು ಬೆಳೆದ ಮೂಲಸಂಸ್ಕೃತಿಯನ್ನು ವಿರೋಧಿಸುತ್ತಾನೆ. ತನ್ನ ಉಚ್ಚಸಂಸ್ಕೃತಿಯ ವ್ಯಾಪ್ತಿಯಲ್ಲಿ ಬದುಕನ್ನು ನಡೆಸುತ್ತಾನೆ. ಅವನಿಗೆ ಪ್ರೇರಣೆಯಾದ ಅಂಬೇಡ್ಕರ್ ಆಲೋಚನೆಗಳನ್ನು ಮೀರುವ ಪ್ರಯತ್ನ ಮಾಡುತ್ತಾನೆ. ಆದರೆ ಅಲ್ಲಿ 'ಮಾದೇವ'ನಿಗೆ ಬದುಕುವುದಕ್ಕೆ ಸಾಧ್ಯವಾಗದೆ ಮರಳಿ ದುಡಿಯುವ ವರ್ಗದ ಸಂಸ್ಕೃತಿಗೆ ಮರಳುವುದು ಸಮಾಜದ ಸಾಮಾಜಿಕ ದುಡಿಮೆಯ ಮೌಲ್ಯಗಳನ್ನು ಎತ್ತಿಹಿಡಿಯುತ್ತದೆ. ಶಿಕ್ಷಣ ಕಲಿತು, ದುಡಿಯುವ ಜನರ ಭೂಮಿಯ ಹಕ್ಕು, ಮೀಸಲಾತಿಯ ಪರವಾಗಿ ಮತ್ತು ಜಾತಿಶೋಷಣೆ, ಅಸಮಾನತೆಯನ್ನು ಹೋಗಲಾಡಿಸುವ ಸೈದ್ಧಾಂತಿಕ ಹೋರಾಟಕ್ಕೆ ಮತ್ತೆ ಮಾದೇವನ ಕುಟುಂಬ ಮುಂದಾಗುವುದು ಒಂದು ಕ್ರಿಯಾಶೀಲವಾದ ಬದಲಾವಣೆಯನ್ನು ಸೂಚಿಸುತ್ತದೆ. ಹೀಗೆ ಕಾದಂಬರಿಯು ದುಡಿಯುವ ವರ್ಗದ ಮೇಲೆ ನಡೆಯುತ್ತಿರುವ ವರ್ಗಶೋಷಣೆಯನ್ನು ಪ್ರತಿಭಟಿಸುವುದರ ಮೂಲಕ ಎಲ್ಲ ಬಗೆಯ ಅಸಮಾನತೆಯನ್ನು ತೊಲಗಿಸುವ ಆಸಕ್ತಿಯನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಅದರಲ್ಲಿಯು ದುಡಿಯುವ ವರ್ಗವು ತಮ್ಮ ಹಕ್ಕುಗಳನ್ನು ಹೋರಾಟದ ಮೂಲಕ ಪಡೆದುಕೊಳ್ಳಬಹುದು ಎಂದು ಕಾದಂಬರಿಯು ನಿರೂಪಿಸುತ್ತದೆ.

ಕನ್ನಡ ಕಾದಂಬರಿಗಳು ಸಮಾಜದಲ್ಲಿ ನಡೆಯುತ್ತಿರುವ ಅನೇಕ ಸೂಕ್ಷ್ಮ ವಿಷಯಗಳನ್ನು ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ. ಅದರಲ್ಲಿಯೂ ಅಸಮಾನತೆ, ಶೋಷಣೆ, ತಾರತಮ್ಯ ಹಾಗೂ ಅನ್ಯಾಯಗಳನ್ನು ಕುರಿತು ಚರ್ಚಿಸಿದೆ. ಜೊತೆಗೆ ವ್ಯವಸ್ಥೆಯ ವಿರುದ್ಧ ಅಸಹನೆ, ಆಕ್ರೋಶ, ಪ್ರತಿಭಟನೆ, ಹೋರಾಟ ಮತ್ತು ಚಳುವಳಿಗಳು ನಡೆಯುತ್ತಿರುವುದನ್ನು ತನ್ನ ಕಥಾಕನದಲ್ಲಿ ಅಭಿವ್ಯಕ್ತಿಸಿದೆ. ವಸಾಹತುಶಾಹಿಗಳ ಕೊಡುಗೆಗಾಗಿ ಹುಟ್ಟಿಕೊಂಡು ಬೆಳೆದುಬಂದಿರುವ ಕಾದಂಬರಿ ಸಾಹಿತ್ಯ ತನ್ನ ಬೆಳವಣಿಗೆಯ ಹಂತದಲ್ಲಿಯೇ ಆಳುವ ವರ್ಗದ ಹಿತಾಸಕ್ತಿಗೆ ಒಳಗಾಗಿರುವುದನ್ನು ಕಾಣಬಹುದು. ಊಳಿಗಮಾನ್ಯಶಾಹಿ ಮತ್ತು ಬಂಡವಾಳಶಾಹಿಗಳ ಅಸಮಾನತೆ, ಶೋಷಣೆಯ ಮೌಲ್ಯಗಳನ್ನು ಚರ್ಚಿಸುತ್ತಲೇ, ದುಡಿಯುವ ವರ್ಗದ ವರ್ಗಪ್ರಜ್ಞೆಯನ್ನು ತರದೇ ಇರುವುದನ್ನು ಕಾಣುತ್ತೇವೆ. ರಾಷ್ಟ್ರೀಯ ಕಲ್ಪನೆ ಹೆಸರಲ್ಲಿ ದೇಶ, ನಾಡು, ಭಾಷೆಗೆ ಒತ್ತು ಕೊಟ್ಟು ರಚನೆಯಾಗಿರುವುದನ್ನು ಗಮನಿಸಿದಾಗ ಮೊದಲ ಕಾಲಘಟ್ಟದ ಕಾದಂಬರಿಗಳಿಗೆ ಜಾತಿ, ವರ್ಣದ ಸಮಸ್ಯೆಗಳು ಆಂತರಿಕ ಸಮಸ್ಯೆಯಾಗಿ ಕಂಡಿವೆ. ಆದರೆ ರಾಷ್ಟ್ರೀಯ ಹೋರಾಟದ ಕಲ್ಪನೆಯಲ್ಲಿ ಇಲ್ಲಿಯ ಆಳುವ ವರ್ಗದ ಶೋಷಣೆಗಳನ್ನು ಅಭಿವ್ಯಕ್ತಿಸದೆ ಇರುವುದನ್ನು ಕಾಣುತ್ತೇವೆ.

ಉತ್ಪಾದನಾ ಕೇಂದ್ರವಾದ ಭೂಮಿ ಹಾಗೂ ಒಡೆತನದ ಪ್ರಶ್ನೆಯನ್ನು ನೋಡಿದಾಗ ಭೂಮಿಯ ಒಡೆತನ ಮೇಲುವರ್ಗಗಳ ಕೈಯಲ್ಲಿ ಇದೆ. ಆದರೆ ಭೂಮಿಯಿಂದ ವಂಚಿತರಾದ ದುಡಿಯುವ ವರ್ಗವು ಶೋಷಣೆಗೆ ಒಳಗಾಗಿ ಆರ್ಥಿಕ ಶೋಷಣೆಯನ್ನು ಎದುರಿಸುತ್ತಿದ್ದಾರೆ. ಅದರಲ್ಲಿಯೂ ಸಾಹಿತ್ಯದ ಮೇಲೆ ಜಾಗತೀಕರಣ ಪ್ರಭಾವ ಬೀರಿರುವುದರಿಂದ ವರ್ಗಸಂಬಂಧಗಳ ನಡುವೆ ತಾರತಮ್ಯಗಳು ಮತ್ತಷ್ಟು ಹೆಚ್ಚಾಗುತ್ತಿವೆ. ಪರಿಣಾಮ ಜಾಗತೀಕರಣದ ಭಾಗವಾಗಿ

ಸಾಹಿತ್ಯದ ಅಭಿವ್ಯಕ್ತಿಯ ಕ್ರಮಗಳು ಬದಲಾಗುತ್ತಿರುವುದನ್ನು ಕಾಣುತ್ತೇವೆ. ಕಾದಂಬರಿಗಳಲ್ಲಿ ಊಳಿಗಮಾನ್ಯ ಮತ್ತು ಜಾಗತೀಕರಣದ ಲಕ್ಷಣಗಳು ಕಾಣಿಸುತ್ತವೆ. ವರ್ಗಶೋಷಣೆ ಇರುವ ಸಮಾಜದಲ್ಲಿ ವರ್ಗಪ್ರಜ್ಞೆಯನ್ನು ಖಚಿತವಾಗಿ ಕಟ್ಟಿಕೊಡದೆ ಇರುವ ಕಾದಂಬರಿಯ ಲಕ್ಷಣಗಳನ್ನು ಕಾಣುತ್ತೇವೆ. ಕುವೆಂಪು ಅವರ ಕಾದಂಬರಿಗಳಲ್ಲಿ ವರ್ಗಶೋಷಣೆಯ ಚಿತ್ರಣ ಇದ್ದರೂ ವರ್ಗ ಶೋಷಣೆ ವಿರುದ್ಧ ಪ್ರತಿಭಟನೆ ಇಲ್ಲ ಅಥವಾ ದುಡಿಯುವ ವರ್ಗದ ಹಕ್ಕುಗಳ ಬಗೆಯಾಗಲಿ ಪ್ರಸ್ತಾಪ ಇಲ್ಲ. ಈ ಮಾತುಗಳು ನವೋದಯ ಕಾಲದ ಎಲ್ಲ ಕಾದಂಬರಿಕಾರರಿಗೂ ಅನ್ವಯಿಸುತ್ತದೆ. ಚೋಮನ ದುಡಿಯಲ್ಲಿ ಭೂಮಿಯ ಹಕ್ಕನ್ನು ಹೊಂದುವ ಆಲೋಚನೆಗಳು ಇದ್ದರೂ ಅದು ಕೆಳವರ್ಗದ ಪ್ರಜ್ಞೆಯ ಭಾಗವಾಗಿಲ್ಲ. ಆದರೆ 'ಚಿರಸ್ಮರಣೆ'ಯಲ್ಲಿ ಭೂಮಿಯ ಹಕ್ಕು ಮತ್ತು ವರ್ಗಶೋಷಣೆ ವಿರುದ್ಧ ತೀವ್ರವಾದ ಪ್ರತಿಭಟನೆ ಇದೆ. ಗ್ರಾಮಾಯಣದಲ್ಲಿ ವರ್ಗ ಖಚಿತತೆ ಇಲ್ಲ. ವರ್ಗ ಅಸಮಾನತೆಯ, ಭೂಮಿಯ ಹಕ್ಕಿನ ಬಗೆಗೆ ಆಳವಾದ ತಿಳುವಳಿಕೆ ಇದ್ದರೂ ಅದರ ಆಳದಲ್ಲಿ ದುಡಿಯುವ ವರ್ಗದ ಹಕ್ಕುಗಳನ್ನು ಹೊಂದುವುದನ್ನು ವಿರೋಧಿಸುತ್ತದೆ. ಆದರೆ ದಲಿತ-ಬಂಡಾಯದ ಸಂದರ್ಭಗಳು ದುಡಿಯುವ ವರ್ಗದ ವರ್ಗಪ್ರಜ್ಞೆಯನ್ನು ಹೆಚ್ಚಾಗಿ ತಂದಿದ್ದಾರೆ. ಜಾತಿಶೋಷಣೆ ವಿರುದ್ಧ ಧ್ವನಿ ಇದೆ. ಭೂಮಾಲೀಕ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ ಇದೆ. 'ಹೊಲೆಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಭೂಮಿಯ ಹಕ್ಕು ಮತ್ತು ವರ್ಗಶೋಷಣೆ ವಿರುದ್ಧ ಕ್ರಿಯಾಶೀಲವಾದ ಆಲೋಚನೆಯನ್ನು ಕಟ್ಟಿಕೊಟ್ಟಿರುವುದನ್ನು ನಾವು ಕಾಣುತ್ತೇವೆ.

ಹೀಗೆ ಕಾದಂಬರಿಯಲ್ಲಿ ಆಳುವ ವರ್ಗ ಮತ್ತು ದುಡಿಯುವ ವರ್ಗದ ಸಂಬಂಧಗಳು ಆರ್ಥಿಕ ಶ್ರೇಣೀಕರಣ, ಆರ್ಥಿಕ ಅಸಮಾನತೆ ಮತ್ತು ಜಾತಿ ಶ್ರೇಣೀಕರಣ ಜಾತಿಸಮಸ್ಯೆಯ ಮೂಲಕ ಅಭಿವ್ಯಕ್ತಿಗೊಂಡಿವೆ. ಇಲ್ಲಿ ಆರ್ಥಿಕವಾಗಿ ಪ್ರಬಲರಾಗಿರುವ ಮೇಲುವರ್ಗದವರು ದುಡಿಯುವ ವರ್ಗವನ್ನು ಶೋಷಣೆ ಮಾಡುತ್ತಾರೆ. ಈ ವರ್ಗಶೋಷಣೆಯನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಆದರೆ ಈ ಶೋಷಣೆಗೆ ಕಾರಣವಾದ ಆಳುವ ವರ್ಗವನ್ನು ದುಡಿಯುವ ವರ್ಗದ ಪಾತ್ರಗಳು ವಿರೋಧಿಸುವ ವರ್ಗಪ್ರಜ್ಞೆಯನ್ನು ಅನಾವರಣ ಮಾಡುವಲ್ಲಿ ಕಾದಂಬರಿಗಳಿಗೆ ಆಸಕ್ತಿ ಕಾಣುವುದಿಲ್ಲ. ಪ್ರಗತಿಶೀಲದ ಮತ್ತು ದಲಿತ-ಬಂಡಾಯದ ಕಾಲಘಟ್ಟದಲ್ಲಿ ದುಡಿಯು ವರ್ಗದ ರಾಜಕೀಯ ಪ್ರಜ್ಞೆಯ ಭಾಗವಾಗಿ ಕಾದಂಬರಿಗಳು ರಚನೆಯಾಗಿವೆ. ಇದರ ವಿರುದ್ಧ ನೆಲೆಯಲ್ಲಿ ನವೋದಯ, ನವ್ಯದ ಬರಹಗಾರರು ದುಡಿಯುವ ವರ್ಗದ ಪ್ರಜ್ಞೆಯನ್ನು ಕಾದಂಬರಿಯಲ್ಲಿ ತರುವುದೇ ಇಲ್ಲ. ಈ ಅಂತರವನ್ನು ಕಾಪಾಡಿಕೊಂಡಿರುವ ಅನೇಕ ಕಾದಂಬರಿಗಳು ದುಡಿಯುವ ವರ್ಗದ ರಾಜಕೀಯ ನಿಲುವುಗಳನ್ನು ವಿರೋಧಿಸುವ ಬರಹಗಳಾಗಿ ಗುರುತಿಸಬಹುದು. ಯಾಕೆಂದರೆ ವರ್ಗ ಅಸಮಾನತೆ, ವರ್ಗಶೋಷಣೆ ಸಮಾಜದಲ್ಲಿ ಇದ್ದರೂ ಆ ವರ್ಗಪ್ರಜ್ಞೆಯನ್ನು ಗೌಣಗೊಳಿಸಿರುವ ಆಳದಲ್ಲಿ ದುಡಿಯುವ ವರ್ಗದ ರಾಜಕೀಯ ಸೈದ್ಧಾಂತಿಕತೆಯನ್ನು ವಿರೋಧಿಸುವುದೇ ಇವುಗಳ ಉದ್ದೇಶವಾಗಿರುತ್ತದೆ.

ಯಾಕೆಂದರೆ ಸಾಹಿತ್ಯದ ಅಭಿವ್ಯಕ್ತಿ ಬರೀ ಸಾಹಿತ್ಯಕ್ಕೆ ಸಂಬಂಧಿಸಿದ ಪ್ರಶ್ನೆ ಮಾತ್ರ ಅಲ್ಲ. ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಯೂ ಆಗಿರುತ್ತದೆ. ಆದ್ದರಿಂದಲೇ ಅದು ಪ್ರತಿನಿಧಿಸುವ ರಾಜಕೀಯ ಧೋರಣೆಯು ಯಾವ ವರ್ಗದ ಹಿತಾಸಕ್ತಿಗೆ ಒಳಗಾಗಿದೆ. ದುಡಿಯುವ ವರ್ಗ ಮತ್ತು ಆಳುವ ವರ್ಗದ ಪಾತ್ರಗಳ ವರ್ತನೆ, ಸ್ವಭಾವಗಳು ಯಾವ ವಿಷಯವನ್ನು ಅಭಿವ್ಯಕ್ತಿಸಿವೆ ಮತ್ತು ಯಾವ ವಿಷಯವನ್ನು ಗೌಣಗೊಳಿಸಿವೆ ಎಂಬುದನ್ನು ಮುಖ್ಯವಾಗಿ ಗಮನಿಸಿದಾಗ ಕನ್ನಡ ಸಾಹಿತ್ಯದ ಅನೇಕ ಕಾದಂಬರಿಗಳು ದುಡಿಯುವ ವರ್ಗವನ್ನು ಭಾವನಾವಾದದ ತಾತ್ವಿಕತೆಯ ಮೂಲಕ ನಿರೂಪಣೆ ಮಾಡಿವೆ. ದೈಹಿಕ ದುಡಿಮೆಯಲ್ಲಿ ತೊಡಗುವ ರೈತವರ್ಗ, ಕಾರ್ಮಿಕವರ್ಗದ ಶ್ರಮದ ಪ್ರತಿಫಲವು ದುಡಿದ ದುಡಿಮೆಗಾರರಿಗೆ ಸಿಗಬೇಕು. ಆದರೆ ಅವರನ್ನು ಶ್ರಮಮೌಲ್ಯ ಶೋಷಣೆಗೆ ಒಳಗು ಮಾಡಿ ಅವರ ಹಕ್ಕುಗಳನ್ನು ವಂಚಿಸಿರುವ ಆಳುವ ವರ್ಗದ ವರ್ಗಶೋಷಣೆಯನ್ನು ಕಾದಂಬರಿಯ ಸಾಹಿತ್ಯ ಬಿಡಿಬಿಡಿಯಾಗಿ ಗುರುತಿಸುತ್ತದೆ ಹೊರತು ದುಡಿಯುವ ವರ್ಗ ತಾತ್ವಿಕ ಧೋರಣೆಯಿಂದ ವಿಶ್ಲೇಷಿಸಿಲ್ಲ. ಇದು ಕನ್ನಡದ ಅನೇಕ ಕಾದಂಬರಿಗಳ ಮಿತಿಯೂ ಕೂಡ. ದುಡಿಯುವ ವರ್ಗವು ಶತಮಾನಗಳಿಂದ ತನ್ನ ದುಡಿಮೆಯ ಪ್ರತಿಫಲವನ್ನು ಆಳುವ ವರ್ಗಕ್ಕೆ ನೀಡುತ್ತಲೇ ಬಂದಿದೆ. ಆದರೆ ದುಡಿಯದ ಆಳುವ ವರ್ಗ ಮಾತ್ರ ಈ ಪ್ರತಿಫಲವನ್ನು ತನ್ನ ಆಜನ್ಮಸಿದ್ಧ ಹಕ್ಕು ಎಂಬಂತೆ ಅನುಭವಿಸುತ್ತಲೇ ಬಂದಿದೆ. "ಭೂಮಿ ಸಂಪತ್ತು ರಾಜ್ಯಾಧಿಕಾರದಿಂದ ವಂಚಿತರಾದ ಮತ್ತು ಅವಕ್ಕೆಲ್ಲ, ಒಟ್ಟಾಗಿ ಪರ್ಯಾಯ ವ್ಯವಸ್ಥೆಯನ್ನು ರೂಪಿಸಲು ನಿರಂತರವಾಗಿ ಹೋರಾಡುವ ವರ್ಗದ ಮತ್ತೊಂದು ಹೆಸರೇ ಶೋಷಿತವರ್ಗ."[೪೮] ಈ ವರ್ಗವನ್ನೇ ನಾವು ದುಡಿಯುವ ವರ್ಗದ ವರ್ಗಪ್ರಜ್ಞೆಯನ್ನು, ದುಡಿಯುವ ವರ್ಗದ ರಾಜಕೀಯ ಧೋರಣೆಗಳನ್ನು ನಿರೂಪಿಸುತ್ತಿರುವ ಕಾದಂಬರಿಗಳಲ್ಲಿ ಬರುವ ಅವರ ಸ್ವಭಾವಗಳನ್ನು ದುಡಿಯುವ ವರ್ಗವೆಂದು ಗುರುತಿಸುತ್ತೇವೆ.

### ೨.೨.೧. ದುಡಿಯುವ ವರ್ಗದ ಸಾಹಿತ್ಯಕ ನೆಲೆಯ ಕಾದಂಬರಿಗಳಲ್ಲಿ ವರ್ಗವಿಶ್ಲೇಷಣೆ

೨.೨.೧.೧. **ಭೂಮಾಲಿಕ ವರ್ಗ:** ಕಾದಂಬರಿಗಳು ದುಡಿಯುವ ಸಮುದಾಯವು ಭೂಮಾಲೀಕರ ಶೋಷಣೆಗೆ ಒಳಗಾಗಿರುವುದನ್ನು ಚಿತ್ರಿಸಿವೆ. ಚೋಮನ ದುಡಿಯಲ್ಲಿ ವೈದಿಕರು ಭೂಮಾಲೀಕರೂ ಆಗಿದ್ದಾರೆ. ಇಲ್ಲಿ ಬರುವ ಸಂಕಪ್ಪಯ್ಯನ ಪಾತ್ರವು ಭೂಮಾಲೀಕ ವರ್ಗವನ್ನು ಪ್ರತಿನಿಧಿಸುತ್ತದೆ. ಈ ವರ್ಗ ಕೆಳವರ್ಗದ ದಲಿತ ಸಮುದಾಯವನ್ನು ಶೋಷಣೆ ಮಾಡುತ್ತಿರುವುದನ್ನು ಗುರುತಿಸಿದೆ. ಅದೇ ರೀತಿಯಲ್ಲಿ 'ಕುಡಿಯರ ಕೂಸು', ಗೊರೂರು ರಾಮಸ್ವಾಮಿ ಅಯ್ಯಂಗಾರರ 'ಹೇಮಾವತಿ', ನಿರಂಜನರ 'ಚಿರಸ್ಮರಣೆ' ಮುಂತಾದ ಕಾದಂಬರಿಗಳಲ್ಲಿ ಬರುವ ದಣಿಗಳು ವೈದಿಕರೂ ಭೂಮಾಲೀಕರೂ ಆಗಿದ್ದಾರೆ. ಇವರು ಕೂಡ ದಲಿತ ಸಮುದಾಯದ ಮೇಲೆ ದೈಹಿಕ ಹಿಂಸೆ ಮತ್ತು ದಲಿತ ಮಹಿಳೆಯರ ಮೇಲೆ ಲೈಂಗಿಕ ಹಲ್ಲೆಗಳನ್ನು ಮಾಡಿರುವುದು ಕಂಡುಬರುತ್ತದೆ. ಅಸ್ಪೃಶ್ಯರನ್ನು ಕ್ರೂರವಾಗಿ ಶೋಷಣೆ ಮಾಡುವ ಈ ಭೂಮಾಲೀಕ ವರ್ಗವು ದುಡಿಯುವ ವರ್ಗವನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ಅವರ ಹಕ್ಕುಗಳನ್ನು ವಂಚಿಸಿ

ಅವರನ್ನು ಜಾತಿಶೋಷಣೆ, ವರ್ಗಶೋಷಣೆ, ಶ್ರಮಮೌಲ್ಯ ಶೋಷಣೆ ಮಾಡುವುದರ ಮೂಲಕ ತನ್ನ ಭೂಮಾಲೀಕತ್ವವನ್ನು ಉಳಿಸಿಕೊಂಡು ಬರುತ್ತಿರುವುದನ್ನು ಕಾಣಬಹುದು. ಆದ್ದರಿಂದ ವೈದಿಕ ಭೂಮಾಲೀಕರು ಆಳುವ ವರ್ಗವಾಗಿರುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಅದೇ ರೀತಿಯಲ್ಲಿ ಕುವೆಂಪು ಅವರ 'ಕಾನೂರು ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು', 'ಹೇಮಾವತಿ' ಮುಂತಾದ ಕಾದಂಬರಿಗಳು ಭೂಮಾಲೀಕ ವರ್ಗದ ಶೋಷಣೆಯ ಕ್ರೌರ್ಯವನ್ನು ಅನಾವರಣ ಮಾಡುತ್ತವೆ. ಇಲ್ಲಿ ಬರುವ ಭೂಮಾಲೀಕರು ಗೌಡರು, ಲಿಂಗಾಯತರಾಗಿದ್ದಾರೆ. ಇಲ್ಲಿ ದುಡಿಯುವ ಹೊಲೆಯ ಸಮುದಾಯ ಅಥವಾ ದುಡಿಯುವ ವರ್ಗ ಇವರ ಶೋಷಣೆಗೆ ಒಳಗಾಗಿದೆ. ಭೂಮಿಯ ಒಡೆತನ ಈ ವರ್ಗಕ್ಕೆ ಇರುವುದರಿಂದ ಈ ವರ್ಗ ತಾರತಮ್ಯವು ಅನೇಕ ಮೂಲಭೂತ ಸಮಸ್ಯೆಗಳಿಗೆ ಕಾರಣವಾಗಿದೆ. ಇವರ ಆರ್ಥಿಕ ಶೋಷಣೆಯ ಮೂಲಕ, ಜಾತಿಶೋಷಣೆಯ ಮೂಲಕ, ವರ್ಗ ಅಸಮಾನತೆ ಮತ್ತು ಶೋಷಣೆಯು ಸಮಾಜದಲ್ಲಿ ನಿರಂತರವಾಗಿ ಜೀವಂತವಾಗಿ ಇರಬೇಕು ಎನ್ನುವ ಆಳುವ ವರ್ಗದ ಹಿತಾಸಕ್ತಿ ಇದೆ. ಆದರೆ ದುಡಿಯುವ ವರ್ಗವು ಮಾತ್ರ ಈ ಶೋಷಣೆಗಳನ್ನು ಒಪ್ಪಿಕೊಂಡು ಹೋಗುತ್ತದೆ ಹೊರತು ಈ ಶೋಷಣೆಯ ವಿರುದ್ಧ ಹೋರಾಡುವ ವರ್ಗಪ್ರಜ್ಞೆಯು ಈ ಕಾದಂಬರಿಗಳಲ್ಲಿ ಭೂಹೀನ ಭೂಮಿಯ ಹಕ್ಕಿನ ಪ್ರಶ್ನೆಯನ್ನು ಕಾದಂಬರಿಕಾರರು ತರುವಲ್ಲಿ ವಿಫಲತೆಯನ್ನು ಕಾಣುತ್ತೇವೆ.

**೨.೨.೧.೨. ಬಂಡವಾಳಶಾಹಿ ವರ್ಗ:** ವಸಾಹತುಶಾಹಿ ವ್ಯವಸ್ಥೆಯು ದೇಶದಲ್ಲಿ ಆರಂಭವಾದ ನಂತರದಲ್ಲಿ ಕೃಷಿ, ಕೈಗಾರಿಕೆ ಜೊತೆಗೆ ಭೌತಿಕ ವಲಯದಲ್ಲಿ ಹೊಸ ಪ್ರಕಾರಗಳು ಉದಯವಾಗಲು ಕಾರಣವಾಯಿತು. ಹಾಗೆಯೇ ಉತ್ಪಾದನಾ ಸಂಬಂಧಗಳ ಮೂಲಕ ಊಳಿಗಮಾನ್ಯಶಾಹಿ ಜಮೀನ್ದಾರಿಯ ಅಸಮಾನತೆಯ ಮೌಲ್ಯಗಳನ್ನು ಮತ್ತು ಹಳೆಯ ರೀತಿಯ ಶೋಷಣೆಯ ವಿಧಾನವನ್ನು ಬಳಸಿಕೊಂಡು ಮಧ್ಯಮವರ್ಗವನ್ನು ಸೃಷ್ಟಿಸಿಕೊಂಡವು. ಹೊಸ ರೀತಿಯ ಶೋಷಣೆಗೆ ಒಳಗು ಮಾಡಿರುವ ಬಂಡವಾಳಶಾಹಿ ಸ್ವಭಾವವನ್ನು ಕಾದಂಬರಿ ಸಾಹಿತ್ಯವು ಗುರುತಿಸಿದೆ. ಅದರಲ್ಲಿಯೂ ಮಾಲೀಕ-ಕಾರ್ಮಿಕ ಸಂಬಂಧ, ವರ್ಗವೈರುಧ್ಯತೆ, ವರ್ಗಸಂಘರ್ಷ, ಸಮಾಜವಾದ ಮುಂತಾದ ಅಂಶಗಳನ್ನು ಕಾದಂಬರಿಯಲ್ಲಿ ಚಿತ್ರಿಸಿವೆ. ನಿರಂಜನ ಅವರ 'ಚಿರಸ್ಮರಣೆ', ವ್ಯಾಸರಾಯ ಬಲ್ಲಾಳ ಅವರ 'ಬಂಡಾಯ' ಮುಂತಾದ ಕಾದಂಬರಿಗಳಲ್ಲಿ ಕಾರ್ಮಿಕ ವರ್ಗ ಮತ್ತು ಬಂಡವಾಳಶಾಹಿಗಳ ನಡುವಿನ ಸಂಘರ್ಷ, ವೈರುಧ್ಯತೆಯ ಚಿತ್ರಣ ಇರುವುದನ್ನು ಕಾಣುತ್ತೇವೆ. ಇಲ್ಲಿ ಆರ್ಥಿಕ ವ್ಯವಸ್ಥೆಯ ಮೂಲಕ ಬಂಡವಾಳಶಾಹಿ ಉತ್ಪಾದನಾ ಸಾಮಗ್ರಿಗಳು ಮತ್ತು ಸಂಪತ್ತಿನ ಒಡೆತನ ಹೊಂದಿದ್ದು, ಕಾರ್ಮಿಕರು, ದಲಿತರು, ಮಹಿಳೆಯರನ್ನು ಅವರ ಹಕ್ಕುಗಳನ್ನು ಕಿತ್ತುಕೊಳ್ಳುವುದರ ಮೂಲಕ, ಅವರ ಶ್ರಮಮೌಲ್ಯ ಶೋಷಣೆ ಮಾಡುವುದರ ಮೂಲಕ ಶೋಷಕ ವರ್ಗವಾಗಿ ನಿರ್ಮಾಣವಾಗಿರುವುದನ್ನು ಕಾದಂಬರಿಗಳಲ್ಲಿ ಕಾಣುತ್ತೇವೆ. ಬಂಡಾಯದಲ್ಲಿ ಹಕ್ಕಿನ ಬೇಡಿಕೆ ಈಡೇರಿಸುವ ಒತ್ತಾಯದ ಮೂಲಕ ವರ್ಗಸಂಘರ್ಷಕ್ಕೆ ಕಾರ್ಮಿಕ ವರ್ಗ ಮುಂದಾಗುತ್ತದೆ. ಅದೇ ರೀತಿಯಲ್ಲಿ 'ಚಿರಸ್ಮರಣೆ'ಯಲ್ಲಿ ಹಕ್ಕನ್ನು ಕಳೆದುಕೊಂಡಿರುವ ರೈತಕಾರ್ಮಿಕರು

ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಹೋರಾಟಕ್ಕೆ ಧುಮುಕುತ್ತಾರೆ. ಈ ಎರಡು ಕಾದಂಬರಿಗಳು ವರ್ಗಶೋಷಣೆ, ಬೃಹತ್ ಉದ್ದಿಮೆಗಾರರು, ದೊಡ್ಡ ಭೂಮಾಲಿಕರು, ದುಡಿಯುವ ಜನರನ್ನು ಅಮಾನುಷವಾಗಿ ಕ್ರೌರ್ಯಕ್ಕೆ ಒಳಪಡಿಸುವುದು ನಿರೂಪಿತವಾಗಿದೆ. ಜೊತೆಗೆ ಬಂಡವಾಳಶಾಹಿ ವ್ಯವಸ್ಥೆಯು ದುಡಿಯುವ ವರ್ಗದ ವರ್ಗಶತ್ರುವಾಗಿ ಚಿತ್ರಿತವಾಗಿದೆ.

೨.೨.೧.೩. **ಅಧಿಕಾರಶಾಹಿ ವರ್ಗ:** ಕಾದಂಬರಿಗಳಲ್ಲಿ ದುಡಿಯುವ ವರ್ಗದ ಪರ ಮತ್ತು ವಿರೋಧದ ನೆಲೆಯಲ್ಲಿ ಈ ವರ್ಗವು ಚಿತ್ರಣವಾಗಿದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬರುವ ಪೊಲೀಸ್ ವ್ಯವಸ್ಥೆ ದಲಿತ ವರ್ಗದ ಜನರಿಗೆ ರಕ್ಷಣೆಯನ್ನು ಕೊಡಲಿಲ್ಲ. ಬದಲಿಗೆ ಭೂಮಾಲೀಕರ ಪರವಾಗಿ ಕೆಲಸ ಮಾಡುತ್ತದೆ. ಗುತ್ತಿ ನಿರಪರಾಧಿಯಾದರೂ ಕಲ್ಲಯ್ಯಗೌಡನ ಆರೋಪವನ್ನೇ ಈ ಪೊಲೀಸ್ ವ್ಯವಸ್ಥೆಯು ನಂಬಿ ಈ ಭೂಮಾಲೀಕ ವರ್ಗದ ಪರವಾಗಿ ನಿಲ್ಲುತ್ತದೆ. 'ಗ್ರಾಮಾಯಣ'ದಲ್ಲಿ ಪೊಲೀಸ್ ಹವಾಲ್ದಾರ ಕೂಡ ಮೇಲುವರ್ಗದ ಪರವಾಗಿ ಕಾರ್ಯ ನಿರ್ವಹಿಸಿ ದಾದಾನನ್ನು ಬಂಧಿಸುವುದಕ್ಕೆ ಮುಂದಾಗುವುದು. 'ಚಿರಸ್ಮರಣೆ'ಯಲ್ಲಿ ಇಡೀ ಪೊಲೀಸ್ ವ್ಯವಸ್ಥೆಯು ದುಡಿಯುವ ವರ್ಗದವರನ್ನು ಕ್ರೂರವಾಗಿ ಶೋಷಣೆ ಮಾಡುವ ವರ್ಗವಾಗಿರುವುದನ್ನು ಕಾಣುತ್ತೇವೆ. 'ಬಂಡಾಯ' ಕಾದಂಬರಿಯಲ್ಲಿ ಕಾರ್ಮಿಕ ಹೋರಾಟವನ್ನು ಹತ್ತಿಕ್ಕುವವನ ಸಲುವಾಗಿ ಅಧಿಕಾರಶಾಹಿ ವರ್ಗ ಇದೆ. 'ಒಡಲಾಳ'ದಲ್ಲಿ ಪೊಲೀಸ್ ವ್ಯವಸ್ಥೆ ಪ್ರಭುತ್ವ ಶಕ್ತಿಯಾಗಿ ದಲಿತ ವರ್ಗದ ಮೇಲೆ ದೌರ್ಜನ್ಯ ಎಸುಗುತ್ತದೆ. ಹೀಗೆ ಅನೇಕ ಕಾದಂಬರಿಗಳಲ್ಲಿ ಅಧಿಕಾರಶಾಹಿ ವರ್ಗ ದುಡಿಯುವ ವರ್ಗದ ಶೋಷಕ ವರ್ಗವಾಗಿ, ಆಳುವ ವರ್ಗದ ಹಿತಕಾಯುವ ವರ್ಗವಾಗಿದೆ. ಹಾಗೆಯೇ 'ಬೆಂಕಿಯ ಮಧ್ಯ' ಕಾದಂಬರಿಯಲ್ಲಿ ಬರುವ ರೆವಿನ್ಯೂ ಅಧಿಕಾರಿಗಳು ಮೇಲುವರ್ಗದವರು ದಲಿತರ ಮೇಲೆ ನಡೆಸುತ್ತಿದ್ದ ದೌರ್ಜನ್ಯದ ವಿರುದ್ಧ ನಿಲ್ಲುತ್ತಾರೆ. ದಲಿತ ವರ್ಗದವರ ಪರವಾಗಿ ನಿಂತು, ಅವರ ಹಕ್ಕುಗಳಿಗಾಗಿ ಕೆಲಸ ಮಾಡುವುದನ್ನು ಕಾಣುತ್ತೇವೆ. ಈ ಅಧಿಕಾರಶಾಹಿ ವರ್ಗವು ದುಡಿಯುವ ವರ್ಗದ ಶೋಷಕ ವರ್ಗವಾಗಿ ಈ ಕಾದಂಬರಿಗಳು ಗ್ರಹಿಸಿವೆ. ಈ ವರ್ಗವು ಸ್ವತಂತ್ರವಾದ ಕಾನೂನು ಅಡಿಯಲ್ಲಿ ಕಾರ್ಯ ನಿರ್ವಹಿಸದೆ ಮೇಲುವರ್ಗದ ಹಿತಾಸಕ್ತಿಗಾಗಿ ಅಥವಾ ಮೇಲುವರ್ಗದ ಅಧೀನ ವರ್ಗವಾಗಿ ಕಾರ್ಯ ಚಟುವಟಿಕೆ ಮಾಡುತ್ತಿರುವುದನ್ನು ಕಾದಂಬರಿ ಸಾಹಿತ್ಯ ಗ್ರಹಿಸಿದೆ. ಇಲ್ಲಿ ದುಡಿಯುವ ವರ್ಗ ಮತ್ತು ಈ ಅಧಿಕಾರಶಾಹಿ ವರ್ಗಗಳ ನಡುವೆ ಯಾವುದೇ ಸಂಬಂಧಗಳು ಉದ್ಭವವಾಗದೆ ನೇರವಾಗಿ ಈ ಅಧಿಕಾರಶಾಹಿ ವರ್ಗ ದುಡಿಯುವ ವರ್ಗವನ್ನು ಶೋಷಣೆ ಮಾಡುವ ಪ್ರಭುತ್ವ ಶಕ್ತಿಯಾಗಿ ಕೆಲಸ ಮಾಡುತ್ತಿರುವುದನ್ನು ಕಾದಂಬರಿಗಳು ಚಿತ್ರಿಸುತ್ತವೆ.

೨.೨.೧.೪. **ದಲಿತ ವರ್ಗ:** ಕಾದಂಬರಿ ಸಾಹಿತ್ಯದಲ್ಲಿ ದಲಿತ ವರ್ಗವನ್ನು ಕುರಿತು ಅನೇಕ ಕಾದಂಬರಿಗಳು ರಚನೆಯಾಗಿವೆ. ಈ ಕಾದಂಬರಿಗಳು ಈ ದಲಿತ ಸಮುದಾಯವನ್ನು ಜಾತಿ ಆಧಾರಿತವಾಗಿ ಮತ್ತೆ ಕೆಲವು ವರ್ಗಪ್ರಜ್ಞೆಯ ಭಾಗವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಕಾದಂಬರಿಯಲ್ಲಿ ಬರುವ ಅನೇಕ ಕೆಳಸಮುದಾಯಗಳನ್ನು ಈ ದಲಿತ ವರ್ಗದ ಪ್ರಜ್ಞೆಯ

ಒಳಗೆ ಗ್ರಹಿಸಲಾಗುತ್ತದೆ. ಈ ವರ್ಗವು ಮೇಲುವರ್ಗದ ಶೋಷಣೆಗೆ ಒಳಗಾದ ದುಡಿಯುವ ವರ್ಗವಾಗಿದೆ. "ದಲಿತರೆಂದರೆ ದುಡಿಯುವ ವರ್ಗ, ಶ್ರಮಜೀವಿ ವರ್ಗ. ಕಾರ್ಮಿಕ ವರ್ಗ, ಸಮಾಜದ ಎಲ್ಲಾ ತಳಮಟ್ಟದ ಕೆಲಸಗಳನ್ನು ದಲಿತರು ಮಾಡುತ್ತಾರೆ ಅಥವಾ ದಲಿತರಿಂದ ಬಲಾತ್ಕಾರವಾಗಿ ಮಾಡಿಸಲಾಗುತ್ತಿದೆ. ದಲಿತರು ಶ್ರಮಮೌಲ್ಯ ಶೋಷಣೆಗೆ ಒಳಗಾಗಿದ್ದಾರೆ. ಇಂಡಿಯಾದಲ್ಲಿ ದಲಿತರು ಪ್ರಧಾನ ಉತ್ಪಾದಕ ಶಕ್ತಿಗಳು. ಉತ್ಪಾದನೆ ಮಾಡುವ ದೈಹಿಕ ಶಕ್ತಿ ಮತ್ತು ಕೌಶಲ್ಯ ಇವರಲ್ಲಿದೆ. ಆದರೆ ಉತ್ಪಾದನೆಗೆ ಬಳಸುವ ಭೂಮಿ, ಬಂಡವಾಳ, ಉತ್ಪಾದನೆಯ ಸಾಧನ ಸಲಕರಣೆಗಳು ಇವರಲ್ಲಿಲ್ಲ. ಇವಕ್ಕೆ ದಲಿತರು ಒಡೆಯರಾಗಿಲ್ಲ. ಹೀಗೆ ಇವರು ಒಡೆತನದಿಂದ ವಂಚಿತರಾಗಿರುವುದರಿಂದ ದಲಿತರಾಗಿದ್ದಾರೆ, ಶೋಷಿತರಾಗಿದ್ದಾರೆ, ಅವಮಾನಿತ ರಾಗಿದ್ದಾರೆ"[೧೭] ಎಂಬ ಬಿ.ಎಂ. ಪುಟ್ಟಯ್ಯ ಅವರ ಅಭಿಪ್ರಾಯ ಸತ್ಯವಾದುದು. ಈ ದಲಿತ ವರ್ಗವು ಎಲ್ಲ ಜನರಿಗೆ ಬೇಕಾದ ವಸ್ತುಪದಾರ್ಥಗಳನ್ನು ಇವರ ಶ್ರಮಶಕ್ತಿಯಿಂದ, ದುಡಿಮೆಯಿಂದ ಬಲಾತ್ಕಾರವಾಗಿ ಮತ್ತು ಅನ್ಯಾಯವಾಗಿ ಉತ್ಪಾದನೆ ಮಾಡಿಸಲಾಗುತ್ತಿದೆ. ಆದ್ದರಿಂದ ಈ ವರ್ಗವನ್ನು ದುಡಿಯುವ ವರ್ಗ ಎಂದು ತಾತ್ವೀಕರಿಸಬಹುದು.

ಈ ವರ್ಗವನ್ನು ಕುರಿತು ಕನ್ನಡದ ಅನೇಕ ಕಾದಂಬರಿಗಳು ಎರಡು ಮಾದರಿಯಲ್ಲಿ ಗ್ರಹಿಸಿವೆ. ಜಾತಿ ಆಧಾರಿತವಾಗಿ ಒಂದನ್ನು ವರ್ಗ ಆಧಾರಿತವಾಗಿ ಮತ್ತೊಂದನ್ನು ವಿಭಾಗಿಸಿ ಈ ವರ್ಗಗಳ ವಿವರವನ್ನು ತಂದಿರುವುದನ್ನು ಕಾಣಬಹುದು. ಶಿವರಾಮ ಕಾರಂತರ 'ಚೋಮನ ದುಡಿ' ಕಾದಂಬರಿಯಲ್ಲಿ ಬರುವ ಚೋಮನು ಹೊಲೆಯ ಸಮುದಾಯದ ಪ್ರತಿನಿಧಿ. ಈ ಹೊಲೆಯ ಸಮುದಾಯ ಮೇಲುವರ್ಗದವರ ಶೋಷಣೆಗೆ ಒಳಗಾಗಿ ತನ್ನ ಹಕ್ಕುಗಳನ್ನು ಕಳೆದುಕೊಂಡು ಜೀತಗಾರನಾಗಿ, ಸಂಕಪ್ಪಯ್ಯನ ಭೂಮಿಯಲ್ಲಿ ದುಡಿಯುವ ಶ್ರಮಜೀವಿಯಾಗಿ ಚಿತ್ರಿಸಲಾಗಿದೆ. ಅದೇ ರೀತಿ ಕಾದಂಬರಿಯಲ್ಲಿ ಚೋಮನು ಗೇಣಿಗಾಗಿ ಭೂಮಿ ಕೇಳುವುದು ದಲಿತ ವರ್ಗದವರು ಭೂಮಿಯ ಹಕ್ಕನ್ನು ಹೊಂದಬಹುದು ಎನ್ನುವ ಪ್ರಶ್ನೆಯನ್ನು ಕಾದಂಬರಿಯಲ್ಲಿ ಮುಂದಿಟ್ಟರು. ಅವನ ವರ್ತನೆ, ಸ್ವಭಾವ, ಆಕಾಂಕ್ಷೆಗಳೆಲ್ಲ ಆಳುವ ವರ್ಗದ ಹಿತಾಸಕ್ತಿಗೆ ಅನುಗುಣವಾಗಿವೆ. ಆದ್ದರಿಂದ ಭೂಮಾಲೀಕ ವರ್ಗಶೋಷಣೆಯನ್ನು ಒಪ್ಪಿಕೊಂಡು ಶ್ರಮಜೀವಿ ಯಾಗಿ ಬದುಕಿರುವ ಚೋಮನು ತನ್ನ ವರ್ಗಪ್ರಜ್ಞೆಯನ್ನು ಆರೋಪಿಸಿದ್ದಾನೆ. ಆದ್ದರಿಂದ ಕಾದಂಬರಿಯು ಕಟ್ಟಿಕೊಡುತ್ತಿರುವ ದುಡಿಯುವ ವರ್ಗದ ಪ್ರಜ್ಞೆಯು ಆಳುವ ವರ್ಗದ ಭಾಗವಾಗಿದೆ. ಕುವೆಂಪು ಅವರ 'ಕಾನೂರು ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು', ಗೊರೂರು ಅವರ 'ಹೇಮಾವತಿ', ಯು.ಆರ್. ಅನಂತಮೂರ್ತಿಯವರ 'ಭಾರತೀಪುರ' ಮುಂತಾದ ಕಾದಂಬರಿಗಳು ಜಾತಿ ಚೌಕಟ್ಟಿನ ಆಧಾರದ ಮೇಲೆ ದುಡಿಯುವ ವರ್ಗದ ಸಮಸ್ಯೆನ್ನು ಕಟ್ಟಿಕೊಡುವ ಪ್ರಯತ್ನ ಮಾಡಿವೆ ಹೊರತು ಇಲ್ಲಿ ಬರುವ ದಲಿತ ವರ್ಗವನ್ನು ದುಡಿಯುವ ವರ್ಗದ ಪ್ರಜ್ಞೆಯ ಭಾಗವಾಗಿ ನಿರೂಪಿಸಲು ಸೋತಿವೆ.

ನಿರಂಜನರ 'ಚಿರಸ್ಮರಣೆ', ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಗಳು ಆಳುವ ವರ್ಗವಾದ ಭೂಮಾಲೀಕ ವರ್ಗದ ಜಾತಿಶೋಷಣೆ, ವರ್ಗಶೋಷಣೆ,

ಅಸಮಾನತೆ, ಅಪಮಾನಗಳ ವಿರುದ್ಧ ಕಾದಂಬರಿಯಲ್ಲಿ ಕ್ರಿಯಾಶೀಲವಾದ ನಿರೂಪಣೆ ಇದೆ. 'ಚಿರಸ್ಮರಣೆ'ಯಲ್ಲಿ "ದಲಿತ ಕೋಟಿಯ ಎಲುಬುಗೂಡಿನ ಮೇಲೆ ಕಟ್ಟಿದ ಈ ಸಾಮ್ರಾಜ್ಯ ಖಂಡಿತ ಪುಡಿಪುಡಿಯಾಗ್ತದೆ! ಲೋಕದೆಲ್ಲ ದುಡಿಯುವ ಜನ ವಿಜಯ ಪತಾಕೆ ಹಾರಿಸಿಯೇ ಹಾರಿಸ್ತಾರೆ"[೧೮] ಎನ್ನುವ ಕುಂಞಂಬುನ ಮಾತು, 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಮಾದೇವ ಹೇಳಿದ್ದು "ಸಂಖ್ಯೆಯಲ್ಲಿ ದಲಿತರು ಕಡಿಮೆ ಇರಬಹುದು. ಅವರು ಅವಿದ್ಯಾವಂತರಿರಬಹುದು. ಆದರೆ ಅವರು ಈಗ ಪ್ರಜ್ಞಾವಂತರಾಗಿದ್ದಾರೆ. ಶತಶತಮಾನಗಳಿಂದ ಅವರನ್ನು ಬಿಗಿದಿಟ್ಟ ಬೇಡಿಯನ್ನು ಕಳಚಲು ಸೆಟೆದೆದ್ದು ನಿಂತಿದ್ದಾರೆ. ಸಾವಿರಾರು ವರ್ಷಗಳಿಂದ ನೋವು ನುಂಗಿದ ಅವರು ಬೆಂಕಿಯ ಉಂಡೆಯಾಗಿದ್ದಾರೆ. ಒಂದು ಕಿಡಿ ಬೆಂಕಿ, ಮನೆ, ಊರು, ದೇಶ ಈ ಜಗತ್ತನ್ನು ಸುಡಬಲ್ಲದಾದರೆ, ಖಂಡಿತವಾಗಿಯೂ ಅವರು ಈ ಅಸಮಾನತೆಯ ವ್ಯವಸ್ಥೆಯನ್ನು ಧ್ವಂಸಗೊಳಿಸಬಲ್ಲರು"[೧೯] ಎಂದು ಹೇಳಿರುವುದು. ಈ ಎರಡು ಸಂದರ್ಭಗಳು ದುಡಿಯುವ ವರ್ಗದ ನಿರಂತರವಾದ ವರ್ಗಶತ್ರುವಿನ ವಿರುದ್ಧ ಹೋರಾಡುವ ಸೂಚನೆಯನ್ನು ಎತ್ತಿಹಿಡಿಯುವುದರ ಮೂಲಕ, ಅಸಮಾನತೆ, ಶೋಷಣೆ ನಾಶವಾಗಬೇಕೆಂದು ಒತ್ತಾಯಿಸುವ ಸೃಜನಶೀಲ ನಿರೂಪಣೆಯಾಗಿದೆ.

ದಲಿತ ವರ್ಗಕ್ಕೆ ಸೇರಿದ ಅನೇಕ ಕಾದಂಬರಿಕಾರರು ರಚನೆ ಮಾಡಿರುವ ಕಾದಂಬರಿಗಳಲ್ಲಿ ಅಸ್ಪೃಶ್ಯತೆ, ಜಾತಿಯ ಶ್ರೇಣೀಕರಣ, ಜಾತಿಶೋಷಣೆಯನ್ನು ಮೇಲುಜಾತಿ, ಮೇಲುವರ್ಗ ಮಾಡುತ್ತಿವೆ. ಆ ಮೂಲಕ ಈ ದಲಿತ ಸಮುದಾಯದ ಹಕ್ಕುಗಳು, ಸ್ವಾತಂತ್ರ್ಯ ಮುಂತಾದ ಅಂಶಗಳನ್ನು ಮೇಲುವರ್ಗದವರು ಈ ವರ್ಗಕ್ಕೆ ಕೊಡದೆ ವಂಚಿಸಿರುವುದು ಮತ್ತು ಜಾತಿಶ್ರೇಣೀಕರಣ, ವರ್ಗಶ್ರೇಣೀಕರಣದಿಂದ ಈ ದಲಿತ ಸಮುದಾಯದ ಸಂಕಷ್ಟದ ಸ್ಥಿತಿಯನ್ನು ದೇವನೂರು ಮಹಾದೇವ ಅವರ 'ಒಡಲಾಳ', 'ಕುಸುಮಬಾಲೆ', ಚೆನ್ನಣ್ಣವಾಲೀಕರ ಅವರ 'ಒಂದು ಹೆಣ್ಣಿನ ಒಳ ಜಗತ್ತು'. ಮುಳ್ಳೂರು ನಾಗರಾಜರ 'ಮರಣ ಮಂಡಲ ಮಧ್ಯದೊಳಗೆ' ಮುಂತಾದ ಕಾದಂಬರಿಗಳು ಚಿತ್ರಿಸಿವೆ. ಈ ಎಲ್ಲ ಕಾದಂಬರಿಗಳು ದಲಿತ ವರ್ಗವು ತನ್ನ ಎಲ್ಲ ಹಕ್ಕುಗಳನ್ನು ಕಳೆದುಕೊಂಡು ಮೇಲುವರ್ಗದ, ಮೇಲುಜಾತಿಯ ಶೋಷಣೆಗೆ ಒಳಗಾಗಿರುವ ಶ್ರಮಜೀವಿ ವರ್ಗ ಎಂದು ಗುರುತಿಸಿವೆ.

**೨.೨.೧.೫. ಕಾರ್ಮಿಕ ವರ್ಗ:** ಕಾದಂಬರಿಗಳು ಕಾರ್ಮಿಕ ವರ್ಗವನ್ನು ಕುರಿತು ಚಿತ್ರಿಸಿವೆ. ಕಾರ್ಮಿಕ ವರ್ಗವು ಭೂಮಾಲೀಕರ ಮತ್ತು ಬಂಡವಾಳಶಾಹಿಗಳ ಶೋಷಣೆಗೆ ಒಳಗಾಗಿರುವ ಶ್ರಮಜೀವಿ ವರ್ಗವೆಂದು ಕಾದಂಬರಿಗಳು ನಿರೂಪಿಸಿವೆ. ಕೃಷಿ ಭೂಮಿಯಲ್ಲಿ ಕೆಲಸ ಮಾಡುವ ಕೃಷಿಕಾರ್ಮಿಕರು ಭೂಮಾಲೀಕ ವರ್ಗದ ಶೋಷಣೆ ಒಳಗಾಗಿರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಕೈಗಾರಿಕಾ ವಲಯದಲ್ಲಿ ದುಡಿಯುವ ಕಾರ್ಮಿಕ ವರ್ಗ ಬಂಡವಾಳಶಾಹಿಗಳ ಶೋಷಣೆ ಒಳಗಾಗಿರುತ್ತದೆ. ಈ ಎರಡು ಕ್ಷೇತ್ರದಲ್ಲಿ ದುಡಿಯುವ ಈ ವರ್ಗವು ನಿರಂತರವಾಗಿ ಶ್ರಮಮೌಲ್ಯ ಶೋಷಣೆ ಒಳಗಾಗುತ್ತ ಬಂದಿರುವುದನ್ನು ಕಾಣುತ್ತೇವೆ. ಶಿವರಾಮ ಕಾರಂತರ

‘ಚೋಮನದುಡಿ’, ‘ಕುಡಿಯರ ಕೂಸು’ ಮತ್ತು ಕುವೆಂಪು ಅವರ ‘ಕಾನೂರು ಹೆಗ್ಗಡಿತಿ’, ‘ಮಲೆಗಳಲ್ಲಿ ಮದುಮಗಳು’ ಮುಂತಾದ ಕಾದಂಬರಿಗಳಲ್ಲಿ ಭೂಮಾಲೀಕ ವರ್ಗದ ಗದ್ದೆ, ತೋಟದಲ್ಲಿ ದುಡಿಯುವ ಕೃಷಿ ಕಾರ್ಮಿಕ ವರ್ಗವನ್ನು ಚಿತ್ರಿಸಿದ್ದಾರೆ. ಈ ವರ್ಗವು ತನ್ನ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡು ಜೀತಗಾರರಾಗಿ ದುಡಿಯುವುದನ್ನು ಚಿತ್ರಿಸಿವೆ. ಈ ವರ್ಗವನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ಬಂದಿರುವ ಭೂಮಾಲೀಕ ವರ್ಗ, ನಿರಂತರವಾಗಿ ಇವರನ್ನು ಜಾತಿ, ವರ್ಗದ ತಾರತಮ್ಯ ಮತ್ತು ದುಡಿಮೆಗೆ ತಕ್ಕ ಪ್ರತಿಫಲ ಕೊಡದೇ ವಂಚಿಸಿ ಅವರನ್ನು ಶೋಷಣೆ ಮಾಡುತ್ತಿರುವುದನ್ನು ಕಾಣುತ್ತೇವೆ.

ಅದೇ ರೀತಿಯಲ್ಲಿ ನಿರಂಜನರ ‘ಚಿರಸ್ಮರಣೆ’, ವ್ಯಾಸರಾಯ ಬಲ್ಲಾಳರ ‘ಬಂಡಾಯ’ ಮುಂತಾದ ಕಾದಂಬರಿಗಳಲ್ಲಿ ಕಾರ್ಮಿಕ ವರ್ಗವು ತನ್ನ ಶೋಷಣೆಯ ವಿರುದ್ಧ ಪ್ರತಿಭಟಿಸಿ ರುವುದನ್ನು ಕಾಣುತ್ತೇವೆ. ‘ಚಿರಸ್ಮರಣೆ’ಯಲ್ಲಿ ಬರುವ ಕೃಷಿಕಾರ್ಮಿಕ ವರ್ಗ, ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿಗಳ ಶೋಷಣೆಯನ್ನು ಪ್ರತಿಭಟಿಸುತ್ತಲೇ ದುಡಿಯುವ ವರ್ಗ ರಾಜ್ಯಕ್ಕಾಗಿ ವರ್ಗ ಶತ್ರುವಿನ ವಿರುದ್ಧ ಸಂಘರ್ಷಕ್ಕೆ ಇಳಿಯುವ ಪಾತ್ರಗಳನ್ನು ಕಾಣುತ್ತೇವೆ. ‘ಬಂಡಾಯ’ದಲ್ಲಿ ಕಾರ್ಮಿಕ ವರ್ಗವು ಮಾಲೀಕ ವರ್ಗದ ವರ್ಗಶೋಷಣೆಯ ವಿರುದ್ಧ ಸಂಘರ್ಷಕ್ಕೆ ಮುಂದಾಗುವುದು. ಆ ಮೂಲಕ ಶ್ರಮಜೀವಿ ವರ್ಗದ ಹೋರಾಟವನ್ನು ವಿಸ್ತರಿಸಿ, ತನ್ನ ಹಕ್ಕುಗಳಿಗಾಗಿ ಆಳುವ ವರ್ಗದ ದಾಳಿಯನ್ನು ಸಮರ್ಪಕವಾಗಿ ಎದುರಿಸುವುದು. ಕಾರ್ಮಿಕ ವರ್ಗದ ಬಿಡುಗಡೆಯ ಒತ್ತಾಯವು ಈ ಕಾದಂಬರಿಯಲ್ಲಿ ಇದೆ. ಹೀಗೆ ಕಾರ್ಮಿಕ ವರ್ಗದ ವರ್ಗಶತ್ರುವಾಗಿ ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿ ವರ್ಗವಾಗಿ ಕಾದಂಬರಿಗಳು ಗುರುತಿಸಿವೆ.

**೨.೨.೧.೬. ಮಹಿಳಾ ವರ್ಗ:** ಕಾದಂಬರಿ ಸಾಹಿತ್ಯವು ಮಹಿಳಾ ಪಾತ್ರವನ್ನು ವಿವಿಧ ಆಯಾಮದಲ್ಲಿ ಚಿತ್ರಿಸಿವೆ. ಶಿವರಾಮ ಕಾರಂತರ ‘ಚೋಮನ ದುಡಿ’ ಕಾದಂಬರಿಯಲ್ಲಿ ಮೇಲ್ಜಾತಿಯ ಸಂಕಪ್ಪಯ್ಯನ ತಾಯಿ ಪಾತ್ರವನ್ನು ಯಜಮಾನಿಕೆ ನೆಲೆಯಲ್ಲಿ ಚಿತ್ರಿಸಲಾಗಿದೆ. ಅದೇ ರೀತಿಯಲ್ಲಿ ಕೆಳವರ್ಗದ ಚೋಮನ ಮಗಳು ಬೆಳ್ಳಿಯನ್ನು ಭೂಮಾಲೀಕ ವರ್ಗದ ಅಧೀನದಲ್ಲಿ ಅವರ ಭೂಮಿಯಲ್ಲಿ ದುಡಿಯುವ ಶ್ರಮಜೀವಿಯಾಗಿ ನಿರೂಪಿಸಿದೆ. ಜೊತೆಗೆ ಭೂಮಾಲೀಕ ವರ್ಗವು ಕೆಳವರ್ಗದ ಮಹಿಳೆಯರನ್ನು ಭೋಗವಸ್ತುವಾಗಿ ಬಳಸಿಕೊಂಡಿರುವುದನ್ನು ಬೆಳ್ಳಿ ಪಾತ್ರದಿಂದ ತಿಳಿಯಬಹುದು. ಹಾಗೆಯೇ ‘ಹೇಮಾವತಿ’ ಕಾದಂಬರಿಯಲ್ಲಿ ಹೊಲೆಯ ಸಮುದಾಯದ ಚೆನ್ನಿ, ಮೇಲ್ಜಾತಿಯ ಸಹಾಯದಿಂದ ಸಂಗೀತ ಕಲಿತು ಗಾನಶಾರದೆಯಾಗುತ್ತಾಳೆ. ಇದರ ಜೊತೆಗೆ ಕೆಳವರ್ಗದ ಮಹಿಳೆಯ ಪಾತ್ರಗಳು ಮೇಲುವರ್ಗದ ಪುರುಷರ ದೌರ್ಜನ್ಯ ಒಳಗಾಗಿರುವುದನ್ನು ಕಾಣುತ್ತೇವೆ. ಭೂಮಾಲಿಕ ವರ್ಗವು ತಮ್ಮ ಭೂಮಿಯಲ್ಲಿ ದುಡಿಯುತ್ತಿರುವ ಈ ಕೆಳವರ್ಗದ ಮಹಿಳಾ ವರ್ಗವನ್ನು ದೌರ್ಜನ್ಯದಿಂದ ದುಡಿಸಿಕೊಳ್ಳುವುದು ಅಪಮಾನಿಸುವುದು

ಅವರ ಮೇಲೆ ಲೈಂಗಿಕ ದೌರ್ಜನ್ಯಕ್ಕೆ ಮುಂದಾಗುವ ಕ್ರೂರವಾದ ಶೋಷಣೆಯನ್ನು ಕಾದಂಬರಿಗಳಲ್ಲಿ ಚಿತ್ರಿಸಲಾಗಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯು 'ಅಕ್ಕಣಿ', 'ಚೋಮನ ದುಡಿ'ಯ ಬೆಳ್ಳಿ, 'ಕುಡಿಯರ ಕೂಸು'ವಿನ ಕೆಂಪಿ, ಸಂಸಾರದ ಬೆಳ್ಳಿ ಹೀಗೆ ಅನೇಕ ಕಾದಂಬರಿಗಳಲ್ಲಿ ಬರುವ ಕೆಳವರ್ಗದ ಮಹಿಳಾವರ್ಗವು ಮೇಲ್ವರ್ಗದ ಶೋಷಣೆಗೆ ಒಳಗಾಗಿರುವುದು ಕಾಣುತ್ತೇವೆ. ಆದ್ದರಿಂದ ಈ ಕೆಳವರ್ಗದ ಮಹಿಳಾವರ್ಗವನ್ನು ದುಡಿಯುವ ವರ್ಗವಾಗಿ ತಾತ್ವೀಕರಿಸಬಹುದು. ದುಡಿಮೆಗೆ ಒಳಗಾಗದ ವರ್ಗವಿದು. ದೇವನೂರು 'ಒಡಲಾಳ'ದಲ್ಲಿ ಗೌರಮ್ಮ, ಪುಟ್ಟಗೌರಿ ಕೂಲಿ ಮಾಡಿ ಬದುಕನ್ನು ಸಾಗಿಸುವುದು, ರಾಮಕ್ಕ, ಸುಮತಿಯು ಕೃಷಿ ಕೂಲಿಯಾಳುಗಳಾಗಿ ದುಡಿಯುವುದನ್ನು ಕಾಣುತ್ತೇವೆ. ಇದರ ಜೊತೆಗೆ ಮೇಲುಜಾತಿಯ ಮಹಿಳಾಪಾತ್ರಗಳು ಕೆಳಜಾತಿಯೊಡನೆ ಸಂಬಂಧ ಹೊಂದಿರುವುದು ಕಾಣುತ್ತೇವೆ. 'ಸೂರ್ಯ'ದಲ್ಲಿ ಸೀತಕ್ಕ, 'ಒಂದು ಹೆಣ್ಣಿನ ಒಳಜಗತ್ತು' ಕಾದಂಬರಿಯ ರತ್ನ ಜೀತಗಾರರ ಹತ್ತಿರ ಸಂಬಂಧವನ್ನು ಇಟ್ಟುಕೊಂಡು ಜಾತಿ ಚೌಕಟ್ಟನ್ನು ಮೀರಿ ನಡೆದಿರುವುದನ್ನು ಕಾಣುತ್ತೇವೆ. ಹೀಗೆ ಇಡೀ ಕಾದಂಬರಿಗಳಲ್ಲಿ ಹೆಣ್ಣು ಪುರುಷರ ಅಧೀನದಲ್ಲಿ ಚಿತ್ರಿಸಲಾಗಿದೆ. ಜೊತೆಗೆ ಅವಳ ಹಕ್ಕು ಅವಳ ಸ್ವಾತಂತ್ರ್ಯವನ್ನು ಪುರುಷಪ್ರಧಾನ ವ್ಯವಸ್ಥೆ, ಊಳಿಗಮಾನ್ಯಶಾಹಿ ವ್ಯವಸ್ಥೆ, ಬಂಡವಾಳಶಾಹಿ ವ್ಯವಸ್ಥೆ ವಂಚಿಸಿರುವುದನ್ನು ಕಾದಂಬರಿಗಳ ಮೂಲಕ ನಿರೂಪಣೆ ಆಗಿರುವುದನ್ನು ಕಾಣುತ್ತೇವೆ.

**೨.೩. ಊಳಿಗಮಾನ್ಯಶಾಹಿ ಸಾಮಾಜಿಕ ಸಂಬಂಧಗಳು ಮತ್ತು ದುಡಿಯುವ ವರ್ಗ**

ಕಾದಂಬರಿಗಳು ಬಹಳ ಮುಖ್ಯವಾಗಿ ಊಳಿಗಮಾನ್ಯ ಸಮಾಜದ ಒಳಹೊರಗನ್ನು ಕುರಿತು ನಿರೂಪಿಸಿವೆ. ಊಳಿಗಮಾನ್ಯ ಸಮಾಜವನ್ನು ನಿರೂಪಿಸುವಾಗ ದುಡಿಯುವ ವರ್ಗವನ್ನು ಅನಾವರಣ ಮಾಡುವುದು ಅನಿವಾರ್ಯ. ಯಾಕೆಂದರೆ ಊಳಿಗಮಾನ್ಯ ಸಮಾಜ ನಿಂತಿರುವುದೇ ದುಡಿಯುವ ವರ್ಗದ ಮೇಲೆ. ದುಡಿಯುವ ವರ್ಗವನ್ನು ಕಾದಂಬರಿಗಳು ಹೇಗೆ ಗ್ರಹಿಸಿವೆ ಎಂಬುದನ್ನು ಆಧರಿಸಿ ಊಳಿಗಮಾನ್ಯ ಸಮಾಜದ ಸ್ವರೂಪವನ್ನು ಕಾದಂಬರಿಗಳು ಅನಾವರಣ ಮಾಡುತ್ತವೆ. ಎಲ್ಲಾ ಕಾದಂಬರಿಗಳೂ ಒಂದೇ ರೀತಿಯಲ್ಲಿ ದುಡಿಯುವ ವರ್ಗವನ್ನು ಗ್ರಹಿಸುವುದಿಲ್ಲ. ದುಡಿಯುವ ವರ್ಗವನ್ನು ಗ್ರಹಿಸುವ ಹಾಗೂ ಅಭಿವ್ಯಕ್ತಿಸುವ ಕ್ರಮ ಬದಲಾದಂತೆ ಊಳಿಗಮಾನ್ಯ ಸಮಾಜದ ಗ್ರಹಿಕೆಯ ಸ್ವರೂಪವೇ ಕಾದಂಬರಿಗಳಲ್ಲಿ ಬದಲಾಗುತ್ತಾ ಹೋಗುತ್ತದೆ. ಇದು ಕಾದಂಬರಿಕಾರರಿಂದ ಕಾದಂಬರಿಕಾರರಿಗೆ ಬದಲಾಗುತ್ತಾ ಹೋಗುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಒಂದು ಕಾಲದಲ್ಲಿ ರಚನೆಯಾದ ಕಾದಂಬರಿಗಳು ಕಟ್ಟಿಕೊಡುವ ಊಳಿಗಮಾನ್ಯ ಸಮಾಜದ ಸ್ವರೂಪ ಒಂದು ರೀತಿಯದ್ದಾಗಿದ್ದರೆ, ಮತ್ತೊಂದು ಕಾಲದ ಕಾದಂಬರಿಗಳು ಕಟ್ಟಿಕೊಡುವ ಊಳಿಗಮಾನ್ಯ ಸಮಾಜದ ಸ್ವರೂಪ ಮತ್ತೊಂದಾಗಿರುತ್ತದೆ. ಹೀಗೆ ಕಾದಂಬರಿಗಳು ನಿರೂಪಿಸುವ ಭಿನ್ನ ಭಿನ್ನವಾದ ಆಲೋಚನೆಯ ವಿಧಾನವನ್ನು ಗುರುತಿಸಬಹುದು. ಕಾದಂಬರಿಯಲ್ಲಿ ಈ ಊಳಿಗಮಾನ್ಯ ಸಮಾಜವನ್ನು ಐದು ಭಾಗವಾಗಿ ಅಧ್ಯಯನ ಮಾಡುವುದರ ಮೂಲಕ

ದುಡಿಯುವ ವರ್ಗ ಮತ್ತು ಊಳಿಗಮಾನ್ಯಶಾಹಿ ಸಮಾಜದ ಸಂಬಂಧಗಳನ್ನು ಅಭಿವ್ಯಕ್ತಿಸಲಾಗುವುದು.

### ೨.೩.೧. ಭೂಮಿಯ ಅಸಮಾನತೆಯ ನೆಲೆ

ಮನುಷ್ಯ ಸಮಾಜದಲ್ಲಿ ಖಾಸಗಿ ಆಸ್ತಿಯು ಪ್ರಾರಂಭವಾದ ನಂತರದಿಂದ ಭೂಮಿಯ ಅಸಮಾನತೆ ಶುರುವಾಗಿದೆ. ಹಿಂದೆ ಸಾಮೂಹಿಕ ಒಡೆತನದಲ್ಲಿ ಆಸ್ತಿಯೂ ಅಸ್ತಿತ್ವಕ್ಕೆ ಬಂದ ಕಾಲದ ನಂತರದ ಬೆಳವಣಿಗೆಯು ಈ ಬಗೆಯ ಅಸಮಾನತೆ, ಶೋಷಣೆಯನ್ನು ಹುಟ್ಟಿ ಹಾಕಿರುವುದನ್ನು ಕಾಣಬಹುದು. ಬಲಿಷ್ಠರು, ದುರ್ಬಲರನ್ನು ಹಿಂಸೆ-ಬಲಾತ್ಕಾರಗಳಿಂದ ಮಣಿಸಿ ಇಡೀ ಸಮಾಜದ ಆಸ್ತಿಯನ್ನು ತಮ್ಮ ಸ್ವಂತ ಆಸ್ತಿಯನ್ನಾಗಿ ಪರಿವರ್ತಿಸಿಕೊಂಡಿದ್ದರು. ಇದರಿಂದ ಆಸ್ತಿವಂತ ಮತ್ತು ಆಸ್ತಿಹೀನರೆಂಬ ಎರಡು ವರ್ಗಗಳು ಸೃಷ್ಟಿಯಾಗಿದ್ದವು. ಅದೇ ಸ್ವರೂಪದಲ್ಲಿ ಇಂದು ಭೂಹೀನರ, ರೈತರ, ಕಾರ್ಮಿಕರ ಭೂಮಿಯನ್ನು ವಂಚಿಸಿ, ಭೂಮಾಲೀಕರು ಬಂಡವಾಳಶಾಹಿಗಳು ಭೂಮಿಯ ಒಡೆತನವನ್ನು ಹೊಂದಿರುವುದನ್ನು ಕಾಣುತ್ತೇವೆ. ಭೂಮಿಗೆ ಒಂದು ಕಡೆ ಅದರ ಮಾಲೀಕತ್ವ ಹೊಂದಿರುವ ಒಡೆಯರೂ, ಮತ್ತೊಂದು ಕಡೆ ಮಾಲೀಕತ್ವ ಹೊಂದಿಲ್ಲದ ಒಡೆಯರೂ ಅಲ್ಲದೆ ಕೃಷಿ ಕೂಲಿಗಳು ಶ್ರಮಿಕರು ಇದ್ದಾರೆ. ಈ ಎರಡು ವರ್ಗಗಳು ನಿರಂತರವಾಗಿ ಬದಲಾಗುತ್ತಾ ಸಾಗಿದೆ. ಹಾಗೆಯೇ ಭೂಮಾಲೀಕ ವರ್ಗದ ಜೊತೆಗೆ ಸಾಮ್ರಾಜ್ಯಶಾಹಿಯ ನೇರ ಹಿಡಿತ ಭೂಮಿಯ ಹಕ್ಕಿನ ಮೇಲೆ ಇದೆ. ಈ ಆಳುವ ವರ್ಗವು ದುಡಿಯುವ ವರ್ಗದವರನ್ನು ತಮ್ಮ ಭೂಮಿಯಲ್ಲಿ ಬಲಾತ್ಕಾರವಾಗಿ ಮತ್ತು ಅನ್ಯಾಯವಾಗಿ ಉತ್ಪಾದನೆ ಮಾಡಿಸಲಾಗುತ್ತಿದೆ. ಆದ್ದರಿಂದ ಭೂಮಿಯನ್ನು ಕಳೆದುಕೊಂಡ ದುಡಿಯುವ ಜನರು ಉತ್ಪಾದಕ ವರ್ಗವಾಗಿ, ಉತ್ಪಾದಕ ಶಕ್ತಿಗಳಾಗಿ ನಿರ್ಮಾಣವಾಗಿದ್ದಾರೆ.

ಭೂಮಾಲೀಕರ ಭೂಮಿಯಲ್ಲಿ ದುಡಿಯುವುದು ಶ್ರಮಿಕರಾದ ಕೆಳವರ್ಗದವರಾದ ಕೃಷಿಕಾರ್ಮಿಕರು, ಭೂಹೀನ ಹಾಗೂ ಬಡರೈತರು, ದಲಿತರು, ಇವರು ಮೇಲ್ವರ್ಗದ ಹೊಲ, ಗದ್ದೆಗಳಲ್ಲಿ ಶ್ರಮಮೌಲ್ಯ ಶೋಷಣೆಗೆ ಒಳಗಾಗಿ ದುಡಿಯುವ ಉತ್ಪಾದಕ ವರ್ಗವಾಗಿದೆ. ಈ ಉತ್ಪಾದನೆ ಸಂಬಂಧಗಳು ಈ ಎರಡು ವರ್ಗಗಳ ನಡುವೆ ಸಂಬಂಧವನ್ನು ಏರ್ಪಡಿಸಿದೆ. ಭೂಮಿಯ ಒಡೆಯರು ಭೂಮಾಲೀಕರಾಗಿ, ಭೂಮಿಯನ್ನು ಕಳೆದುಕೊಂಡವರು ಶ್ರಮಿಕರಾಗಿದ್ದಾರೆ. ಅವರ ನಡುವೆ ಮಾಲೀಕ-ಆಳುಗಳ ಸಂಬಂಧ, ಭೂಮಾಲೀಕ-ಭೂಹೀನರ ಸಂಬಂಧ, ಮಾಲೀಕ-ಕಾರ್ಮಿಕ ಸಂಬಂಧ, ಬಂಡವಾಳಶಾಹಿ-ಕಾರ್ಮಿಕರ ಸಂಬಂಧ, ಶೋಷಕ-ಶೋಷಿತ ಸಂಬಂಧಗಳು ಮಾರ್ಪಟ್ಟಿವೆ. ಇಲ್ಲಿ ಶೋಷಿತ ವರ್ಗವೇ ಎಲ್ಲಾ ಸರಕು ಸೇವೆಗಳ ಉತ್ಪಾದಕರು. ಶ್ರಮಮೌಲ್ಯ, ಸಂಪತ್ತು, ಬಂಡವಾಳ ಇವೆಲ್ಲವನ್ನೂ ಈ ದುಡಿವ ವರ್ಗವೇ ಸೃಷ್ಟಿಸುತ್ತದೆ. ಆದರೆ ಈ ಶ್ರಮದ ಹೆಚ್ಚುವರಿ ಮೌಲ್ಯವೇ ಖಾಸಗಿ ಬಂಡವಾಳವಾಗಿ ಮಾರ್ಪಟ್ಟು ಅದರ ರಕ್ಷಣೆಗೆ ಪ್ರಭುತ್ವ ಸೃಷ್ಟಿಯಾಗಿದೆ. ಹೀಗೆ ದಲಿತರು, ಕೃಷಿ ಕೂಲಿ ಕಾರ್ಮಿಕರು, ದಲಿತರ ಎಲ್ಲಾ ಬಗೆಯ ಶೋಷಣೆಯ ಸಂಬಂಧ ಇರುವುದು ಭೂಮಾಲೀಕ ವರ್ಗದೊಂದಿಗೆ. ದುಡಿವ ಜನರ ಮೇಲೆ

ಅಸಮಾನತೆ, ಹಸಿವು, ಅಪಮಾನ, ಅನ್ಯಾಯ, ಶೋಷಣೆ, ದಮನ, ದಬ್ಬಾಳಿಕೆ, ಜಾತಿ ಶೋಷಣೆ ಮಾಡುತ್ತಿರುವರು ಇವರೇ. ಈ ಆಳುವ ವರ್ಗವು ತನ್ನ ಸಂಪತ್ತಿನ ಒಡೆತನ ಉಳಿಸಿಕೊಳ್ಳಲು ಜನಸಾಮಾನ್ಯರಿಗೆ ತನ್ನದೇ ಆದ ರಾಜಕೀಯವನ್ನು ಸಮಾಜದಲ್ಲಿ ಹರಡುತ್ತಿರುತ್ತದೆ. ಬಡವ ಮತ್ತು ಶ್ರೀಮಂತ ಎಂಬ ವರ್ಗ ತಾರತಮ್ಯವನ್ನು ಮುಚ್ಚಿಡುತ್ತದೆ. ದೇಶದಲ್ಲಿ ವರ್ಗಗಳೇ ಇಲ್ಲ, ಜಾತಿ ಶ್ರೇಣೀಕರಣ ಮಾತ್ರ ಇದೆ ಎಂದು ಹೇಳಿಸುತ್ತದೆ. ಯಾಕೆಂದರೆ ವರ್ಗಗಳು ಇವೆ ಎಂದರೆ ವರ್ಗಹೋರಾಟ ನಡೆಯುತ್ತದೆ. ಅದಕ್ಕೆ ವರ್ಗಗಳೇ ಇಲ್ಲ ಎಂದು ಹೇಳಿಸುತ್ತಿರುತ್ತದೆ. ವರ್ಗಸಂಘರ್ಷ ನಡೆದರೆ ಭೂಮಾಲೀಕ ವ್ಯವಸ್ಥೆ ಬಂಡವಾಳಶಾಹಿ ವ್ಯವಸ್ಥೆ, ಬಹುರಾಷ್ಟ್ರೀಯ ಕಂಪನಿಗಳು, ಸಾಮ್ರಾಜ್ಯಶಾಹಿ ವರ್ಗಗಳು ನಾಶವಾಗುತ್ತವೆ. ಅವರು ಹೊಂದಿರುವ ಸಂಪತ್ತು, ಅಧಿಕಾರ ಕೈ ತಪ್ಪಿ ಹೋಗುತ್ತದೆ ಎಂದು ಈ ಬಗೆಯ ಆಲೋಚನೆಯನ್ನು ಆಳುವ ವರ್ಗ ಹುಟ್ಟು ಹಾಕುತ್ತದೆ. ಈ ಆಳುವ ವರ್ಗದ ಆಲೋಚನೆಯನ್ನು ನೇರವಾಗಿ ಸಾಹಿತ್ಯ ಕೃತಿಗಳು ಗ್ರಹಿಸಿರುವುದನ್ನು ಗುರುತಿಸಬಹುದು.

ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾದ ಜನರು, ಆಳುವ ವರ್ಗದ ಅಧೀನದಲ್ಲಿ ದುಡಿಯುತ್ತಿದ್ದಾರೆ. ಅವರು ದುಡಿದರೆ ಹಸಿವಿನ ಸಮಸ್ಯೆಗಳನ್ನು ಸಾಗಿಸಲು ಸಾಧ್ಯವಾಗುವಂತಹ ಪರಿಸ್ಥಿತಿಯನ್ನು ಈ ವರ್ಗ ಅಸಮಾನತೆ ಹುಟ್ಟುಹಾಕಿದೆ. ಆದ್ದರಿಂದ ಇವರನ್ನು ದುಡಿಯುವ ವರ್ಗ, ಶ್ರಮಜೀವಿ ವರ್ಗ, ಕಾರ್ಮಿಕ ವರ್ಗ, ಉತ್ಪಾದಕ ಶಕ್ತಿಗಳು ಎಂದು ಗುರುತಿಸುತ್ತೇವೆ. ಉತ್ಪಾದನೆಗೆ ಬಳಸುವ ಭೂಮಿ, ಬಂಡವಾಳ ಉತ್ಪಾದನೆಯ ಸಾಧನ ಸಲಕರಣೆಗಳನ್ನು ಇವರಿಂದ ವಂಚಿಸಿದ್ದರಿಂದ ಈ ಆಳುವ ವರ್ಗ ಅಸ್ತಿತ್ವದಲ್ಲಿ ಇದೆ. ಈ ಬೆಳವಣಿಗೆಯು ಹೊಸ ಹೊಸದಾಗಿ ಚಿಗುರು ಹೊಡೆಯುತ್ತಿರುವುದರಿಂದ ವರ್ಗ ಅಸಮಾನತೆ ಹೆಚ್ಚಾಗಿದೆ. ಇದು ವರ್ಗ ವೈರುಧ್ಯತೆಗೆ ಕಾರಣವಾಗಿರುವುದನ್ನು ಕಾಣಬಹುದು.

ಸಾಹಿತ್ಯ ಕೃತಿಗಳು ಈ ವರ್ಗ ತಾರತಮ್ಯಕ್ಕೆ ಕಾರಣವಾದ ಸಂಪತ್ತಿನ ಅಸಮಾನತೆಯನ್ನು, ಭೂಮಿಯ ಅಸಮಾನತೆಯನ್ನು ಬಿಡಿಬಿಡಿಯಾಗಿ ಗ್ರಹಿಸಿರುವುದೇ ಹೆಚ್ಚು. ಅದನ್ನು ಒಂದು ವಸ್ತುವಾಗಿ ಸ್ವೀಕರಿಸಿರುವ ಬರಹಗಳು ಸಾಹಿತ್ಯ ಚರಿತ್ರೆಯಲ್ಲಿ ಕಡಿಮೆ. ಭೂಮಿಯ ಪ್ರಶ್ನೆಯನ್ನು ತೆಗೆದುಕೊಂಡರೆ ಅದು ಒಂದು ಸಿದ್ಧ ಮಾದರಿಯಲ್ಲಿ ಇರುವುದಿಲ್ಲ. ಅದು ಸಮಾಜದ ಗ್ರಹಿಕೆಯ ಭಾಗವಾಗಿ ಮತ್ತು ಭೂಮಿಯನ್ನು ಪ್ರಧಾನವಾಗಿ ವಸ್ತುವಿಷಯವಾಗಿ ಗ್ರಹಿಸುತ್ತದೆ. ಆಳುವ ವರ್ಗದ ಮಾದರಿಯ ಬರಹಗಳು ಭೂಮಿಯ ಪ್ರಶ್ನೆಯನ್ನು ಮುಚ್ಚಿಟ್ಟು ಜಾತಿ ವರ್ಣಗಳ ಹೆಚ್ಚು ಹೊತ್ತು ಕೊಟ್ಟು ಭೂಮಿಯ ಅಸಮಾನತೆಯನ್ನು ಗೌಣಗೊಳಿಸುತ್ತವೆ. ಇಂತಹ ಬರಹಗಳಲ್ಲಿ ಅಸಮಾನತೆ ಮುಖ್ಯವಾಗಿ ಸಮಾಜದ ಗ್ರಹಿಕೆಯನ್ನು ಬದಲಾಯಿಸಲು ಮಾತ್ರ ಬಳಕೆಯಾಗುವುದನ್ನು ಕಾಣುತ್ತೇವೆ. ಸ್ವಲ್ಪ ಸುಧಾರಣೆಯ ನೆಲೆಯ ಬರಹಗಾರರು ಭೂಮಿಯನ್ನು ವರ್ಗ ಅಸಮಾನತೆಯಲ್ಲಿ ನೋಡದೆ ಅದನ್ನು 'ಕಾಯಕದ' ನೆಲೆಯಲ್ಲಿ ನೋಡಿರುವುದು. ಕನ್ನಡದ ಸಂದರ್ಭದಲ್ಲಿ ಪ್ರಗತಿಶೀಲ, ದಲಿತ ಬಂಡಾಯದ ಕಾಲಘಟ್ಟದಲ್ಲಿ

ಭೂಮಿಯ ಅಸಮಾನತೆಯ ಕುರಿತು ಕಥೆ, ಕಾದಂಬರಿಗಳು ಹೆಚ್ಚಿಗೆ ನಿರೂಪಣೆ ಮಾಡಿರುವುದನ್ನು ಕಾಣಬಹುದು. ಇದಕ್ಕೆ ಅನೇಕ ಕಾರಣಗಳಿರಬಹುದು. ಸಾಹಿತ್ಯ ಬರಹಗಳು ಸಮಾಜದ ಕೆಳವರ್ಗದವರ, ವಂಚನೆಗೆ ಒಳಗಾದವರ ಬಗೆಗಿನ ಹಸಿವಿನ ಸಂವೇದನೆಗಳನ್ನು ಕಟ್ಟಿಕೊಡುವ ಉದ್ದೇಶ ಹೊಂದಿದೆ ಎಂದು ಭಾವಿಸಿದರು. ಅದು ಸಮಾಜದ ಇಂತಹ ಚಲನೆಯನ್ನು ಈ ಕೃತಿಗಳು ಗ್ರಹಿಸಿವೆ ಅನಿಸುತ್ತದೆ. 

ಅದರಲ್ಲಿಯೂ ಕಾದಂಬರಿ ಸಾಹಿತ್ಯವನ್ನು ಪ್ರಧಾನವಾಗಿಟ್ಟುಕೊಂಡು ಹೇಳುವುದಾದರೆ, ಕಾದಂಬರಿ ಸಾಹಿತ್ಯವು ಊಳಿಗಮಾನ್ಯಶಾಹಿ ಮೌಲ್ಯಗಳ ನೆಲೆಯಲ್ಲಿ ಸಮಾಜವನ್ನು ಗ್ರಹಿಸಿ, ವರ್ಗಪ್ರಜ್ಞೆಯನ್ನು ತನ್ನ ಬದ್ಧತೆಗೆ ತಂದುಕೊಡುವಲ್ಲಿ ವಿಫಲತೆಗಳನ್ನು ಹೊಂದಿದೆ. ರಾಜಕೀಯವಾಗಿ ಅನೇಕ ಕಾರಣಗಳಿದ್ದರೂ, ಸಾಹಿತ್ಯವು ವರ್ಗಪ್ರಜ್ಞೆಯ ಭಾಗವಾಗಿ ನಿರೂಪಿಸುವ ವಾತಾವರಣ ಇದ್ದರೂ ಆ ವಸ್ತುಜಗತ್ತನ್ನು ಸೀಮಿತ ಚೌಕಟ್ಟಿಗೆ ತರುವ ಬರಹಗಳನ್ನು ನಾವು ಕಾಣಲು ಸಾಧ್ಯವಿದೆ. ಕನ್ನಡ ಕಾದಂಬರಿಗಳು ಈ ವಿಷಯವನ್ನು ಹೇಗೆ ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ ಎಂಬುದಕ್ಕೆ ಶಿವರಾಮ ಕಾರಂತರ 'ಚೋಮನ ದುಡಿ' ಕಾದಂಬರಿಯಲ್ಲಿ ಬರುವ ಚೋಮನ ಪಾತ್ರವನ್ನು ಭೂಮಿಯ ಒಡೆಯನ್ನಾದ ಸಂಕಪ್ಪಯ್ಯನ ಭೂಮಿಯಲ್ಲಿ ದುಡಿಯುವ ಜೀತದ ಆಳಾಗಿ ಚೋಮನನ್ನು ಚಿತ್ರಿಸಿ ಉದಾಹರಿಸಬಹುದು. ಹಾಗೆಯೆ ಸಂಕಪ್ಪಯ್ಯ ಇಲ್ಲಿ ಭೂಮಿಯ ಒಡೆಯನಾಗಿ ಕೆಳಜಾತಿಯ ಜನರ ಹಕ್ಕನ್ನು ವಂಚಿಸಿದ ಭೂಮಾಲೀಕ ವ್ಯವಸ್ಥೆಯ ಪ್ರತಿನಿಧಿಯಾಗಿದ್ದಾನೆ. ಇಲ್ಲಿ ಚೋಮನು ಕೆಳಜಾತಿಯವನು. ಆ ಕಾರಣಕ್ಕಾಗಿ ಭೂಮಿಯನ್ನು ಹೊಂದಬಾರದು ಎನ್ನುವ ಊಳಿಗಮಾನ್ಯಶಾಹಿ ಆಳುವ ವರ್ಗದ ಧೋರಣೆ ಇಲ್ಲಿದೆ. ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾಗಿರುವ ಚೋಮನು ಸಂಕಪ್ಪಯ್ಯನ ಮನೆಯ ಜೀತದ ಆಳಾಗಿ ದುಡಿಯುವ ಉತ್ಪಾದಕ ವರ್ಗದ ಪ್ರತೀಕವಾಗಿದ್ದಾನೆ. ಇಲ್ಲಿ ಗೇಣಿಗಾಗಿ ಭೂಮಿಯನ್ನು ಕೇಳುವುದನ್ನು ಗಮನಿಸಿದರೆ, ಈ ಗೇಣಿಭೂಮಿಯ ಅಪೇಕ್ಷೆಯು ಚೋಮನ ಮೂಲಕ ನಿರೂಪಣೆಗೊಂಡಿಲ್ಲ ಅನಿಸುತ್ತದೆ. ಅವನು ತನ್ನ ಭೂಮಿಯ ಹಕ್ಕನ್ನು ಕಳೆದುಕೊಂಡವನು. ಆದರೆ ಇವನ ಭೂಮಿಯ ಹಕ್ಕನ್ನು ವಂಚಿಸಿದ ಆಳುವ ವರ್ಗದ ವಿರುದ್ಧ ಪ್ರತಿಭಟನೆ ಇಲ್ಲ. ಈ ಬಗೆಯ ನಿರೂಪಣೆಯ ಆಳದಲ್ಲಿ ಊಳಿಗಮಾನ್ಯಶಾಹಿ ಜಾತಿಮೌಲ್ಯಗಳು ಅಡಗಿವೆ. ಚೋಮನ ಕುಟುಂಬ ಎಷ್ಟೇ ದುಡಿದರೂ ಹೊಟ್ಟೆಗೆ ಸಾಕಾಗುತ್ತಿರಲಿಲ್ಲ. ಇದನ್ನು ಗಮನಿಸಿದರೆ ಕೆಳವರ್ಗದ ಜನರ ಶ್ರಮಶೋಷಣೆ ಮಾಡುವ ಆಳುವ ವರ್ಗದ ಸ್ಥಿತಿ ಗೊತ್ತಾಗುತ್ತದೆ. ಹಸಿವಿನ ಸಮಸ್ಯೆ ಎದುರಿಸುತ್ತಿರುವ ಚೋಮನಿಗೆ ಗೇಣಿಯ ಪ್ರಶ್ನೆ ಮಾಡಿದೆಯೇ ಹೊರತು ಹಸಿವಿನ ಪ್ರಶ್ನೆ ಕಾಡುವುದಿಲ್ಲ. ಇದು ಕಾದಂಬರಿಕಾರರಿಗೆ ಅಗತ್ಯವಾಗಿ ಕಂಡಿಲ್ಲವಾಗಿದೆ.

ಚೋಮನ ದುಡಿ ಕಾದಂಬರಿಯು ದುಡಿಯುವ ಜನರ ಭೂಮಿಯ ಹಕ್ಕನ್ನು ಕುರಿತು ಮಾತನಾಡುತ್ತದೆ. ಆದರೆ ಅದು ಅವರ ಹಕ್ಕಿನ ಭಾಗವಾಗಿ ಗ್ರಹಿಸುವುದಿಲ್ಲ. ಹಸಿವು, ಬಡತನ, ಅಸಮಾನತೆಯು ಭೂಮಾಲೀಕ ವರ್ಗದ ಶೋಷಣೆಯ ಪರಿಣಾಮವಾಗಿ ಹುಟ್ಟಿಕೊಂಡಿವೆ.

ಆದರೆ ಈ ಆಳುವ ವರ್ಗದ ವಿರುದ್ಧದ ಧ್ವನಿಯು ಎಲ್ಲಿಯೂ ಬರುವುದಿಲ್ಲ. ಇದು ಈ ಕಾದಂಬರಿಯ ಮಿತಿ ಕೂಡ ಹೌದು. ವರ್ಗ ಅಸಮಾನತೆಯನ್ನು ಮುಚ್ಚಿಟ್ಟು ಗೇಣಿಗಾಗಿ ಭೂಮಿ ಕೇಳಿಸಿರುವ ವಿಧಾನ ಆಳುವ ವರ್ಗದ ಮಾದರಿಯ ಆಲೋಚನೆಯಾಗಿದೆ. ಕಾದಂಬರಿಯಲ್ಲಿ ಸಂಕಪ್ಪಯ್ಯ ಭೂಮಿಯ ಒಡೆಯ, ಚೋಮ ಅವರ ಭೂಮಿಯಲ್ಲಿ ದುಡಿಯುವ ಆಳು. ಇವರಿಬ್ಬರ ನಡುವೆ ಮಾಲೀಕ ಮತ್ತು ಆಳಿನ ಸಂಬಂಧವಿದೆ. ಅದೇ ರೀತಿಯಲ್ಲಿ ಚೋಮನ ಶೋಷಣೆಗೆ ಒಳಗಾಗಿದ್ದಾನೆ ಎಂದಾಗ ಇವನನ್ನು ಶೋಷಣೆ ಮಾಡಿರುವ ಆಳುವ ವರ್ಗ ಇರಲೇಬೇಕು. ಹಾಗಾಗಿ ಶೋಷಕ ಮತ್ತು ಶೋಷಿತ ಸಂಬಂಧಗಳ ದೃಷ್ಟಿಕೋನದ ಅಡಿಯಲ್ಲಿ ಕಾದಂಬರಿಯ ಅಧ್ಯಯನ ಮಾಡಿದಾಗ ನಮಗೆ ಸ್ಪಷ್ಟವಾಗುತ್ತದೆ. ಚೋಮನನ್ನು ತನ್ನ ಹಿತಾಸಕ್ತಿಯಲ್ಲಿ ಹೇಳಿಕೊಳ್ಳಲು ನಿರೂಪಿಸಿರುವ ದುಡಿಯುವ ವರ್ಗದ ಪಾತ್ರವಾಗಿ ಕಾಣಿಸುತ್ತಾರೆ. ಗೇಣಿಗಾಗಿ ಭೂಮಿಯನ್ನು ಕೇಳಿದ್ದಕ್ಕೆ ಚೋಮನನ್ನು ಈ ರೀತಿಯಾಗಿ ಆಳುವ ವರ್ಗ ನಡೆಸಿಕೊಂಡಿದೆ. ಭೂಮಿಯ ಹಕ್ಕನ್ನು ಕೇಳಿದರೆ ಚೋಮನ ಸ್ಥಿತಿ ಏನಾಗಬಹುದಿತ್ತು? ಬೇಸಾಯದ ಆಸೆಗೆ ತನ್ನ ಮಕ್ಕಳನ್ನು ಜೀತಕ್ಕೆ ಕಳಿಸಿದ. ಮಗಳನ್ನು ಮೇಲುವರ್ಗದ ಶೋಷಣೆಗೆ ದೂಡಿದ. ಇದು ಚೋಮನ ಆಲೋಚನೆಯ ಮೂಲಕ ಬಂದಿದ್ದಲ್ಲ. 'ಸಾಲ'ದ ಹೆಸರಲ್ಲಿ ಆಳುವ ವರ್ಗವನ್ನು ತನ್ನ ಅಧೀನದಲ್ಲಿಟ್ಟುಕೊಂಡ ಪರಿ ಇದು. ಹೀಗೆ ಆಳುವ ವರ್ಗ ಶೋಷಣೆಯನ್ನು ಒಪ್ಪಿಕೊಂಡು ಹೋಗುವ ಚೋಮನು ದುಡಿಯುವ ವರ್ಗದ ಪ್ರಜ್ಞೆಯನ್ನು ಆರೋಪಿಸಿದ ಪಾತ್ರವಾಗಿ ಅನಾವರಣಗೊಂಡಿದ್ದಾನೆ.

'ಕುಡಿಯರ ಕೂಸು' ಕಾದಂಬರಿಯಲ್ಲಿ ಕುಡಿಯ ಸಮುದಾಯ ಕಾಡಿನ ಪರಿಸರದಲ್ಲಿ ಜೀವನ ಕಟ್ಟಿಕೊಂಡು ಬಂದಿರುವ ಶ್ರಮಜೀವಿಗಳು. ಈ ಕಾಡು ಅನಾದಿಕಾಲದಿಂದ ಭೂಮಾಲೀಕರಿಗೆ ಸೇರಿರುವುದನ್ನು ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಕುಡಿಯ ಸಮುದಾಯ ತಲತಲಾಂತರದಿಂದ ಹೊಂದಿದ ಭೂಮಿಯ ಹಕ್ಕನ್ನು ಭೂಮಾಲೀಕ ವ್ಯವಸ್ಥೆ ವಂಚಿಸಿ ತನ್ನದಾಗಿಸಿಕೊಂಡಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಆಧುನಿಕತೆಯ ಪ್ರವೇಶದಿಂದ ಇಡೀ ಕಾಡಿಗೆ ಏಲಕ್ಕಿ ಕೃಷಿಯನ್ನು ವಿಸ್ತರಿಸಿದ ಭೂಮಾಲೀಕ ವ್ಯವಸ್ಥೆ ಕುಡಿಯರ ಬದುಕಿನ ನೆಲೆಯನ್ನು ಕೈತಪ್ಪಿಸಿ ಅವರನ್ನು ಜೀತದ ಆಳುಗಳಾಗಿ ದುಡಿಸಿಕೊಳ್ಳಲಾಗಿದೆ. ಇದರಿಂದ ತಿರುಮಲಭಟ್ಟನು ಭೂಮಿಯ ಒಡೆಯನಾದರೆ ಕುಡಿಯರು ಆಳುಗಳಾಗಿ ದುಡಿಯುವ ಶ್ರಮಿಕರು. ಈ ಏಲಕ್ಕಿ ಬೆಳೆಯನ್ನು ಕುಮರಿ ಭೂಮಿಯನ್ನು ಉಳುಮೆ ಮಾಡುವುದು ಕುಡಿಯರು. ಇಲ್ಲಿ ಭೂಮಿಗೂ ಮತ್ತು ಕುಡಿಯರಿಗೂ ಉತ್ಪಾದನಾ ಸಂಬಂಧವಿದೆ. ಆದರೆ ತಿರುಮಲಭಟ್ಟನಿಗೆ ಭೂಮಿಯ ಹಕ್ಕಿನ ಸಂಬಂಧವಿದೆ. ಈ ಭೂಮಿಯಲ್ಲಿ ಕುಡಿಯರು ವರ್ಷದ ನಾಲ್ಕು ತಿಂಗಳು ಕೂಲಿ ಇಲ್ಲದೆ ದುಡಿಯಬೇಕು. ಹೀಗೆ ದುಡಿದರೆ ಇವರ ಶ್ರಮಕ್ಕೆ ಮೌಲ್ಯವೆಂದು ವರ್ಷಕ್ಕೊಂದು ಬಟ್ಟೆ, ಉಪ್ಪು ಕೊಡಲಾಗುತ್ತಿತ್ತು. ಇಲ್ಲಿ ಜೀತದ ಆಳುಗಳಾಗಿ ದುಡಿಸಿ ಕೂಲಿಯನ್ನು ಸಹ ವಂಚಿಸಿರುವ ಊಳಿಗಮಾನ್ಯಶಾಹಿ ಭೂಮಾಲೀಕರ ಕ್ರೂರವಾದ ಶೋಷಣೆಯ ವಿಧಾನವನ್ನು ಕಾಣಬಹುದು.

ಕಾದಂಬರಿಯು ಭೂಮಿಯ ಹಕ್ಕನ್ನು ಕಳೆದುಕೊಂಡ ಕುಡಿಯರ ಜೀವನದ ಸ್ಥಿತಿಯನ್ನು ವಿವರಿಸುತ್ತದೆ. ಅವರ ಹಕ್ಕನ್ನು ಕಿತ್ತುಕೊಂಡ ಭೂಮಾಲೀಕ ವ್ಯವಸ್ಥೆಯ ವಿರುದ್ಧ ಭೂಮಿಯ ಹಕ್ಕಿಗಾಗಿ ಕಾದಂಬರಿ ಧ್ವನಿ ಮಾಡುವುದಿಲ್ಲ. ಮೇಲ್ವರ್ಗದ ಶೋಷಣೆಗಳನ್ನು ಒಪ್ಪಿಕೊಂಡು ಹೋಗುವ ಶ್ರಮಜೀವಿಗಳಾಗಿ ಕುಡಿಯ ಸಮುದಾಯವನ್ನು ಗುರುತಿಸಬಹುದು. ಆದರೆ ಕುಲದ ಪ್ರಶ್ನೆ ಬಂದಾಗ, ಶೋಷಕ ವ್ಯವಸ್ಥೆಯ ವಿರುದ್ಧ ಧ್ವನಿ ಇದೆ ಮತ್ತು ಮಹಿಳೆಯರ ಮೇಲಿನ ದೌರ್ಜನ್ಯದ ವಿರುದ್ಧ ಪ್ರತಿಭಟನೆ ಗುರುತಿಸಬಹುದು(ತಿಮ್ಮಯ್ಯ ಪ್ರಕರಣ). ಆದರೆ ಭೂಮಿಯ ಹಕ್ಕನ್ನು ವಂಚಿಸಿದ ಶೋಷಕ ವ್ಯವಸ್ಥೆಯನ್ನು ಒಪ್ಪಿಕೊಂಡು ಹೋಗುವ ದುಡಿಯುವ ವರ್ಗದ ಪ್ರತಿನಿಧಿಗಳಾಗಿ ಕುಡಿಯ ಸಮುದಾಯವನ್ನು ಕಾದಂಬರಿಕಾರರು ನಿರೂಪಿಸಿದ್ದಾರೆ. ಇಲ್ಲಿ ಈ ಕುಡಿಯ ಸಮುದಾಯವು ಏಲಕ್ಕಿ ಬೇಸಾಯ ಮಾಡುವ ಶ್ರಮಜೀವಿಗಳು ಇವರಿಗೆ ಮಾಲೀಕ ವರ್ಗಗಳ ಶೋಷಕ-ಶೋಷಿತ ಸಂಬಂಧವಾಗಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು ಹೊರತು ವರ್ಗಪ್ರಜ್ಞೆಯ ಭಾಗವಾಗಿ ನಿರೂಪಣೆಗೊಂಡಿಲ್ಲ.

'ಹೇಮಾವತಿ' ಕಾದಂಬರಿಯಲ್ಲಿ ಬರುವ ಹೊಲೆಯ ಸಮುದಾಯದವರ ಪಾತ್ರಗಳು ಕೆಳಜಾತಿಯನ್ನು ಪ್ರತಿನಿಧಿಸುತ್ತವೆ. ಇವರಿಗೆ ಅಂಗೈಯಗಲದ ಭೂಮಿಯಿದ್ದರೂ ಅದು ಕೆಲಸಕ್ಕೆ ಬಾರದ ಭೂಮಿಯಾಗಿದೆ. ಉಳಿದಂತೆ ಶ್ರೀನಿವಾಸ ಪೆರುಮಾಳರು ಭೂಮಿಯ ಹಕ್ಕುದಾರರು ದಲಿತರು ಇವರ ಭೂಮಿಯಲ್ಲಿ ದುಡಿಯುವ ಶ್ರಮಿಕರು. ಇಲ್ಲಿ ಬರುವ ಕಾಳನ ಪಾತ್ರವನ್ನು ಗಮನಿಸಿದರೆ ಶ್ರೀನಿವಾಸ ಪೆರುಮಾಳರ ಮನೆಯಲ್ಲಿ ಖಾಯಂ ಜೀತಗಾರ ವೃತ್ತಿಯನ್ನು ಮಾಡುವುದು ಗೋಚರಿಸುತ್ತದೆ. ಅವನ ತಂದೆ ಅಜ್ಜ, ಮುತ್ತಜ್ಜ ಎಲ್ಲರೂ ಇವರ ಮನೆಯಲ್ಲಿ ಖಾಯಂ ಜೀತಗಾರ ವೃತ್ತಿ ಮಾಡುತ್ತಿದ್ದರು. ಅವನ ತಂದೆ, ಅಜ್ಜ, ಮುತ್ತಜ್ಜ ಎಲ್ಲರ ಹೆಸರು ಕಾಳ ಎಂದೇ. ಇವರೆಲ್ಲರೂ ತಲೆತಲಾಂತರದಿಂದ ಜೀತಗಾರರೇ ಎಂದು ಕಾದಂಬರಿ ಚಿತ್ರಿಸಿದೆ. ಈ ಅಂಶವು ದಲಿತರು ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾಗಿರುವುದನ್ನು ಸೂಚಿಸುತ್ತದೆ. "ಪಾಪ ಈ ಪ್ರಾಣಿ ಎಷ್ಟು ತಲೆಮಾರಿನಿಂದ ಹೀಗೆ ನಮಗಾಗಿ ದುಡಿಯುತ್ತಿದ್ದಾನೆ. ಇವನು ದುಡಿಯುವುದು, ಇದರ ಫಲ ನಾವು ಅನುಭವಿಸುವುದು"[೨೦] ಎಂದು ಆನಂದನ ಮಾತು ಶ್ರಮಜೀವಿಗಳನ್ನು ಕನಿಕರದಿಂದ ನೋಡಿರುವ ಬಗೆಯನ್ನು ಸೂಚಿಸಿದರೂ ಅದು ದುಡಿಯುವ ಜನರನ್ನು ಭೂಮಾಲೀಕ ವ್ಯವಸ್ಥೆ ಯಾವ ರೀತಿ ಶೋಷಣೆ ಮಾಡಿದೆ ಎಂಬುದನ್ನು ಸೂಚಿಸುತ್ತದೆ. ಆದರೆ ಕಾದಂಬರಿಯ ಆಶಯದಲ್ಲಿ ದಲಿತ ವರ್ಗವನ್ನು ದೇವಾಲಯಗಳ ಪ್ರವೇಶಕ್ಕೆ ಒತ್ತಾಯಿಸುತ್ತಿದೆ ಹಾಗೂ ಸಂಗೀತ, ಶಿಕ್ಷಣದ ಅರಿವನ್ನು ಬಯಸುತ್ತದೆ. ಆದರೆ ಈ ದಲಿತ ವರ್ಗದ ಶೋಷಣೆಗೆ ಕಾರಣವಾದ ಭೂಮಿಯ ಹಕ್ಕಿನ ಅಸಮಾನತೆಯ ಬಗ್ಗೆಯಾಗಲಿ, ದಲಿತ ವರ್ಗದ ಶ್ರಮಮೌಲ್ಯ ಶೋಷಣೆಯ ಬಗೆಯಾಗಲಿ ಕಾದಂಬರಿ ನಿಲ್ಲುವುದಿಲ್ಲ. ಆದ್ದರಿಂದ ಊಳಿಗಮಾನ್ಯಶಾಹಿ ಭೂಮಾಲೀಕ ವರ್ಗವು ದಲಿತರ ಸುಧಾರಣೆ ಬಯಸುತ್ತ ಅವರನ್ನು ಶೋಷಣೆ ಮಾಡುವುದನ್ನು ಗುರುತಿಸಬಹುದು. ಆ ಕಾಲದ ಸಮಾಜದ ಮುಖ್ಯ ವಿಷಯವಾದ ದೇವಸ್ಥಾನ ಪ್ರವೇಶ,

ಅಂತರ್ಜಾತಿ ವಿವಾಹದ ಕಡೆ ಮೇಲ್ಜಾತಿಯ ಜನರ ಆಸೆ ಇದೆ. ಆದರೆ ಜಾತಿಯ ಶೋಷಣೆಯನ್ನು ಮೀರುವ ಅಥವಾ ಅವರ ಶೋಷಣೆಯನ್ನು ಮುಚ್ಚಿಡುವ ಆಳುವ ವರ್ಗದ ಆಲೋಚನೆ ಇದೆ. ಇಲ್ಲಿ ದಲಿತ ವರ್ಗವು ಶ್ರಮಜೀವಿಗಳು ತನ್ನದಲ್ಲದೇ ಭೂಮಿಯಲ್ಲಿ ದುಡಿಯುವರಾಗಿದ್ದರಿಂದ ಊಳಿಗಮಾನ್ಯಶಾಹಿ ವ್ಯವಸ್ಥೆಯಲ್ಲಿ ಕೆಳಜಾತಿ, ಕೆಳವರ್ಗದ ಶ್ರಮಿಕ ವರ್ಗವಾಗಿ ಗುರುತಿಸಬಹುದು. ಈ ಕಾದಂಬರಿಯಲ್ಲಿ ಭೂಮಿಯ ಹಕ್ಕನ್ನು ಮುಚ್ಚಿಟ್ಟು ದಲಿತರ ಸುಧಾರಣೆ ಬಯಸುವ ಊಳಿಗಮಾನ್ಯಶಾಹಿ ಸಂಬಂಧವನ್ನು ಗುರುತಿಸಬಹುದು.

'ಚಿರಸ್ಮರಣೆ' ಕಾದಂಬರಿಯು ಊಳಿಗಮಾನ್ಯಶಾಹಿ ಭೂಮಾಲೀಕ ವರ್ಗದ ಸ್ವಭಾವವನ್ನು ನಿರೂಪಿಸುತ್ತದೆ. ಕಯ್ಯೂರಿನ ಸಣ್ಣ ರೈತರ ಜಮೀನನ್ನು ಅಕ್ರಮವಾಗಿ ಕಿತ್ತುಕೊಂಡ ಭೂಮಾಲೀಕ ವ್ಯವಸ್ಥೆಯ ವಿರುದ್ಧ ರೈತ ಕಾರ್ಮಿಕರು ನಡೆಸಿದ ಹೋರಾಟದ, ವರ್ಗಚರಿತ್ರೆಯನ್ನು ಇದರಲ್ಲಿ ಗುರುತಿಸಬಹುದು. ದುಡಿಯುವ ವರ್ಗದ ಭೂಮಿಯನ್ನು ವಂಚಿಸಿ ಕಿತ್ತುಕೊಂಡ ನಂಬಿಯಾರ್, ನಂಬೂದರಿ ಭೂಮಾಲೀಕ ವರ್ಗವಾಗಿ ಭೂಮಿಯ ಹಕ್ಕನ್ನು ಹೊಂದಿದ್ದಾರೆ. ಆದರೆ ರೈತರ ಭೂಮಿಯನ್ನು ಕಿತ್ತುಕೊಂಡಿದ್ದರಿಂದ ಇವರು ಕೃಷಿಯಲ್ಲಿ ದುಡಿಯುವ ಶ್ರಮಿಕ ವರ್ಗವಾಗಿ ಗುರುತಿಸಬಹುದು. ಶೋಷಣೆಗೆ ಒಳಗಾದ ಕೃಷಿ ಕಾರ್ಮಿಕರು, ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿ ವರ್ಗದ ವಿರುದ್ಧ ಭೂಮಿಯ ಹಕ್ಕಿಗಾಗಿ ಹೋರಾಟ ಮಾಡುವುದನ್ನು ಚಿತ್ರಿಸುತ್ತದೆ. ವರ್ಗ ಶೋಷಣೆಯ ವಿರುದ್ಧ ರೈತಕಾರ್ಮಿಕ ಸಂಘಟಿತ ಹೋರಾಟವನ್ನು ಸೈದ್ಧಾಂತಿಕವಾಗಿ ಅನಾವರಣ ಮಾಡಿದೆ. "ದಲಿತಕೋಟೆಯ ಎಲುಬುಗೂಡಿನ ಮೇಲೆ ಕಟ್ಟಿದ ಸಾಮ್ರಾಜ್ಯ ಖಂಡಿತ ಪುಡಿ ಪುಡಿಯಾಗುತ್ತದೆ! ಲೋಕವೆಲ್ಲ ದುಡಿಯುವ ಜನ ವಿಜಯ ಪತಾಕ್ಕೆ ಹಾರಿಸಿಯೇ ಹಾರಿಸ್ತಾರೆ"[೨೧] ಇದು ವರ್ಗ ಹೋರಾಟದ ಗುರಿಯನ್ನು ಸೂಚಿಸುತ್ತಿದೆ. "ದುಡಿಯುವ ಜನರೆಲ್ಲ ಒಂದಾದರೆ, ಸುಲಿಯುವ ಜನರೆಲ್ಲ ಸೋತು ಹೋಗ್ತಾರೆ. ನಮ್ಮನ್ನು ಬಿಗಿದಿರುವ ಬೇಡಿಗಳು ಪುಡಿ ಪುಡಿಯಾಗುತ್ತವೆ".[೨೨] ಜನ ಸಂಘಟನೆ ಹಾಗೂ ಬ್ರಿಟಿಷ್ ವಸಾಹತುಶಾಹಿ ಮತ್ತು ಊಳಿಗಮಾನ್ಯಶಾಹಿ ವ್ಯವಸ್ಥೆಯ ವಿರುದ್ಧ ಭೂಮಿಯ ಹಕ್ಕಿಗಾಗಿ ಜನ ಹೋರಾಡಿದ ವರ್ಗಚರಿತ್ರೆಯನ್ನು ಚಿತ್ರಿಸಿದೆ. 'ಉಳುವವನೇ ಭೂಮಿಯ ಒಡೆಯ' ಎಂದು ತೆಲಂಗಾಣ ರೈತ ಹೋರಾಟದ ಹಾದಿಯಲ್ಲಿ ಜನರು ಸಂಘಟಿತರಾಗಿ ಭೂಮಿಗಾಗಿ ಹೋರಾಡಿದ್ದಾರೆ. ಅದರ ಜೊತೆಗೆ ಜೈಲರ್ ನಿಮ್ಮ ಕೊನೆ ಆಸೆಯೇನು ನಡೆಸಿಕೊಡುತ್ತೇನೆ ಎಂದಾಗ ಪ್ರತಿಭಟನೆಕಾರರು ಹೇಳಿದು "ಸಾಮ್ರಾಜ್ಯಶಾಹಿ ನಾಶವಾಗೋದನ್ನ ನೋಡಿ ಸಾಯ್ಬೇಕೂಂತ ನಮ್ಮ ಆಸೆ."[೨೩] ಇಲ್ಲಿ ಊಳಿಗಮಾನ್ಯಶಾಹಿ ಭೂಮಾಲೀಕರು ಮತ್ತು ಬಂಡವಾಳಶಾಹಿ ವ್ಯವಸ್ಥೆಯ ಶೋಷಣೆಯ ವಿರುದ್ಧ ವರ್ಗಸಂಘರ್ಷವು ಶೋಷಕ ವರ್ಗವನ್ನು ನಾಶ ಮಾಡುವ ಉದ್ದೇಶವನ್ನು ಕಾಣುತ್ತೇವೆ. ಹೀಗೆ ದುಡಿಯುವ ಜನರು ಕಳೆದುಕೊಂಡಿರುವ ಭೂಮಿಯ ಹಕ್ಕು ಸಿಗಬೇಕು ಎನ್ನುವ ಆಲೋಚನೆ ಇದೆ. ಈ ಕಾರಣದಿಂದ ಭೂಮಾಲೀಕ ವರ್ಗ, ಬಂಡವಾಳಶಾಹಿ ವರ್ಗ ಆಳುವ ವರ್ಗವಾದರೆ, ರೈತರು, ಕೃಷಿಕಾರ್ಮಿಕರು,

ಪ್ರತಿಭಟನೆಕಾರರು ದುಡಿಯುವ ವರ್ಗವಾಗಿ ಈ ಆಳುವ ವರ್ಗದ ಶೋಷಣೆಯ ವಿರುದ್ಧ ಭೂಮಿಯ ಹಕ್ಕಿಗಾಗಿ ಪ್ರತಿಭಟಿಸುತ್ತದೆ.

ರಾವ್‌ಬಹದ್ದೂರ್ ಅವರ 'ಗ್ರಾಮಾಯಣ' ಕಾದಂಬರಿಯಲ್ಲಿ ಭೂಮಿಯ ಹಕ್ಕಿಗಾಗಿ ಆಳುವ ವರ್ಗದ ನಡುವೆ ನಡೆದಿರುವ ವರ್ಗ ವೈರುಧ್ಯತೆಯನ್ನು ಕಾಣಬಹುದು. ಪಾದಳ್ಳಿಯ ಕಲಹದಲ್ಲಿ ಮುಳುಗಿದ್ದು ಆಸ್ತಿಯ ಒಡೆತನಕ್ಕಾಗಿ ರಾಣೋಜಿರಾಯನ ಮರಣದ ನಂತರ ಇಬ್ಬರು ಹೆಂಡಂದಿರಲ್ಲಿ ಆಸ್ತಿಯ ಹಕ್ಕಿಗಾಗಿ ಸಂಘರ್ಷ ನಡೆಯುತ್ತಿದೆ. ರಾಣೋಜಿರಾಯ ತನ್ನ ಹಿರಿಯ ಹೆಂಡತಿ ಲಕ್ಷ್ಮೀಬಾಯಿಗೆ ಗಂಡುಮಕ್ಕಳು ಆಗಲಿಲ್ಲ ಎಂಬ ನೆವದಿಂದ ಲಕ್ಷ್ಮೀಬಾಯಿಯ ತೀವ್ರ ವಿರೋಧದ ನಡುವೆಯೂ ಪುತಳಾಬಾಯಿಯನ್ನು ಮದುವೆಯಾಗಿದ್ದು ಕಾಣಬಹುದು. ಇಲ್ಲಿ ತನ್ನ ಆಸ್ತಿಗೆ ಒಡೆಯರಾಗಬೇಕು ಎಂಬ ಹಂಬಲವೇ ಆತನನ್ನು ಎರಡನೇ ಮದುವೆಗೆ ಒತ್ತಾಯಿಸಿತ್ತು. ವಾಡೆ ಮತ್ತು ವಾಡೆಯ ಆಸ್ತಿ ಯಾರಿಗೆ ಸೇರಬೇಕು ಮತ್ತು ಯಾರಿಗೆ ಸೇರಬಾರದು ಎಂಬುದರ ವಿಭಿನ್ನ ಆಯಾಮಗಳ ನಿರೂಪಣೆಯೇ ಗ್ರಾಮಾಯಣವನ್ನು ರೂಪಿಸಿದಂತಿದೆ. ಇದರ ಒಡೆತನದ ಅಪೇಕ್ಷೆಯಲ್ಲಿ ಪಡದಯ್ಯ, ಜಾಗೀರದಾರರು, ಬಾಪೂಸಾಹೇಬ ಮೇಲಿಂದ ಮೇಲೆ ನಿರಂತರವಾಗಿ ಕ್ರಿಯಾಶೀಲರಾಗುತ್ತಾರೆ. ಆದರೆ ಈ ಭೂಮಿಯ ಹಕ್ಕಿನ ಕಲಹದಲ್ಲಿ ದುಡಿಯುವ ಶ್ರಮಜೀವಿಗಳು ಇದರ ಪರಿಣಾಮವನ್ನು ಅನುಭವಿಸುತ್ತಾರೆ.

ತೆಲಂಗಾಣ ಹೋರಾಟದ ದಟ್ಟ ಪ್ರಭಾವದ ಚಾರಿತ್ರಿಕ ಸಂದರ್ಭದಲ್ಲಿ ಗ್ರಾಮಾಯಣವು ರಚನೆಯಾದರೂ ಕೂಡ ರೈತಾಪಿ ಜನರ ಆಸ್ತಿ ಹಕ್ಕಿನ ಪ್ರತಿಪಾದನೆ ಮಾಡುವ ಆಯಾಮವನ್ನು ಅಥವಾ ಆ ಧೋರಣೆಯನ್ನು ಗ್ರಾಮಾಯಣ ಆಯ್ಕೆ ಮಾಡಿಕೊಳ್ಳುವುದಿಲ್ಲ. ಬದಲಿಗೆ ಜನತೆಯ ಆಸ್ತಿ ಹಕ್ಕಿನ ನಿರೂಪಣೆಯಿಂದ ಹೊರಗುಳಿಯಲು ಪ್ರಯತ್ನಿಸಿದೆ. ಭೂಹೀನರು ಮತ್ತು ರೈತಾಪಿಗಳು ಆಸ್ತಿ ಮತ್ತು ಅಧಿಕಾರವನ್ನು ಪಡೆಯುವುದರ ಬಗ್ಗೆ ಅಥವಾ ಅದೊಂದು ತಮ್ಮ ಹಕ್ಕು ಎಂದು ಅವರು ಜಾಗೃತಗೊಳ್ಳುವ ಬಗ್ಗೆ ಗ್ರಾಮಾಯಣಕ್ಕೆ ಆಸಕ್ತಿ ಇಲ್ಲ. ಮೇಲ್ವರ್ಗದವರು ದುಡಿಯುವ ಜನರ ಭೂಮಿಯನ್ನು ವಂಚಿಸಿ, ಶ್ರೀಮಂತ ವರ್ಗವಾಗಿ ಪರಿವರ್ತನೆ ಆಗಿದ್ದಾರೆ. ಆದರೆ ಆ ಭೂಮಿಯಲ್ಲಿ ದುಡಿಯುವ ಕೆಳವರ್ಗದ ಜನರು ಭೂಹೀನರಾಗಿ ಭೂಮಿಯಲ್ಲಿ ದುಡಿಯುವುದು ಮತ್ತು ವಾಡೆಯ ಆಡಳಿತದಲ್ಲಿ ಭಾಗಿಯಾಗುವುದನ್ನು ಕಾಣಬಹುದು. ಆದರೆ ಕಾದಂಬರಿಯು ಒಂದು ವರ್ಗದ ಭೂಮಿಯ ಒಡೆತನದ ಪ್ರಶ್ನೆ ಮುಂದಿಟ್ಟಿದೆ. ಆದರೆ ಭೂಮಿಯಿಂದ ವಂಚನೆಗೆ ಒಳಗಾದ ಶ್ರಮಜೀವಿ ವರ್ಗವನ್ನು ಎಲ್ಲಾ ಹಕ್ಕುಗಳಿಂದ ಹೊರಗಿಡುವ ಕಾರ್ಯವನ್ನು ಕಾದಂಬರಿಯ ಮೂಲಕ ಆಳುವ ವರ್ಗದ ಆಲೋಚನೆಯು ನಿರೂಪಣೆಯಾಗಿದೆ.

ಕುವೆಂಪು ಅವರ 'ಕಾನೂನು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಮೇಲ್ವರ್ಗದ ಜನರ ಜೀವನಕ್ರಮವನ್ನು ನಿರೂಪಿಸಿದೆ. ಈ ಕಾದಂಬರಿಯಲ್ಲಿ ಗೌಡನ ಪಾತ್ರವು ಭೂಮಾಲೀಕರನ್ನು ಪ್ರತಿನಿಧಿಸುತ್ತದೆ. ಅದೇ ಹೊತ್ತಿನಲ್ಲಿ ಬ್ರಾಹ್ಮಣರು, ಗೌಡರು(ಒಕ್ಕಲಿಗರು), ಮೇಲ್ಜಾತಿಯವರು, ಬ್ರಾಹ್ಮಣರು ಬೌದ್ಧಿಕವಾಗಿ ಕೆಳವರ್ಗದವರನ್ನು ಶೋಷಣೆ ಮಾಡಿದರೆ ಒಕ್ಕಲಿಗ(ಗೌಡ)ರು

ಕೆಳಜಾತಿಯವರ ಭೂಮಿಯನ್ನು ವಂಚಿಸಿ ಅವರನ್ನು ಕೃಷಿ ಕೂಲಿಗಳಾಗಿ ನಿರ್ಮಾಣ ಮಾಡಿದೆ. ಜಾತಿಯಲ್ಲಿ ಇವರಿಗಿಂತ ಕೀಳಾಗಿ ಚಿತ್ರಿಸಿರುವ ಬಿಲ್ಲವರು, ಹಸಲೇರರು, ಕುಂಬಾರರು, ಹಳೆಪೈಕದವರು, ಅಸ್ಪೃಶ್ಯರು(ದಲಿತರು) ಒಕ್ಕಲಿಗರ ಭೂಮಿಯಲ್ಲಿ ದುಡಿಯುವ ಶ್ರಮಜೀವಿಗಳು, ಇವರ ಶ್ರಮಮೌಲ್ಯ ಶೋಷಣೆಯನ್ನು ಮಾಡುವುದರ ಮೂಲಕ ಭೂಮಾಲೀಕರಾಗಿದ್ದಾರೆ. ಭೂಮಿಯ ಸಾಗುವಳಿ ಮಾಡಲು ಹೊರಟ ಹಳೆಪೈಕದ ಸೇಸನಾಯ್ಕರ ಮೇಲೆ ದ್ವೇಷ ಸಾಧಿಸುತ್ತಾರೆ. ಗೌಡರ ವಿರುದ್ಧ ದುಡಿಯುವ ವರ್ಗದವರು ಧ್ವನಿ ಮಾಡದ ಹಾಗೆ ಕಾದಂಬರಿಯು ನಿರೂಪಿಸಿದೆ. ಅದೇ ರೀತಿಯಾಗಿ ಈ ಭೂಮಾಲೀಕ ವರ್ಗದ ಇಚ್ಛೆಗೆ ವಿರೋಧವಾಗಿ ನಡೆದರೆ 'ಹೊನ್ನಾಳಿ ಹೋಡೆತ'ದ ಮೂಲಕ ದೌರ್ಜನ್ಯ ಮಾಡುವ ಅಂಶಗಳನ್ನು ಕಾದಂಬರಿಯ ಎತ್ತುತ್ತದೆ. ಆದರೆ ಭೂಹೀನರ ಪ್ರಶ್ನೆಯನ್ನು ಕಾದಂಬರಿಯು ಎಲ್ಲಿಯೂ ನಿರೂಪಿಸುವುದಿಲ್ಲ. ಭೂಮಿಯ ಒಡೆತನ, ಪಲ್ಲಟವಾಗದ ಹಾಗೆ ಸಾಮಾಜಿಕ ಪರಿಸರವನ್ನು ಆಳುವ ವರ್ಗ ಮಾಡಿಕೊಳ್ಳುತ್ತದೆ. ಅದು ಕಾದಂಬರಿಯಲ್ಲಿ ವಾಸ್ತವ ಸ್ಥಿತಿಯಲ್ಲಿ ತಂದಿದ್ದಾರೆ.

ಭೂಮಾಲೀಕನ ಮನೆ ಪಾಲಾದಾಗ ಮನೆಯ ವಸ್ತುಗಳನ್ನು ಪಾಲು ಮಾಡಿಕೊಳ್ಳುವಂತೆ ಜೀತಗಾರರನ್ನು ಪಾಲು ಮಾಡಿಕೊಳ್ಳುತ್ತಾರೆ. ತಿಮ್ಮಿ ಗುತ್ತಿಯೊಂದಿಗೆ ಓಡಿ ಹೋದ ನಂತರ ತಮ್ಮ ಗದ್ದೆಯಲ್ಲಿ ದುಡಿಯುವ ಒಂದು ಜೀತದಾಳು ಕಡಿಮೆಯಾದದ್ದಕ್ಕಾಗಿ ಕಲ್ಲೇಗೌಡ ಸಣ್ಣಬೀರನನ್ನು ಮರಕ್ಕೆ ಬಿಗಿಸಿ ಇಜಾರದ ಸಾಬಿಯಿಂದ ಹೊನ್ನಾಳಿ ಹೊಡೆತ ಹೊಡೆಸಿದ್ದು, ಭೂಸಂಬಂಧದ ಕಾರಣಕ್ಕಾದರೂ ಭೂಮಿಯ ಉತ್ಪಾದನಾ ಸಂಬಂಧಗಳನ್ನು ಗೌಣಗೊಳಿಸಿ, ಕೃಷಿಕೂಲಿಗಳನ್ನು ಅವರ ಜೀವನದ ಸಮಸ್ಯೆಗಳನ್ನು ಮುಂದಿಡದೆ, ಮೇಲ್ವರ್ಗದವರ ಕಣ್ಣಿಗೆ ಕಾಣುವ ಹಾಗೆ ದುಡಿಯುವ ಶ್ರಮಜೀವಿಗಳನ್ನು ನಿರೂಪಿಸುತ್ತಿದೆ. ಇದು ಆ ದುಡಿಯುವ ವರ್ಗವನ್ನು ಕಟ್ಟಿಕೊಡುವುದಕ್ಕಲ್ಲ, ಬದಲಿಗೆ ಆಳುವ ವರ್ಗದ ಮೌಲ್ಯಗಳ ಮರುಕಟ್ಟುವುದಕ್ಕಾಗಿದೆ. ಬ್ರಾಹ್ಮಣರು ಕೆಳಜಾತಿಗಳ ಶೋಷಕರಾಗಿ ಚಿತ್ರಿಸಿ, ಭೂಮಿ ಹೊಂದಿದ ಭೂಮಾಲೀಕ ವರ್ಗದ ಶೋಷಣೆಯನ್ನು ಗೌಣಗೊಳಿಸಿ, ದುಡಿಯುವ ವರ್ಗದ ಶೋಷಣೆಗೆ ಕಾರಣವಾದ ವರ್ಗವನ್ನು ಸಮಾಜೀಕರಿಸಿದೆ, ಆಳುವ ವರ್ಗದ ರಾಜಕೀಯ ಧೋರಣೆಗೆ ಕಾದಂಬರಿ ಸಿಲುಕಿದೆ. ಆದ್ದರಿಂದ ಈ ಕಾದಂಬರಿಗಳು ಉತ್ಪಾದನಾ ಸಂಬಂಧಗಳನ್ನು ವರ್ಗದ ನೆಲೆಯಲ್ಲಿ ಚಿತ್ರಿಸದೇ ಇರುವುದು ಈ ಕಾದಂಬರಿಯ ದೊಡ್ಡ ಮಿತಿಯೂ ಹೌದು. ಒಟ್ಟಾರೆ ಊಳಿಗಮಾನ್ಯ ಸಂಬಂಧಗಳು ಇಲ್ಲಿ ಆಳು–ಒಡೆಯ, ಶೋಷಿತ-ಶೋಷಕ ಸಂಬಂಧವಾಗಿ ದುಡಿಯುವ ವರ್ಗ ದುಡಿಸಿಕೊಳ್ಳುವ ವರ್ಗದ ಸಂಬಂಧವಾಗಿ ಗ್ರಹಿಸಬಹುದು. ಆದರೆ ಕಾದಂಬರಿಗಳಲ್ಲಿ ದುಡಿಯುವ ವರ್ಗವನ್ನು ಪ್ರಸ್ತಾಪಿಸುವ ಪಾತ್ರಗಳಲ್ಲಿ ಕೆಳವರ್ಗದ ಪಾತ್ರಗಳು ಹೆಚ್ಚಾಗಿ ಕಾಣಿಸುತ್ತವೆ.

ಚೆನ್ನಣ್ಣ ವಾಲೀಕಾರ ಅವರ 'ಒಂದು ಹೆಣ್ಣಿನ ಒಳಜಗತ್ತು' ಕಾದಂಬರಿಯಲ್ಲಿ ಭೂಮಾಲೀಕ ವರ್ಗ ಮತ್ತು ದುಡಿಯುವ ವರ್ಗದ ನಡುವಿನ ಉತ್ಪಾದನಾ ಸಂಬಂಧ ಇದೆ. ಭೂಮಾಲೀಕ ಸಂಗಣ್ಣಗೌಡ ದುಡಿಯುವ ಜನರ ಹಕ್ಕುಗಳನ್ನು ವಂಚಿಸಿ ಭೂಮಾಲೀಕನಾಗಿದ್ದಾನೆ. ಆದ್ದರಿಂದ

ಇವನನ್ನು ಆಳುವ ವರ್ಗದ ಪ್ರತಿನಿಧಿಯಾಗಿ ಕಾದಂಬರಿ ಗುರುತಿಸುತ್ತದೆ. "ಸರಕಾರ ಭೂ ಸ್ತ್ರೀಲಿಂಗ ತಂದ ಸಲುವಾಗಿ ಹೊಲಗಳು ಕೈಬಿಡಬಾರದೆಂದು ಹತ್ತಿಪ್ಪತ್ತು ವರುಷಗಳಿಂದ ತನ್ನಲ್ಲಿ ದುಡಿಯುತ್ತ ಬಂದಿದ್ದ ತಳವಾರ, ಮಲ್ಲ, ಬ್ಯಾಡರ ಎಂಕ, ಕುರುಬರ ಬೀರ, ಹೊಲೇರ ಶಿವ್ವ, ಕಟುಗರ ಖಾಜ್ಯಾರ ಹೆಸರಿನಲ್ಲಿ ಮಾಡಿ ಸರಕಾರಕ್ಕೆ ಹೋಗುವ ಹೊಲಗಳನ್ನು ಉಳಿಸಿಕೊಂಡಿದ್ದನು."[೨೯] ಇಲ್ಲಿ ಜೀತದ ಆಳುಗಳ ಹೆಸರಲ್ಲಿ ಖಾತೆ ಮಾಡಿಸಿಕೊಳ್ಳುತ್ತಾನೆ. ಆದರೆ ಭೂಮಿಯ ಒಡೆತನ ದುಡಿಯುವ ವರ್ಗಕ್ಕೆ ಕಾಗದದ ಮೇಲಿನ ಭೂಮಿಯ ಹಕ್ಕಾಗಿ ಕಾಣಿಸುತ್ತದೆ. ಅದು ಆ ದುಡಿಯುವ ಜನರಿಗೂ ಗೊತ್ತಿರಲಿಲ್ಲ. ಹೀಗೆ ಅಕ್ರಮವಾಗಿ ಭೂಮಿಯನ್ನು ವಂಚಿಸದ್ದಲ್ಲದೆ, ಖಾತೆಯ ಹೆಸರಲ್ಲಿ ದುಡಿಯುವ ಜನರನ್ನು ಮೋಸ ಮಾಡುವ ಶೋಷಕ ವರ್ಗವಾಗಿ ಕಾದಂಬರಿ ಗ್ರಹಿಸಿದೆ. ಇಲ್ಲಿ ಮಾಲೀಕ-ಆಳುಗಳ ಸಂಬಂಧವಿದೆ ಮತ್ತು ಶೋಷಕ-ಶೋಷಿತರ ಸಂಬಂಧವಿದೆ. ಭೂಮಾಲೀಕ-ಭೂಹೀನರ ಸಂಬಂಧವಿದೆ. ಇಲ್ಲಿ ಆಳುವ ವರ್ಗದ ಭೂಮಿಯ ಹಕ್ಕನ್ನು ಕೆಳವರ್ಗದವರೇ ವಂಚಿಸುವ ರಾಜಕೀಯ ಧೋರಣೆ ಇಲ್ಲಿದೆ. ಕುಂ.ವೀ. ಅವರ 'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಕಾದಂಬರಿಯಲ್ಲಿ ದಿಬ್ಬಗೌಡನ ಮನೆಯ ಜೀತದಾಳು ಇವನ್ನು ಗೇಣಿಗೆ ಗೌಡರ ಹೊಲವನ್ನು ಉಳುಮೆ ಮಾಡುತ್ತಿದ್ದ. ಆದರೆ ಲ್ಯಾಂಡ್ ಟ್ರಿಬ್ಯೂನಲ್ ಆಕ್ಟ್ ಬಂದಾಗ ದಿಬ್ಬ ತಾನು ಭೂ ಒಡೆಯನಾಗುವ ಕನಸು ಕಾಣುತ್ತಾನೆ. ಆದರೆ ಶ್ರಮಜೀವಿ ದಿಬ್ಬನಿಗೆ ಭೂಮಿಯ ಉಳುಮೆ ಮಾಡಲು ತನ್ನ ಸ್ವಂತ ಭೂಮಿ ಸಿಗುವುದಿಲ್ಲ. ಅವನ ಹಕ್ಕುಗಳನ್ನು ವಂಚಿಸಿರುವುದರಿಂದ ಭೂಮಾಲೀಕ ಶೋಷಕನಾಗಿದ್ದಾನೆ. ಇವನು ತನ್ನ ಅಸ್ತಿತ್ವಕ್ಕೆ ಕೆಳವರ್ಗದ ಜನರ ಹಕ್ಕುಗಳನ್ನು ವಂಚಿಸಿ ಅವರನ್ನು ಶೋಷಣೆಯಲ್ಲಿ ಇಡುವುದನ್ನು ಕಾದಂಬರಿ ನಿರೂಪಿಸುತ್ತದೆ.

ದೇವನೂರ ಮಹಾದೇವ ಅವರ 'ಒಡಲಾಳ' ಕಾದಂಬರಿಯಲ್ಲಿ ಸಾಕವ್ವನ ಕುಟುಂಬದ ಸಮಸ್ಯೆಯ ಮೂಲಕ ಸಮಾಜವನ್ನು ಪ್ರವೇಶಿಸಿದ ನಿರೂಪಣೆ ಇದೆ. ಸಾಕವ್ವನ ಆಸ್ತಿಯ ಪಾಲಿನ ಪ್ರಶ್ನೆ, ಹುಂಜವನ್ನು ಕಳೆದುಕೊಂಡಿರುವ ಸಾಕವ್ವನ ಸ್ಥಿತಿ ಮತ್ತು ಎತ್ತಪ್ಪನ ಕಡಲೆಕಾಯಿ ಆರೋಪ ಮತ್ತು ಪೊಲೀಸ್ ವ್ಯವಸ್ಥೆಯ ದೌರ್ಜನ್ಯ ಕಾದಂಬರಿಯ ಕ್ರಿಯಾಶೀಲತೆಗೆ ಕಾರಣವಾಗಿದೆ. ಸಾಕವ್ವನ ಕುಟುಂಬಕ್ಕೆ ನಾಲ್ಕು ಎಕರೆ ಭೂಮಿ ಇದೆ. ಆದರೆ ಆ ಭೂಮಿಯಲ್ಲಿ ಉತ್ಪಾದನಾ ಚಟುವಟಿಕೆ ನಡೆಯುತ್ತಿಲ್ಲ. ಇವರು ಕೂಲಿ ಮಾಡಿ ಜೀವನ ನಡೆಸಬೇಕು. ಗೌರಮ್ಮ, ಪುಟಗೌರಿಯು ಕೂಲಿ ಮಾಡಿದರೂ ಹಸಿವಿನ ಸಮಸ್ಯೆಯನ್ನು ಎದುರಿಸುತ್ತಾರೆ ಎಂದಾಗ ಮೇಲ್ವರ್ಗದ ಶೋಷಣೆ ಕಾಣಿಸುತ್ತದೆ. "ನಿಮ್ಗೆ ಉಣ್ಣಾಕ ಬಾನಿಂದ ಇಳ್ದು ಬಂದದಾ" ಅಂದನು, ಅದಕ್ಕೆ ತಂಗಿ ಗೌರಮ್ಮ 'ಕೆಲ್ಸಕೆ ಕರದ್ರಲಣ್ಣ ವೋಗದು'.[೩೦] ಕೂಲಿ ಕೊಡದೆ ವಂಚಿಸುವ ಆಳುವ ವರ್ಗದ ಚಿತ್ರಣ ಇದೆ. ಸಾಕವ್ವನ ಕುಟುಂಬದ ಮೇಲೆ ಭೂಮಾಲೀಕರು ಮತ್ತು ಪೊಲೀಸರು ಶೋಷಣೆ ಮಾಡುತ್ತಾರೆ. ಆದರೆ ಈ ವರ್ಗಶೋಷಣೆಯ ವಿರುದ್ಧ ಕಾದಂಬರಿ ಮಾತನಾಡುವುದಿಲ್ಲ. ಇಲ್ಲಿರುವುದು ಶೋಷಣೆಯನ್ನು ಒಪ್ಪಿಕೊಂಡು ಹೋಗುವ ಪಾತ್ರಗಳು. ಆದರೆ ಆಳುವ ವರ್ಗದ

ಶೋಷಣೆಯ ವಿರುದ್ಧ ದುಡಿಯುವ ಜನರ ಸಂಘಟಿತರಾಗುವ ಸೂಚನೆ ಗುರುಸಿದ್ದುವಿನ ಮೂಲಕ ತಿಳಿಯುತ್ತದೆ.

'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಮೇಲ್ಜಾತಿ ಭೂಮಿಯ ಒಡೆತನ ಹೊಂದಿದೆ. ಪಾಟೀಲರು, ಒಣಮುಕಳ್ಯಾರು, ಕೆಳಜಾತಿಯಾದ ಹೊಲೆಯ ಸಮುದಾಯವನ್ನು ವಂಚಿಸಿ, ಅವರ ಭೂಮಿಯ ಹಕ್ಕಿಗೆ ಒಡೆಯರಾಗಿದ್ದಾರೆ. ಈ ಭೂಮಿಯಲ್ಲಿ ಹೊಲೆಮಾದಿಗರು, ಸಮಗಾರರು ದುಡಿಯುತ್ತಾರೆ. ಇದರಿಂದ ಮೇಲ್ಜಾತಿಯ ಜನರ ಅಧೀನದಲ್ಲಿ ಬದುಕುವ ದುಡಿಯುವ ವರ್ಗವು ಎಚ್ಚರಗೊಂಡು ಶೋಷಣೆಯ ವಿರುದ್ಧ ಸಂಘರ್ಷಕ್ಕೆ ಇಳಿದಿದೆ. ಮಾದೇವ ಶಿಕ್ಷಣ ಪಡೆದು ಭೂಮಿಯ ಹಕ್ಕಿಗಾಗಿ ಹೋರಾಡುತ್ತಾನೆ. ಪಾಟೀಲರ ಐವತ್ತು ಎಕರೆ ಭೂಮಿಯನ್ನು ಬಡವರಿಗೆ ಹಂಚಲಿ ಎಂದು ಪ್ರಶ್ನಿಸುತ್ತಾನೆ. ಅಂಬೇಡ್ಕರ್ ಅವರ ಆಲೋಚನೆ ಪ್ರಭಾವದಿಂದ ಶೋಷಕ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವ ಮಾದೇವ ತಾನು ಹೊಲೆಯನಲ್ಲ ಎಂದಾಗ ಆಳುವ ವರ್ಗ ಜಾತಿಯಲ್ಲಿ ಗುರುತಿಸುವ ಪ್ರಯತ್ನ ಮಾಡಿ ನಂತರ ಮೂಲಸಂಸ್ಕೃತಿಗೆ ಮರಳುತ್ತಾನೆ ಮತ್ತೆ ಈ ಶೋಷಕ ವ್ಯವಸ್ಥೆಯ ಶೋಷಣೆ ವಿರುದ್ಧ ವರ್ಗ ಹೋರಾಟಕ್ಕೆ ಕಾದಂಬರಿಯು ಕರೆ ಕೊಡುತ್ತದೆ.

ಒಟ್ಟಾರೆಯಾಗಿ ಕನ್ನಡ ಕಾದಂಬರಿಗಳಲ್ಲಿ ಭೂಮಿಯ ಪ್ರಶ್ನೆಯನ್ನು ಕುರಿತು ದುಡಿಯುವ ವರ್ಗದ ಪ್ರಜ್ಞೆಯ ಭಾಗವಾಗಿ ನಿರೂಪಣೆಗೊಂಡಿರುವುದು 'ಚಿರಸ್ಮರಣೆ' ಮತ್ತು 'ಚೋಮನ ದುಡಿ' ಕಾದಂಬರಿಗಳು. ಉಳಿದಂತೆ ಇತರೆ ಕಾದಂಬರಿಗಳು ದಲಿತರ ಭೂಮಿಯ ಹಕ್ಕಿನ ಬಗೆಗೆ ಪ್ರಸ್ತಾಪ ಮಾಡುವುದಿಲ್ಲ. ಅವರ ಭೂಮಿಯ ಹಕ್ಕನ್ನು ವಂಚಿಸಲು ಭೂಮಾಲೀಕ ವರ್ಗವು ಇವರನ್ನು ಜೀತದ ಆಳುಗಳಾಗಿ ಇಟ್ಟುಕೊಂಡು ಅವರ ಶ್ರಮಶೋಷಣೆ ಮಾಡಿ ವರ್ಗ ಅಸಮಾನತೆಯನ್ನು ಮುಂದುವರೆಸಿಕೊಂಡು ಹೋಗುವ ಊಳಿಗಮಾನ್ಯಶಾಹಿ ರಾಜಕೀಯ ಧೋರಣೆ ಇದೆ. ಇಲ್ಲಿ ಬರುವ ದುಡಿಯುವ ವರ್ಗದ ಪಾತ್ರಗಳು ಭೂಮಿಯ ಹಕ್ಕಿಗಾಗಿ ಪ್ರತಿಭಟಿಸುವುದಿಲ್ಲ. ಮೇಲ್ವರ್ಗದ ಪ್ರಜ್ಞೆಯ ಭಾಗವಾಗಿ ಕೆಳವರ್ಗದ ಪಾತ್ರಗಳನ್ನು ತಂದಿರುವುದನ್ನು ಗುರುತಿಸಬಹುದು.

### ೨.೩.೨. ಜಾತಿಯ ಅಸಮಾನತೆಯ ನೆಲೆ

ಸಮಾಜವನ್ನು ಬಾಧಿಸುತ್ತಿರುವ ಸಮಸ್ಯೆಗಳಲ್ಲಿ ವರ್ಗಶೋಷಣೆ ಮತ್ತು ಜಾತಿಶೋಷಣೆ ಪ್ರಮುಖವಾಗಿವೆ. ಸಂಪತ್ತಿನ ಅಸಮಾನತೆ ಮತ್ತು ಶೋಷಣೆಯನ್ನು ಮುಂದುವರಿಸಲು ಹುಟ್ಟಿಕೊಂಡ ಜಾತಿ ಅಸಮಾನತೆಯು ಒಂದು ಗಂಭೀರ ಸಮಸ್ಯೆಯಾಗಿದೆ. ಊಳಿಗಮಾನ್ಯಶಾಹಿ ಸಮಾಜದಿಂದ ಇಂದಿನ ನವವಸಾಹತುಶಾಹಿ ವ್ಯವಸ್ಥೆಯವರೆಗೆ ಈ ಜಾತಿ ಅಸಮಾನತೆ ಮುಂದುವರೆದಿದೆ. ಇದರ ವಸ್ತುಸ್ಥಿತಿಯನ್ನು ಕುರಿತು ಇದುವರೆಗೆ ಸಾಕಷ್ಟು ಚರ್ಚೆಗಳು ನಡೆದಿವೆ, ನಡೆಯುತ್ತಲೇ ಇವೆ. ಸಮಾಜದ ಅಸಮಾನತೆಗೆ ಕಾರಣವಾದ ಆಳುವ ವರ್ಗವು ಜಾತಿಯ ಅಸಮಾನತೆ,

ಜಾತಿದೌರ್ಜನ್ಯ, ಜಾತಿಸಂಘರ್ಷವನ್ನು ಬೆಳೆಸುತ್ತಿರುವುದು ಸಂಪತ್ತಿನ ಒಡೆತನಕ್ಕಾಗಿ. ಆದರೆ ಸಮಾಜದ ಸಾಮಾಜಿಕ ಸಂಬಂಧಗಳು ಆರ್ಥಿಕ ಅಜೆಂಡವನ್ನು ಮೀರಿ, ಘನತೆ, ಗೌರವಕ್ಕಾಗಿ ಜಾತಿಶೋಷಣೆಗೆ ಮುಂದಾಗಿದ್ದಾರೆ. ಹಾಗೆಯೇ ಭೂಮಿಯ ಒಡೆತನ ಪಲ್ಲಟವಾಗದ ಹಾಗೆ ತಡೆಯುತ್ತಿರುತ್ತದೆ. ಅದೇ ರೀತಿ ಜಾತಿಯ ಪ್ರಶ್ನೆ ಅನ್ನೋದು ಕೇವಲ ಶ್ರೇಷ್ಠ-ಕನಿಷ್ಠದ ಗ್ರಹಿಕೆಯಾಗಿ ಉಳಿಯದೆ, ಅದು ಸಾಮಾಜಿಕವಾಗಿ, ರಾಜಕೀಯವಾಗಿ ವ್ಯವಸ್ಥೆಯನ್ನು ನಿಯಂತ್ರಿಸುವ ಶಕ್ತಿಯಾಗಿದೆ. ಸಾಮಾಜಿಕ ಶಕ್ತಿಗಳಾದ ಮೇಲ್ವರ್ಗ, ಮೇಲ್ಜಾತಿಗಳು ಜಾತಿ ತಾರತಮ್ಯವನ್ನು ಸೃಷ್ಟಿಸುತ್ತಿರುತ್ತವೆ. ಅಷ್ಟೇ ಅಲ್ಲ, ಇಂದು ಜಾತಿಯ ಶೋಷಣೆ ಬೇರೆ ಬೇರೆ ರೂಪಗಳಲ್ಲಿ ಕಾರ್ಯ ಪ್ರವೃತ್ತವಾಗಿದೆ. ರಾಜಕಾರಣ, ಪ್ರಭುತ್ವ, ಮಾಧ್ಯಮ, ಸಾರ್ವಜನಿಕ ಜೀವನ, ಸಾಂಸ್ಕೃತಿಕ ಹಾಗೂ ವೈಚಾರಿಕ ವಲಯಗಳನ್ನು ವ್ಯಾಪಿಸಿಕೊಂಡಿದೆ. ಹೀಗೆ ಇದರ ವ್ಯಾಪ್ತಿಯನ್ನು ಗುರುತಿಸಬಹುದು.

ವರ್ಗ ಅಸಮಾನತೆ, ವರ್ಗ ಶೋಷಣೆಗಳನ್ನು ಮುಚ್ಚಿಡಲು ಜಾತಿಯನ್ನು ಕುರಿತು ಇದು ಒಂದು ವ್ಯವಸ್ಥೆ, ಇದು ಒಂದು ಪದ್ಧತಿ, ಇದು ಒಂದು ಶ್ರೇಣೀಕರಣ ಎಂದು ಆಳುವ ವರ್ಗ ಜಾತಿಯ ಶೋಷಣೆಯನ್ನು ಸಮಾಜೀಕರಿಸಿದೆ. ಇದರ ಪರಿಣಾಮ ಒಂದು ಜಾತಿ ಮೇಲು, ಮತ್ತೊಂದು ಜಾತಿ ಕೀಳು ಎಂಬ ಭಾವನೆಯನ್ನು ಊಳಿಗಮಾನ್ಯ ಸಮಾಜ ಬೆಳೆಸಿಕೊಂಡು ಬಂದಿದೆ. ಬಲಿಷ್ಠ ವರ್ಗವು ಶ್ರಮವಿಭಜನೆ ಮಾಡಿ ಶೋಷಣೆ ಮಾಡುವುದರ ಜೊತೆಗೆ ವೃತ್ತಿ ಮತ್ತು ಜಾತಿ ಸಮುದಾಯವನ್ನು ವರ್ಗ ಅಸಮಾನತೆಯ ನೆಲೆಯಲ್ಲಿ ಚಿತ್ರಿಸಿತ್ತು. ಮಡಕೆ ಮಾಡುವವರು ಕುಂಬಾರರು, ಮರಗೆಲಸ ಮಾಡುವವರು ಬಡಗಿಗಳು, ಚಿನ್ನ ಬೆಳ್ಳಿಯ ಕೆಲಸ ಮಾಡುವವರು ಅಕ್ಕಸಾಲಿಗರು, ಚರ್ಮದ ಕೆಲಸ ಮಾಡುವವರು ಚಮ್ಮಾರರು. ಹೀಗೆ ವೃತ್ತಿಯ ಆಧಾರದ ಮೇಲೆ ಜಾತಿಯನ್ನು ಬೆಳೆಸಿದ್ದು ಊಳಿಗಮಾನ್ಯಶಾಹಿ ಸಮಾಜದಲ್ಲಿ. ವರ್ಗಶೋಷಣೆಯನ್ನು ಮುಚ್ಚಿಡಲು ಮತ್ತು ದುಡಿಮೆಗಾರರ ಶ್ರಮಮೌಲ್ಯ ಶೋಷಣೆಯನ್ನು ಮುಂದುವರೆಸಲು ಈ ಜಾತಿ ಅಸಮಾನತೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಜಾತಿ ಅಸಮಾನತೆಯ ಕಾರಣಕ್ಕಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ದಿನನಿತ್ಯ ಜಾತಿ ತಾರತಮ್ಯಗಳು, ಜಾತಿದೌರ್ಜನ್ಯಗಳು, ಜಾತಿ ಸಂಘರ್ಷಗಳು ನಡೆಯುತ್ತಿವೆ. ಕೆಳಜಾತಿ ಮತ್ತು ಅಸ್ಪೃಶ್ಯ ಜಾತಿಗಳಿಗೆ ಮಧ್ಯಮ ಜಾತಿಗಳು ಹಾಗೂ ಮೇಲ್ಜಾತಿಗಳು ಮರ್ಯಾದೆ ಮತ್ತು ಗೌರವ ಕೊಡುವುದಿಲ್ಲ. ಹೆಚ್ಚೆಂದರೆ ಮೇಲ್ಜಾತಿಗಳಿಗೆ ಮಧ್ಯಮ ಜಾತಿಗಳು ಮತ್ತು ಮೇಲ್ಜಾತಿ ಹಾಗೂ ಮಧ್ಯಮ ಜಾತಿಗಳಿಗೆ ಕೆಳಜಾತಿ ಮತ್ತು ಅಸ್ಪೃಶ್ಯ ಸಮುದಾಯಗಳು ಅಧೀನವಾಗಿ ಇರಬೇಕಷ್ಟೆ. ಆದರೆ ಇದಕ್ಕೆ ವಿರುದ್ಧವಾಗಿ ಎಲ್ಲಾ ಕೆಳಜಾತಿಗಳು ಹಾಗೂ ಅಸ್ಪೃಶ್ಯ ಜಾತಿಗಳು ಮಧ್ಯಮ ಜಾತಿಗಳಿಗೆ ಮತ್ತು ಮೇಲ್ಜಾತಿಗಳಿಗೆ ಮರ್ಯಾದೆ ಕೊಡಬೇಕು ಹಾಗೂ ಗೌರವ ಕೊಡಬೇಕು. ಇವತ್ತಿಗೂ ಕೂಡ ಎಲ್ಲಾ ಕೆಳಜಾತಿ ಹಾಗೂ ಅಸ್ಪೃಶ್ಯ ಜಾತಿಯವರನ್ನು ಮಧ್ಯಮ ಮತ್ತು ಮೇಲ್ಜಾತಿಯವರು ಏಕವಚನದಲ್ಲಿ ಕರೆಯುತ್ತಾರೆ. ಇದಕ್ಕೆ ವಿರುದ್ಧವಾಗಿ ಎಲ್ಲಾ ಮೇಲ್ಜಾತಿ ಹಾಗೂ ಮಧ್ಯಮ ಜಾತಿಯವರನ್ನು ಕೆಳಜಾತಿ ಮತ್ತು ಅಸ್ಪೃಶ್ಯರು ಬಹುವಚನದಲ್ಲಿ ಕರೆಯುತ್ತಾರೆ.[೨೬] ಹೀಗೆ

ಒಂದು ಜಾತಿಗೆ ಗೌರವವಾದರೆ ಮತ್ತೊಂದು ಜಾತಿಗೆ ಅಪಮಾನವಾಗುತ್ತದೆ. ಇದು ಸಾಮಾಜಿಕ ವಾಸ್ತವವೆಂದು, ಹಕ್ಕೆಂದು ಪ್ರತಿಪಾದಿಸುತ್ತಿದ್ದಾರೆ. ಈ ಭಾವನೆಗಳನ್ನು ಆಳುವ ವರ್ಗವು ಸಮಾಜೀಕರಿಸುತ್ತಿದೆ. ಜಾತಿಯಲ್ಲಿ ಕೀಳಾಗಿ ಪರಿಗಣಿಸಿರುವ ಆರ್ಥಿಕವಾಗಿ ಸಬಲರಾದರೂ ಅವರನ್ನು ಈ ಜಾತಿಯ ಅಣೆಪಟ್ಟಿ ಕಟ್ಟುವ ಮೂಲಕ ಜಾತೀಯತೆ ಮಾಡುವುದನ್ನು ಕಾಣಬಹುದು. ಮದುವೆ ಹಬ್ಬ, ಆಚರಣೆಗಳ ಮೂಲಕ ಜಾತಿಯ ಅಸಮಾನತೆಯನ್ನು ಕಾಪಾಡಿಕೊಳ್ಳುವುದು ಆಳುವ ವರ್ಗದ ಹಿತಾಸಕ್ತಿಯಾಗಿದೆ. ಧಾರ್ಮಿಕ ಆಚರಣೆ, ನಂಬಿಕೆಗಳ ಮೂಲಕ ಜಾತಿಯನ್ನು ಎಲ್ಲಾ ವರ್ಗಗಳು ಸಮರ್ಥಿಸಿಕೊಳ್ಳುತ್ತಿವೆ.

ಮೇಲ್ಜಾತಿಯ ಜನರು ಕೆಳಜಾತಿಯ ಜನರನ್ನು ಶೋಷಣೆ ಮಾಡಲು ಊಳಿಗಮಾನ್ಯಶಾಹಿ ಜಾತಿ ಚೌಕಟ್ಟಿನಲ್ಲಿ ಭಾಗವಾಗಿ ಜಾತಿಯನ್ನು ಗಟ್ಟಿಗೊಳಿಸಿ, ಜಾತಿ, ವರ್ಗ, ತಾರತಮ್ಯಗಳನ್ನು ಬೆಳೆಸುವ ಆಳುವ ಚಿಂತನೆ ವಿರುದ್ಧ ವೈಚಾರಿಕ ಸಾಹಿತ್ಯ ಪ್ರತಿಭಟಿಸಿದೆ. ಜಾತಿಯಲ್ಲಿ 'ಕೀಳು' ಎಂಬ ಅಣೆಪಟ್ಟಿ ಕಟ್ಟಿ ಅವರನ್ನೇ ಅಪಮಾನಗೊಳಿಸಿ ಅವರ ಹಕ್ಕುಗಳನ್ನು ಶೋಷಣೆ ಮಾಡುವ ತಂತ್ರಗಾರಿಕೆಯನ್ನು ಪ್ರಭುತ್ವ ಹೊಂದಿದೆ. ಹೀಗೆ ಜಾತಿ ಕಾರಣಕ್ಕಾಗಿ ಶೋಷಣೆಗೆ ಒಳಗಾದ ವರ್ಗವು ತನ್ನದಲ್ಲದ ಭೂಮಿಯಲ್ಲಿ ದುಡಿದು ಜೀವನ ಸಾಗಿಸುವ ಚಿತ್ರಣವನ್ನು ಅನೇಕ ಕಾದಂಬರಿಗಳು ವಸ್ತುವಾಗಿ ಸ್ವೀಕರಿಸಿ ಅಭಿವ್ಯಕ್ತಿಸಿವೆ.

ಶಿವರಾಮ ಕಾರಂತರ 'ಚೋಮನ ದುಡಿ' ಮತ್ತು 'ಕುಡಿಯರ ಕೂಸು' ಕಾದಂಬರಿಗಳಲ್ಲಿ ಭೂಮಿಯ ಒಡೆತನದಿಂದ ವಂಚಿತವಾಗಿರುವುದು ಜಾತಿಯಲ್ಲಿ ಕೀಳಾದ ಕಾರಣದಿಂದ. ಚೋಮ ಕೆಳಜಾತಿಯವನು. ಆ ಕಾರಣದಿಂದ ಗೇಣಿಗಾಗಿ ಭೂಮಿಯನ್ನು ಮೇಲ್ಜಾತಿಯವರು ಕೊಡಲಿಲ್ಲ. ಇಲ್ಲಿ ಭೂಮಿಯ ಹಕ್ಕು ಕೆಳಜಾತಿಯವರಿಗೆ ಪಲ್ಲಟವಾಗುವುದನ್ನು ಆಳುವ ವರ್ಗ ಸಹಿಸುವುದಿಲ್ಲ. ಆ ಕಾರಣದಿಂದ ಚೋಮನ ಮೂಲಕ ಗೇಣಿಗಾಗಿ ಭೂಮಿಯನ್ನು ಕೇಳಿಸುತ್ತದೆ. ಕೆಳಜಾತಿಯವನು ಎಂದು ಹೇಳಿ ಅವನ ಶ್ರಮಶೋಷಣೆ ಮಾಡುತ್ತದೆ. ಅವನ ಮಕ್ಕಳ ಮೇಲೆ ಮೇಲ್ಜಾತಿಯವರು ದೌರ್ಜನ್ಯ ಮಾಡಿದ್ದು ಜಾತಿಯಲ್ಲಿ ಕೀಳಾಗಿ ನೋಡಿರುವುದರಿಂದ. ಚೋಮನ ಮೂಲಕ ಗೇಣಿಗಾಗಿ ಭೂಮಿಯನ್ನು ಕೇಳಿಸುತ್ತದೆ ಮತ್ತು ಅದನ್ನು ನಿರಾಕರಿಸುವುದು ಈ ಆಳುವ ವರ್ಗವೇ ಆಗಿದೆ. ಈ ರೀತಿಯಲ್ಲಿ ಮಾಡಲು ಪ್ರಧಾನವಾದ ಕಾರಣ ಯಾವುದೆಂದರೆ ಹೀಗಾಗಲೇ ಭೂಮಿಯ ಹಕ್ಕನ್ನು ತಮ್ಮ ಹಕ್ಕಾಗಿ ಸ್ವೀಕರಿಸಿಕೊಂಡಿರುವ ಆಳುವ ವರ್ಗದ ಪ್ರಜ್ಞೆಯು ಕೆಳಜಾತಿ, ಕೆಳವರ್ಗದವರನ್ನು ಎಲ್ಲಾ ಹಕ್ಕಿನಿಂದ ವಂಚಿಸಿರುವ, ಶೋಷಣೆಯ ತಂತ್ರವನ್ನು ಮುಂದುವರಿಸಿಕೊಂಡು ಹೋಗುವ ಆಳುವ ವರ್ಗ ರಾಜಕೀಯ ಧೋರಣೆ ಚೋಮನ ಪ್ರಜ್ಞೆಯ ಭಾಗವಾಗಿದೆ.

'ಕುಡಿಯರ ಕೂಸು' ಕಾದಂಬರಿಯಲ್ಲಿ ಕುಡಿಯ ಸಮುದಾಯ ಸಾಮೂಹಿಕ ಭೂಮಿಯ ಒಡೆತನದ ಹಕ್ಕನ್ನು ಹೊಂದಿತ್ತು. ಆದರೆ ಆಧುನಿಕತೆಯ ಪ್ರವೇಶದಿಂದ ಮೇಲ್ಜಾತಿಯ

ಭೂಮಾಲೀಕರು ತಮ್ಮ ಅಕ್ರಮ ಭೂಮಿಯನ್ನು ಕಾಡಿಗೆಲ್ಲ ವಿಸ್ತರಿಸಿದರು. ಇದರಿಂದ ಕುಡಿಯ ಸಮುದಾಯ ತಮ್ಮ ಹಕ್ಕುಗಳನ್ನು ಕಳೆದುಕೊಂಡು ಭೂಮಾಲೀಕರ ಭೂಮಿಯಲ್ಲಿ ಜೀತದ ಆಳುಗಳಾಗಿ ದುಡಿಯುವಂತಹ ಸ್ಥಿತಿಯನ್ನು ಕಾಣಬಹುದು. ಈ ಕೃಷಿ ಕಾರ್ಮಿಕರು ಏಲಕ್ಕಿ ತೋಟದಲ್ಲಿ ದುಡಿಯುವರು. ಆದರೆ ಇವರ ದುಡಿಮೆಗೆ ಸರಿಯಾದ ಪ್ರತಿಫಲ ಇಲ್ಲ. ಇವರು ದುಡಿದ ಶ್ರಮದಿಂದ ಈ ಶ್ರೀಮಂತ ವರ್ಗ ಅಸ್ತಿತ್ವದಲ್ಲಿ ಇದೆ. ಆದರೆ ಕುಡಿಯರ ಭೂಮಿಯ ಹಕ್ಕಿನ ಪ್ರಶ್ನೆಯು ಕಾದಂಬರಿಗೆ ಅಗತ್ಯವಾಗಿ ಕಂಡಿಲ್ಲ. ಮೇಲ್ವರ್ಗದ ಶೋಷಣೆ ಒಳಗಾದರೂ ಅವರ ಹಕ್ಕುಗಳನ್ನು ಕಿತ್ತುಕೊಂಡರೂ ಈ ವರ್ಗ ಶೋಷಣೆಯನ್ನು ಒಪ್ಪಿಕೊಂಡು ಬದುಕುತ್ತದೆ. ತಿರುಮಲ ಭಟ್ಟ, ಬಲ್ಲಾಳರು ನಡೆಸಿದ ಶೋಷಣೆ, ಹಲ್ಲೆಗಳನ್ನು ಕುಡಿಯರ ಸಮುದಾಯ ಮುಖ್ಯ ಸಮಸ್ಯೆಯೆಂದು ಕಾಣುವುದಿಲ್ಲ. ಆದರೆ ಕುಲದ ಪ್ರಶ್ನೆ ಬಂದಾಗ ಭೂಮಾಲೀಕರ ವಿರುದ್ಧ ಪ್ರತಿಭಟಿಸುತ್ತಾರೆ. ಹೀಗೆ ಮುಖ್ಯವಾದ ಸಮಸ್ಯೆಗಳನ್ನು ಕಾದಂಬರಿ ಗೌಣಗೊಳಿಸಿ ಆಧುನಿಕತೆಯು ಕುಡಿಯರ ಮೇಲಿನ ಶೋಷಣೆಗೆ ಕಾರಣವಾಗಿದೆ ಎನ್ನುವುದರ ಮೂಲಕ ಊಳಿಗಮಾನ್ಯಶಾಹಿ ಜಾತಿಸಮಸ್ಯೆಯು ಇವರ ಹಕ್ಕುಗಳನ್ನು ಕಳೆದುಕೊಳ್ಳಲು ಕಾರಣವಾಗಿದೆ. ಜಾತಿಯ ಪ್ರಶ್ನೆಯನ್ನು ಮುಂದೆ ಮಾಡಿ ವರ್ಗ ಅಸಮಾನತೆ, ಸಂಪತ್ತಿನ ಅಸಮಾನತೆ, ಶೋಷಣೆಯನ್ನು ಕಾದಂಬರಿ ಯಾಂತ್ರಿಕವಾಗಿ ಗ್ರಹಿಸಿದೆ. ಒಟ್ಟಾರೆ ಆಳುವ ವರ್ಗದ ಹಿತಾಸಕ್ತಿಗೆ ಅನುಗುಣವಾಗಿ ಕುಡಿಯರ ಪಾತ್ರಗಳು ಮಾತನಾಡುವುದು ದುರಂತವಾಗಿ ಕಾಣುತ್ತದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ದಲಿತರನ್ನು ನಿರ್ದಿಷ್ಟ ಜಾತಿಯ ಮೂಲಕ ಗುರುತಿಸುತ್ತಿದ್ದಾರೆ. ಹೊಲೆಯ, ಮಾದಿಗ, ಹಸಲರು ಹೀಗೆ ಜಾತಿಯ ಹೆಸರಿನಲ್ಲಿ ವಿವರಣೆ ಇದೆ. ಈ ಕಾದಂಬರಿಯಲ್ಲಿ ವರ್ಗದ ಶೋಷಣೆಯನ್ನು ಗುರುತಿಸುವಾಗ ಜಾತಿಯ ಸಮಸ್ಯೆ ಮೂಲಕ ಗುರುತಿಸಬೇಕು. ಮಾದಿಗ, ಹೊಲೆಯ ಭೂಮಿಯ ಹಕ್ಕುಗಳನ್ನು ಕಳೆದುಕೊಂಡು, ಭೂಮಾಲೀಕರ ಮನೆಯಲ್ಲಿ ದುಡಿಯುವ ಉತ್ಪಾದಕ ವರ್ಗವಾಗಿದೆ. ಈ ಕೆಳಜಾತಿಗಳನ್ನು ಭೂಹೀನರಾಗಿ ನಿರ್ಮಾಣ ಮಾಡಿರುವ ಆಳುವ ವರ್ಗವು ಜಾತಿಯಲ್ಲಿ ನಾವು ಶ್ರೇಷ್ಠ ಕೆಳಜಾತಿಯವರು ಕನಿಷ್ಠ ಎನ್ನುವ ಧೋರಣೆ ಕಾದಂಬರಿಯಲ್ಲಿದೆ. ಹೊಲೆಯನಾದ ನಾಯಿಗುತ್ತಿ ಹಳೆಪೈಕದ ಸೇಸನಾಯ್ಕನ ಮನೆಗೆ ಹೋದಾಗ ಸೇಸನಾಯ್ಕ ತನ್ನ ಹಿತ್ತಲಿನ ಕೊಟ್ಟಿಗೆಯಲ್ಲಿ ಬಾಳೆಯೆಲೆಯಲ್ಲಿ ಗುತ್ತಿಗೆ ಊಟ ಬಡಿಸುತ್ತಾನೆ. ಗುತ್ತಿ ಒಮ್ಮೆ ಐತನ ಗುಡಿಸಲಿನಲ್ಲಿ ಮಲಗಬೇಕಾಗಿ ಬಂದಾಗ ಪೀಂಚಲು ತನ್ನ ಗಂಡನಿಗೆ ಹೇಳಿದ 'ಇವತ್ತೊಂದು ದಿವಸ ಗುತ್ತಿಯ ಸಮೀಪದಲ್ಲಿ ದೂರ ಮಲಗಿದರಾಯ್ತು' ಎನ್ನುತ್ತಾಳೆ. ಅದಕ್ಕೆ ಐತ ಥೂ ಥೂ ಥೂ! ನಾನು ಒಲ್ಲೆ, ಹೊಲೆಯ ಬಳಿ ಮಲಗುವುದೆ[೨೩] ಎಂದು ಅಸಹ್ಯಪಡುತ್ತಾನೆ. ಚಿನ್ನಮ್ಮನ ಮದುವೆಯ ಊಟದಲ್ಲಿ ಹಸಲರು ಬಿಲ್ಲೋರ ಪಂಕ್ತಿಯಲ್ಲಿ ಕುಳಿತದ್ದನ್ನು ಕಂಡು ಒಬ್ಬ "ಹಸಲೋರು ಅಲ್ಲಿ ಕೂರಬೇಕು ಇಲ್ಲಲ್ಲಾ!" ಎಂದ. ಹಸಲರ ಚೇಂಗ್ರ "ಹಸಲೋರೇನು ಬಿಲ್ಲೋರಿಗಿಂತ ಕೀಳಲ್ಲ ಜಾತೀಲಿ, ನೀನೆ ಬೇಕಾದರೆ ಎದ್ದು ಹೋಗು"[೨೪] ಎಂದು ಪ್ರತಿಭಟಿಸುತ್ತಾನೆ. ಹೀಗೆ ದಲಿತವರ್ಗವನ್ನು

ಜಾತಿ, ಉಪಜಾತಿಯನ್ನು ವಿಭಾಗಿಸಿ ನಿರೂಪಿಸುವ ಮಾದರಿಯ ಹಿಂದೆ ಜಾತಿಯ ಅಸಮಾನತೆಯ ಬೇರುಗಳನ್ನು ಗಟ್ಟಿ ಮಾಡುವುದೇ ಆಗಿದೆ. ನಾಯಿಗುತ್ತಿ ಪೊಲೀಸರಿಂದ ತಪ್ಪಿಸಿಕೊಂಡು ಹೋಗುತ್ತಿರುವಾಗ ತನ್ನ ಸ್ಥಿತಿಯನ್ನು ಕುರಿತು ಯೋಚಿಸುತ್ತಾ ತಾನು ಹೊಲೆಯರವನಲ್ಲದೆ ಬೇರೆ ಜಾತಿಗೆ ಸೇರಿದವನಾಗಿದ್ದರೆ ಹೀಗಾಗುತ್ತಿತ್ತೆ ಎಂದು ಯೋಚಿಸುತ್ತಾನೆ. ಕಡೇ ಪಕ್ಷ ತಾನು ಕಿಲಸ್ತರವನೋ ಸಾಬರ ಜಾತಿಯವನೋ ಆಗಿದ್ದರೂ ತನಗೆ ಈ ಗತಿ ಬರುತ್ತಿರಲಿಲ್ಲ ಎಂದು ಕೊರಗುವುದು ಜಾತಿ ಶೋಷಣೆಯ ಸಂಕೇತವಾಗಿದೆ. ಮುಂದುವರೆದು ಥೂ ಥೂ ಥೂ ಎಂದು ತನ್ನ ತಲೆಯಲ್ಲಿ ಸುಳಿದಿದ್ದ ಸಾಬರ, ಕಿಲಸ್ತರ ಜಾತಿಯ ಯೋಚನೆಗಳನ್ನು ಉಗುಳಿ ನಿರಾಕರಿಸುತ್ತಾನೆ. ಈ ವಾಕ್ಯವು ದುಡಿಯುವ ಜನರು ತಮ್ಮ ಮೇಲೆ ಶೋಷಣೆ ನಡೆದರೂ ಮೂಲ ಧರ್ಮ, ಜಾತಿಯಲ್ಲಿ ಇರಬೇಕು ಎನ್ನುವ ಭಾವ ಅಡಗಿದೆ. ಒಟ್ಟಾರೆ ಜಾತಿಯಲ್ಲಿ ಕೀಳಾದ ಹೊಲೆಮಾದಿಗರು ಈ ಕಾರ್ಮಿಕರಾಗಿ ಭೂಮಾಲೀಕ ಮನೆಯಲ್ಲಿ ದುಡಿಯುವ ಶೋಷಕರಾಗಿ ಮುಂದುವರೆಯುವ ಆಲೋಚನೆ ಇದೆಯೇ ಹೊರತು ದುಡಿಯುವ ವರ್ಗ ಬಿಡುಗಡೆಯ ಪ್ರಶ್ನೆ ಕಾದಂಬರಿಗೆ ಮುಖ್ಯವಾಗಿ ಕಂಡಿಲ್ಲ.

ಗೊರೂರರ 'ಹೇಮಾವತಿ' ಕಾದಂಬರಿಯಲ್ಲಿ ಭೂಹೀನರು, ಕೆಳಜಾತಿಯವರು ಮೇಲ್ವರ್ಗದ ಶೋಷಣೆಗೆ ಒಳಗಾಗಿ ಎಲ್ಲ ಹಕ್ಕುಗಳನ್ನು ಕಳೆದುಕೊಂಡು ಬದುಕುತ್ತಾರೆ. ಇವರ ಅಂಗೈಯಗಲ ಭೂಮಿಯನ್ನು ಬಿಡದ ಹಾಗೆ ಮೇಲ್ಜಾತಿ, ಮೇಲ್ವರ್ಗ ಇವರನ್ನು ವಂಚಿಸಿದೆ. ಇಲ್ಲಿ ಬರುವ ಕಾಳನ ಪಾತ್ರವು ತಲೆತಲೆಮಾರಿನಿಂದ ಶ್ರೀನಿವಾಸ ಪೆರುಮಾಳರ ಮನೆಯಲ್ಲಿ ಜೀತ ಮಾಡುತ್ತಿರುವುದನ್ನು ಕಾದಂಬರಿ ಚಿತ್ರಿಸುತ್ತದೆ. ಇದು ಸತ್ಯ ಕೂಡ. ಆನಂದ "ಪಾಪ ಈ ಪ್ರಾಣಿ ಎಷ್ಟು ತಲೆಮಾರಿನಿಂದ ಹೀಗೆ ನಮಗಾಗಿ ದುಡಿಯುತ್ತಿದ್ದಾನೆ. ಇವನು ದುಡಿಯುವುದು, ಇದರ ಫಲ ನಾವು ಅನುಭವಿಸುವುದು"[೨೫] ಎನ್ನುತ್ತಾನೆ. ಇಲ್ಲಿ ದುಡಿಯುವ ವರ್ಗವನ್ನು ಹಿಂದಿನಿಂದಲೂ ಶೋಷಣೆ ಮಾಡಿ ತಮ್ಮ ಸಾಮ್ರಾಜ್ಯವನ್ನು ಕಟ್ಟಿಕೊಂಡಿರುವ ಭೂಮಾಲೀಕ ವರ್ಗ ವರ್ಗಹಿತಾಸಕ್ತಿಯನ್ನು ಗುರುತಿಸುವುದರ ಜೊತೆಗೆ ಶೋಷಣೆ ಒಳಗಾದ ಜನರು ಈ ಶೋಷಣೆಯನ್ನು ಒಪ್ಪಿಕೊಂಡು ಹೋಗುವಂತಹ ಸ್ಥಿತಿಯನ್ನು ನಿರ್ಮಿಸಿಕೊಂಡಿದ್ದಾರೆ. ಹೀಗೆ ಮಾತನಾಡುವ ಆನಂದ ಈ ಜೀತಪದ್ಧತಿ ವಿರುದ್ಧ ಪ್ರತಿಭಟಿಸುವುದಿಲ್ಲ. ಕೆಳವರ್ಗದವರು ದೇವಾಲಯಗಳನ್ನು ಪ್ರವೇಶಿಸಿದರೆ ಅವರ ಶೋಷಣೆ ಮುಕ್ತವಾಗುತ್ತದೆ ಎನ್ನುವ ಕುರುಡು ನಂಬಿಕೆ ಇದೆ. ಆದರ್ಶವೆಂಬಂತೆ ಕಾದಂಬರಿಕಾರರ ನಿರೂಪಣೆ, ದಲಿತರ ಈ ಸ್ಥಿತಿಗೆ ಕಾರಣವಾದ ಜಾತಿ ಶೋಷಿತರು, ಧರ್ಮ ಮತ್ತು ಭೂಮಾಲೀಕರು ಇವರ ಹಕ್ಕುಗಳನ್ನು ಕಿತ್ತುಕೊಂಡು ಶೋಷಣೆ ಮಾಡುತ್ತಿದ್ದರು. ಈ ವಸ್ತುಸ್ಥಿತಿಯನ್ನು ಕೇಂದ್ರ ಚರ್ಚೆಗೆ ತರುವುದಿಲ್ಲ. ದೇವಾಲಯ ಪ್ರವೇಶ ಮತ್ತು ಅಂತರ್‌ಜಾತಿ ವಿವಾಹದಿಂದ ಜಾತಿಯ ಶೋಷಣೆಯನ್ನು ನಿಯಂತ್ರಿಸಬಹುದು ಎನ್ನುವುದು ಕಾದಂಬರಿಕಾರರಿಗೆ ಮುಖ್ಯವಾಗಿದೆ. ಚೆನ್ನಿ ಹೊಲೆಯ ಸಮುದಾಯದವಳು. ವಾಸು ಬ್ರಾಹ್ಮಣನು. ಇವರ ನಡುವಿನ ವಿವಾಹವು ಜಾತಿಯ ಶೋಷಣೆಯನ್ನು

ಮೀರುವ ಪ್ರಯತ್ನವಾಗಿದೆ. ಲಕ್ಕಿಯ ಪ್ರಕರಣದಲ್ಲಿ ರಾಮಕೃಷ್ಣನ ವಿರುದ್ಧ ಪ್ರತಿಭಟಿಸುತ್ತಾರೆ. ಆದರೆ ಇಲ್ಲಿ ಜಾತಿಯ ಶೋಷಣೆಗೆ ಕಾರಣವಾದ ಆರ್ಥಿಕ ಶೋಷಣೆಯನ್ನು ಗೌಣಗೊಳಿಸಿದೆ.

'ಗ್ರಾಮಾಯಣ' ಕಾದಂಬರಿಯಲ್ಲಿ ಬರುವ ದಲಿತರನ್ನು ಭೂವಂಚಿತರಾಗಿ ಮೇಲ್ವರ್ಗದ ಅಧೀನದಲ್ಲಿ ದುಡಿಯುವವರಾಗಿ ಚಿತ್ರಿಸಿದ್ದಾರೆ. ಮೇಲ್ವರ್ಗದ ನಡುವೆ ನಡೆಯುವ ಭೂಮಿಯ ಹಕ್ಕಿನ ಕಲಹವು ದಲಿತ ವರ್ಗವನ್ನು ಮತ್ತಷ್ಟು ಶೋಷಣೆಗೆ ತಳ್ಳುತ್ತದೆ. ಮೇಲ್ವರ್ಗದ ಅಧೀನದಲ್ಲಿ ಕೆಲಸ ಮಾಡುವ ಹೊಲೆಯರ ರುದ್ರ, ತಳವಾರ ಕಲ್ಲ, ಕುರುಬ ಮಾಯಪ್ಪ, ಕಮಟಿಗರ ಕರಿಯಪ್ಪ, ಮಾದರಚೆನ್ನ ಇವರು ವಾಡೆಯ ಆಡಳಿತದಲ್ಲಿ ಭಾಗಿಯಾಗಿದ್ದಾರೆ. ರಾಣೋಜಿರಾಯನ ಮರಣದ ನಂತರ ಆಸ್ತಿಯ ಒಡೆತನದ ಕಲಹ ಇವನ ಎರಡು ಜನ ಹೆಂಡತಿಯರ ನಡುವೆ ನಡೆಯುತ್ತದೆ. ಲಕ್ಷ್ಮೀಬಾಯಿ ವಾಡೆಯನ್ನು ಬಿಟ್ಟು, ಪುನಃ ವಾಡೆಗೆ ಮರಳಿ ಬಂದಳು. ಹುಲಿಬ್ಯಾಟಿ-ಹಳಬರ ದಳವಾಯಿ 'ಯವ್ವಾ, ಈಗ ವಾಡೇದ ನೆಪ್ಪಾತೇನು ನಿಮಗ? ಹಬ್ಬದಾಗ ವಾಡೆ ಹಾಳಗೆಡವಿ ಹೋಗಿ ಈಗ ಬಂದರ ಯಾರು ಕೇಳಬೇಕು? ದೇವರು ನಮ್ಮ ಮ್ಯಾಗ ಇದ್ದಾ ಅಂತ ಚಿಕ್ಕ ಅವ್ವಾ ಅವರು ನಾವು ಕರ್ರ್ಯಾಣಾ ಬಂದರು. ದೊಡ್ಡ ಹಬ್ಬದಾಗ ವಾಡೆದಾಗ ದೀಪಕ್ಕೆ ದಿಕ್ಕಿಲ್ಲದಾಂಗ ಮಾಡಿದವರಿಗೆ ಇಲ್ಲೇನ್ ದಗದ? ಎಲ್ಲಿಗೆ ಹೋಗಿದ್ದೀರೋ ಅಲ್ಲೇ ಹೋಗೂದಿನ್ನ"[೩೯] ಎಂದು ಪ್ರತಿಭಟಿಸುವುದು. ಮೇಲ್ವರ್ಗದ ಸಲಹೆ ಮೇರೆಗೆ ಮತ್ತೊಂದು ಕಡೆ ಪುತಳಾಬಾಯಿ ಕುರಿತು ದಾದಾ "ದೊಡ್ಡ ಅದ್ವಾವರ್ನ ಊರುಬಿಟ್ಟು ಓಡಿಸಿ ನೀನು ಮೆರೆದಾಡಬೇಕಂತೀಯ?"[೪೦] ಎಂದು ಹೇಳುವುದನ್ನು ಗಮನಿಸಿದರೆ ಮೇಲ್ವರ್ಗದ ಹಿತಾಸಕ್ತಿಯನ್ನು ಕೆಳವರ್ಗದವರ ಮೂಲಕ ಮೂಡಿಸುವುದನ್ನು ಕಾಣುತ್ತೇವೆ.

ಬಾಳ್ಯಾ ಇದ್ದ ಚಪ್ಪರದ ಹತ್ತಿರ ಹರಕು ತಟ್ಟಿನ ಮೇಲೆ ಬಿದ್ದಿದ್ದ ಆ ಮಕ್ಕಳು ಚಂದ್ರಿಯ ಗುಡಿಸಲ ವರ್ಣನೆ ಹಾಗೂ ನಿನ್ನಿನ ದಿನಾ ಊರಾಗ ಹೆಣಾ ಇಟ್ಟುಕೊಂಡು ಕುಂತಾಗ ನಾವು ಬರಬಾರದಂತ ಬಿಟ್ಟೀವರಿ ಎಪ್ಪಾ ಆಮಾಸಿಯಂಥಾ ಆಮಾಸಿ ಬಾಯಾಗ ತುಣುಕು ರೊಟ್ಟಿ ಹಾಕಿಲ್ಲ ಕಾಳ ಕೊಡಬೇಕು ಎಂದು ಹಟ ಹಿಡಿದ ಜನರ ಆಕ್ರೋಶವು ಹಸಿವನ ಬಡತನದ ಸಮಸ್ಯೆಯನ್ನು ನಿರೂಪಿಸುತ್ತಿದೆ. ಆದರೆ ಈ ದುಡಿಯುವ ವರ್ಗದವರಿಗೆ ಈ ಸ್ಥಿತಿಗತಿಗೆ ಆಳುವರ ವರ್ಗದ ವರ್ಗ ವೈರುಧ್ಯತೆ ಕಾರಣವಾಗಿದೆ. ಚಿನ್ನಪ್ಪನ ಬಣವೆಗೆ ಬೆಂಕಿ ಹಾಕಲು, ಗೌಡರ ಹೊಲಕ್ಕೆ ದಾಳಿ ಮಾಡಲು ಕೆಳವರ್ಗದ ಜನರನ್ನು ಬಳಸಿಕೊಂಡಿದೆ. ಚಂದ್ರಿ ದೇವದಾಸಿ ಆಗಿದ್ದು ಜಾತಿಯ ಕಾರಣಕ್ಕಾಗಿ. ಅಂದರೆ ಮೇಲ್ಜಾತಿಯ ಜನರು ಭೂಮಿಯ ಒಡೆತನ ಹೊಂದಿದ್ದಾರೆ. ಕೆಳಜಾತಿಯ ಜನರಿಗೆ ಈ ಭೂಮಿಯ ಹಕ್ಕನ್ನು ವಂಚಿಸಲಾಗಿದೆ. ಇವರು ಕೆಳಜಾತಿಯಾದ ಕಾರಣಕ್ಕಾಗಿ ಕಾದಂಬರಿ ಇವರನ್ನು ಉತ್ಪಾದನಾ ಸಂಬಂಧಗಳಿಂದ ಅಂತರ ಕಾಪಾಡುತ್ತದೆ. ಅವರನ್ನು ಆಡಳಿತ ಮತ್ತು ದುಡಿಮೆಗೆ ಬಳಸಿಕೊಂಡು ಕೂಳು ಇಲ್ಲದ ಸಂದರ್ಭದಲ್ಲಿ ವಿಷ ಆಹಾರ ಕೊಟ್ಟು ಅವರ ಮರಣಕ್ಕೆ ಕಾರಣವಾಗುವ ಆಳುವ ವರ್ಗದ ಚಿತ್ರಣವನ್ನು ಗಮನಿಸಬಹುದು. ಒಟ್ಟಾರೆ ಕಾದಂಬರಿಯು ಮೇಲ್ವರ್ಗದ ವರ್ಗಪ್ರಜ್ಞೆಯಲ್ಲಿ

ಕೆಳವರ್ಗವನ್ನು ನಿರೂಪಿಸುವಾಗ ಈ ಕೆಳಜಾತಿಯ ಜನರ ಭೂಮಿಯ ಹಕ್ಕು, ಜಾತಿಯ ಶೋಷಣೆಯನ್ನು ಗೌಣಗೊಳಿಸಿ ಮೇಲ್ವರ್ಗದ ವರ್ಗ ಕಲಹದಲ್ಲಿ ಇಡೀ ಪಾರಳ್ಳಿಯ ಕೆಳಜಾತಿ ಕೆಳವರ್ಗದ ಜನರ ನಾಶಕ್ಕೆ ಕಾರಣವಾಗಿರುವುದನ್ನು ಚಿತ್ರಿಸುತ್ತದೆ. ಹೀಗೆ ಶೋಷಕ-ಶೋಷಿತ ಸಂಬಂಧಗಳು ಇಲ್ಲಿ ಜಾತಿಯ ಕಾರಣಕ್ಕೆ ಸೃಷ್ಟಿಯಾಗಿವೆ.

ಅನಂತಮೂರ್ತಿಯವರ 'ಭಾರತೀಪುರ' ಕಾದಂಬರಿಯು ಕೆಳಜಾತಿಯ ಜನರನ್ನು ಮೇಲ್ಜಾತಿಯ ಜನರ ಶೋಷಣೆ ಮಾಡುವ ವಿವಿಧ ಆಯಾಮವನ್ನು ಚರ್ಚಿಸುತ್ತದೆ. ಜಗನ್ನಾಥ ಚಿಕ್ಕವನಾಗಿದ್ದಾಗ ಹೊಲೆಯರ ಭರ್ಮ ದಾರಿಯಲ್ಲಿ ಇವನಿಗೆ ಸಿಕ್ಕಿದರೆ ಭರ್ಮನು ಥಟ್ಟನೆ ಸರಿದು ಮರದ ಹಿಂದೆ ಅವಿತು, ತೊಟ್ಟಿದ್ದ ಕಪ್ಪು ಅಂಗಿಯನ್ನು ಬಿಚ್ಚಿ, ಕಣ್ಣಿಗೆ ಬೀಳುವುದೇ ತಪ್ಪೇನೋ ಎನ್ನುವಂತೆ ನಮಸ್ಕರಿಸುತ್ತಿದ್ದನು. ಅಂದರೆ ಕೆಳಜಾತಿಯ ಜನರು ಮೇಲ್ಜಾತಿಯ ಸಣ್ಣ ಮಕ್ಕಳಿಗೂ ಕೂಡ ಎದುರಿ ಅವಿತುಕೊಳ್ಳುವ ಕ್ರೂರವಾದ ಜಾತಿಯ ಶೋಷಣೆಯನ್ನು ಕಾಣುತ್ತೇವೆ. ಮತ್ತೊಂದು ಕಡೆ ಜಗನ್ನಾಥ ಅಕ್ಷರ ತಿದ್ದಿ ಪಿಳ್ಳನಿಗೆ ತಗೋ ಎಂದು ಸ್ಲೇಟನ್ನು ಕೊಟ್ಟಾಗ "ಪಿಳ್ಳ ಹತ್ತಿರ ಬಂದು ಎಸೆದ ಸಾಮಾನು ಹಿಡಿಯುವುದಕ್ಕೆ ಸನ್ನದ್ಧನಾದವನಂತೆ ನಿಂತ. ಒಡ್ಡಿದ ಕೈಗೆ ಹತ್ತಿರ ತಂದಾಗ ಪಿಳ್ಳ ಥಟ್ಟನೆ ಕೈಗಳನ್ನು ಕೆಳಗೆ ಮಾಡಿದ 'ಬಿದ್ದರೆ ಒಡೆಯತ್ತೆ ತಗೊ' ಎಂದು ಜಗನ್ನಾಥ ಇನ್ನೂ ಬಗ್ಗಿದಾಗ ಪಿಳ್ಳನ ಕೈಗಳು ಇನ್ನೂ ಕೆಳಕ್ಕೆ ಹೋದವು. ಕೊನೆಗೆ ಚಿಟ್ಟಿಯ ಕೆಳಗೆ ಕೈಯೊಡ್ಡಿ ನೆಲದ ಮೇಲೆ ಕೂತುಬಿಟ್ಟ".[೨೯] ಈ ಸನ್ನಿವೇಶವು ದಲಿತರನ್ನು ಮೇಲುಜಾತಿಯು ಎಷ್ಟು ಅಮಾನವೀಯವಾಗಿ ಇಟ್ಟಿತ್ತು. ಆದರೆ ತಕ್ಷಣ ಬದಲಾಗಲಿ ಎಂದಾಗ ಅದು ಸಾಧ್ಯವಾಗುತ್ತಿಲ್ಲ ಎನ್ನುವು ಆಲೋಚನೆ ಧ್ವನಿಸುತ್ತದೆ. ಈ ಸಂಕುಚಿತವಾದ ತಿಳುವಳಿಕೆಯು ಎಲ್ಲೋ ಮೂಲಭೂತವಾಗಿ ಜಾತಿಯ ಕೀಳರಿಮೆಯನ್ನು ಸಾಬೀತುಗೊಳಿಸುವ ಪ್ರಯತ್ನವಾಗಿ ಉಳಿದಿದೆ.

ದಲಿತ ವರ್ಗವು ಜೀತಪದ್ಧತಿಯಿಂದ ಇನ್ನೂ ಹೊರಬಂದಿಲ್ಲ. ಮಲ ಹೊರುವ ಪದ್ಧತಿ ಹಾಗೆಯೇ ಇದೆ. ಆದರೆ ಜಗನ್ನಾಥನ ಪ್ರಯತ್ನವು ದೇವಾಲಯದ ಕಡೆ ಚಲಿಸುತ್ತದೆ. ಶತಮಾನಗಳಿಂದ ದಲಿತರ ಶೋಷಣೆಗೆ ಕಾರಣವಾದ ಜೀತಪದ್ಧತಿ, ಮಲ ಹೊರುವ ಪದ್ಧತಿಯು ಜೀವಂತವಾಗಿ ಇರುವಂತಹ ಸ್ಥಿತಿಯ ಬಗೆಗೆ ಕಾದಂಬರಿಯು ಚಿತ್ರಿಸುತ್ತದೆ ಹೊರತು ಅದನ್ನು ಸಮಾಜದ ಮುಖಾಮುಖಿ ಮಾಡುವುದಿಲ್ಲ. ಕೆಳಜಾತಿಯ ಜನರು ಜೀತ ಮಾಡುವುದು ಭೂಮಿಯ ಹಕ್ಕನ್ನು ವಂಚಿಸಿದ ಸಲುವಾಗಿ. ಈ ಹಕ್ಕನ್ನು ಪಡೆದುಕೊಳ್ಳುವ ಆಲೋಚನೆ ಇಲ್ಲಿ ಬರುವುದಿಲ್ಲ. ಹೀಗೆ ಶೋಷಣೆಗೆ ಒಳಗಾದ ಹೊಲೆಯ ಸಮುದಾಯದ ಚಿತ್ರಣವನ್ನು ಗುರುತಿಸಬಹುದು.

'ಸಂಸ್ಕಾರ' ಕಾದಂಬರಿಯಲ್ಲಿ ಮೇಲ್ಜಾತಿಯ ಬ್ರಾಹ್ಮಣರ ಶೋಷಣೆಗೆ ಒಳಗಾದ ದುಡಿಯುವ ವರ್ಗದ ಪಾತ್ರಗಳು ಕಾಣಿಸುತ್ತವೆ. ಬ್ರಾಹ್ಮಣ ಸಮುದಾಯದಲ್ಲಿ ಆದಂತಹ ಬದಲಾವಣೆಗಳನ್ನು

ಕುರಿತು ನಿರೂಪಣೆ ಇದ್ದರೂ ಕೆಳಜಾತಿಯ ಜನರನ್ನು ಕೀಳಾಗಿ ಪರಿಭಾವಿಸುವ ವರ್ಗದ ಜನರ ಕುರಿತು ಕಾದಂಬರಿಯು ಗಂಭೀರ ರೂಪ ಸ್ವರೂಪದಲ್ಲಿ ಅಭಿವ್ಯಕ್ತಿಸುತ್ತದೆ. ಇಲ್ಲಿ ಜಾತಿಯಲ್ಲಿ ಕೀಳಾಗಿ ಬೆಳ್ಳಿ, ಚನ್ನಿ ಪಾತ್ರಗಳು ಬರುತ್ತವೆ. ಹಾಗೆಯೇ ಚಂದ್ರಿಯನ್ನು ಸೂಳೆಯಾಗಿ ಚಿತ್ರಿಸಿದೆ. ಬ್ರಾಹ್ಮಣನಾದ ನಾರಣಪ್ಪ ಚಂದ್ರಿಯ ಜೊತೆ ಸಂಬಂಧ ಇಟ್ಟುಕೊಂಡಿರುವುದು ಬ್ರಾಹ್ಮಣರಿಗೆ ನುಂಗಲಾರದ ತುತ್ತಾಗಿದೆ. ಅವನನ್ನು ಊರಿನಿಂದ ಬಹಿಷ್ಕಾರ ಹಾಕಲು ಪ್ರಯತ್ನಿಸುತ್ತಾರೆ. ಆದರೆ ಧರ್ಮದ ಬೆದರಿಕೆಗೆ ಹೆದರಿ ಅವನನ್ನು ಏನು ಮಾಡುವುದಕ್ಕೂ ಆಗಲಿಲ್ಲ. ಆದರೆ ನ್ಯಾಯ ತೀರ್ಪು ಹೇಳುವ ಪ್ರಾಣೇಶಾಚಾರ್ಯರು ಕೂಡ ಚಂದ್ರಿಯ ಜೊತೆ ಸಂಬಂಧ ಬೆಳೆಸುತ್ತಾರೆ. ಶ್ರೀಪತಿ ಬೆಳ್ಳಿಯನ್ನು ಬಳಸಿಕೊಳ್ಳುತ್ತಾನೆ. ಇಲ್ಲಿ ಜಾತಿ ಕೆಳಜಾತಿಯ ಪಾತ್ರಗಳನ್ನು ಮೇಲ್ಜಾತಿಯ ಪುರುಷರ ಭೋಗದ ವಸ್ತುವಾಗಿ ಚಿತ್ರಿಸಿದ್ದಾರೆ. ಆದರೆ ಅವರ ವೃತ್ತಿ, ಅವರ ಬಗೆಗೆ ವಿವರಗಳಿಲ್ಲ. ಬ್ರಾಹ್ಮಣ ಸಮುದಾಯಗಳಲ್ಲಿ ಆದ ಬದಲಾವಣೆಯನ್ನು ಗುರುತಿಸುವಾಗ ಶೋಷಣೆಗೆ ಒಳಗಾದ ಜನರ ಬಗೆಗೆ ಅರಿವಿಲ್ಲ. ಕೆಳಜಾತಿಯ ಮಹಿಳೆಯ ಜೊತೆಗೆ ಬ್ರಾಹ್ಮಣ ಸಮುದಾಯದ ಸಂಬಂಧವು ಕಾದಂಬರಿಯು ಎತ್ತಿಹಿಡಿಯುತ್ತದೆ.

ದೇವನೂರ ಅವರ 'ಒಡಲಾಳ' ಕಾದಂಬರಿಯಲ್ಲಿ "ಎತ್ತಪ್ಪನು ಮೇಲ್ಜಾತಿಯನ್ನು ಮತ್ತು ಭೂಮಿಯ ಒಡೆಯನಾಗಿ ಮೇಲ್ವರ್ಗವನ್ನು ಪ್ರತಿನಿಧಿಸುತ್ತಾನೆ. ಹಾಗೆಯೇ ಭೂಮಿಯ ಹಕ್ಕುಗಳನ್ನು ಕಳೆದುಕೊಂಡಿರುವ ಸಾಕವ್ವನ ಕುಟುಂಬವು ಕೂಲಿ ಮಾಡಿ ಜೀವನ ನಡೆಸುತ್ತಿದೆ. ಕೂಲಿ ನಾಲಿಗೆ ಹದ್ದಿನಂತೆ ಕಾಯ್ತ ಸಿಕ್ಕಿದ್ದು ತಂದು ತನ್ನ ಇರೋ ಏಡು ಹೈಕಳ ಹೊಟ್ಟೆಗಾಕುತ ಒಡಬಾಳು ಪಾಡುತ್ತಿದ್ದಳು"[೨] ಎಂದು ಗೌರಮ್ಮನ ಕುರಿತು ಹೇಳುತ್ತದೆ. ಹಾಗೆಯ ಪುಟಗೌರಿ ಕೂಲಿಗೆ ಹೋಗುತ್ತಿದ್ದಳು. ಹೀಗೆ ಕೂಲಿ ಮಾಡಿ ಬದುಕುವ ಶ್ರಮಜೀವಿಗಳಾಗಿ ಇವರನ್ನು ಗುರುತಿಸಬಹುದು. ದಲಿತವರ್ಗದವರಿಗೆ ಮೇಲ್ವರ್ಗದ ಹೋಟೆಲಿಗೆ ಪ್ರವೇಶ ಇರಲಿಲ್ಲ. ಆದರೆ ದಲಿತ ಚಳುವಳಿ ಪ್ರಭಾವದಿಂದ ಹೋಟೇಲಿಗೆ ದಲಿತರು ಹೋಗಿರುವ ಚಿತ್ರಣ ಗುರುತಿಸಿದ್ದು ಹೀಗೆ ಹೇಳುತ್ತಾನೆ. "ಅಣ್ಣೊನೆನ್ನ ತಗಡ್ಡೂಗ್ರ ವೋಗಿದ್ದಿ, ಅಲ್ಲಿ ನಮ್ಮವರು ಸಿವಬಸಪ್ಪ ಹೋಟಲ್ ನುಗ್ಗುದ್ದೂ ಅಂದ್ರ... ಸಿವಸಿವಾ ಅಪಾಟಿ ಜನ... ನಾವೇನ ಕಾಸ ಕೊಟ್ಟವೂ ಕಲ್ಲ ಕೊಟ್ಟವೂ ಕಾಪಿ ತಿಂಡಿ ಕೊಡ್ರಿ ಅನ್ನೋರು ಸಿವಬಸಪ್ಪ ಅನ್ನೋವ ಬೆವುತೋದ. ಆ ಮೇಲ ಪೋಲೀಸ್ನವರು ಇಳುದ್ರು ನಾವು ಕೊಡ್ಯತೀವಿ ಸುಮ್ನಿರಿ ಅನ್ನೋರು. ಜನ ಅನ್ನೋದು ಪೋಜು ನೋಡೋ ಥರ ನಿಂತಿರೋದು. ತಕ್ಕಳಪ್ಪ ನಾನ್ಯಾಕ ಸುಮ್ಕಿರೋದು ಅಂದು ಬುಟ್ಟು ನಾನೂವಿ ಕಾಸ ಬಾಸಾಕಿ 'ದೋಸ ಟೀ ಕೊಡ್ರಿ' ಅಂದೆ ಸಿವಬಸಪ್ಪ ಅನ್ನೋನು ನನ್ನ ದುರುಗುಟ್ಟಂಡು ನೋಡ್ತ ತಂದ್ಕೊಟ್ಟನು."[೨೨] ಇಲ್ಲಿ ದಲಿತರನ್ನು ಸವರ್ಣೀಯರು ಹೋಟೆಲ್‌ಗೆ ಪ್ರವೇಶಿಸುವುದನ್ನು ನಿಷೇಧಿಸಿದರು. ಈ ಜಾತಿ ಶೋಷಣೆಯಿಂದ ಎಚ್ಚರಗೊಂಡು ಪ್ರತಿಭಟನೆ ಮಾಡಿರುವುದನ್ನು ಗುರುತಿಸಬಹುದು.

ಎತ್ತಪ್ಪನ ಕಡಲೆಕಾಯಿ ಆರೋಪದಲ್ಲಿ ಪೋಲೀಸರು ಸಾಕವ್ವನ ಮನೆಯ ಮೇಲೆ ಜಪ್ತಿಗೆ ಬರುವುದು, ಸಾಕವ್ವನ ಮಾತು ಪೋಲೀಸರ ಬೂಟುಗಳ ಶಬ್ದದಲ್ಲಿ ಅಪ್ಪಚ್ಚಿಯಾಗುವುದು. 'ಈ ಸಲ ಬುದಕ್ಕೆನನ್ ಮಗ್ನೆ ನೀನು ಎದ್ಗಳಿಗೆ ಚೆನ್ನಾಗಿತು. ಇನ್ನೊಂದ್ಸಲ ಏನಾದರೂ ಚೂರು ಸುಳಿವು ಸಿಕ್ಕೊ ನಿನ್ನ ಚರ್ಮ ಸುಲ್ದು ಬಿಡ್ತೀನಿ'[೩೪] ಎಂದು ಪೋಲೀಸರ ಹೊಂಕರಿಸಿದ್ದು ಇವರು ಕೆಳಜಾತಿಯವರು ಆದಕಾರಣಕ್ಕಾಗಿ.. ಹೀಗೆ ಎತ್ತಪ್ಪ ಮತ್ತು ಪೊಲೀಸರ ದಾಳಿಗೆ ಸಿಲುಕಿರುವರು ದುಡಿಯುವ ವರ್ಗದವರು. ಏನೂ ದುಡಿಯದೆ ಬದುಕುತ್ತಿರುವ ಎತ್ತಪ್ಪನ ಕುರಿತು ಕಾಳಣ್ಣ ಹೀಗೆ ಹೇಳುತ್ತಾನೆ. 'ಎತ್ತಪ್ಪನೇನು ದುಡುದು ಬೆವರಿಳಿಸಿ ರಗತ ಬಸುದು ಸಂಪಾದ್ನ ಮಾಡಿದ್ದನ ತಗಾ. ಹೋದ್ರ ಅವನ್ದೇ ನೋದ್ದು ಗುಡ್ಡ ಹಾಕಿರೊ ಬಡ್ಡಿ ದುಡ್ಡಲ್ಲಿ ಒಂದು ಸಿವುರುಕನ'.[೩೫] ಇಲ್ಲಿ ಸಂಪತ್ತಿನ ಅಸಮಾನತೆಯ ವಿರುದ್ಧ ಧ್ವನಿ ಇದೆ. ಜೊತೆಗೆ ದುಡಿಯುವ ವರ್ಗ ಶ್ರಮಶಕ್ತಿಯಿಂದ ಇವನು ಶ್ರೀಮಂತನಾಗಿದ್ದಾನೆ ಎಂದು ಚಿತ್ರಿಸುತ್ತದೆ. ಆದರೆ ವರ್ಗ ಅಸಮಾನತೆ, ಸಮಾನತೆ, ಜಾತಿಯ ನಾಶ ಕುರಿತು ಕಾದಂಬರಿಯಲ್ಲಿ ಆಸಕ್ತಿ ಕಾಣುವುದಿಲ್ಲ.

'ಕುಸುಮಬಾಲೆ' ಕಾದಂಬರಿಯಲ್ಲಿ ಜೋತಮ್ಮಗಳು ಮಾತನಾಡುತ್ತಿರುವುದು ಕುಸುಮ ಮತ್ತು ಚೆನ್ನನ ಸಂಬಂಧ ಇತಿಹಾಸನ್ನು, ಚೆನ್ನ ಕೆಳಜಾತಿಯವನು. ಕುಸುಮ ಮೇಲ್ಜಾತಿಯವಳು. ಇವರು ಕೂಡುವಿಕೆಯಿಂದ ಕುಸುಮಳಿಗೆ ಮಗುವಾಗುತ್ತದೆ. ಆದರೆ ಚೆನ್ನನ ಕೊಲೆ ಈ ಕಾರಣದಿಂದ ಆಗುತ್ತದೆ. ಕೆಂಪಿ ಗಂಡನೊಂದಿಗೆ ಬಾಳುವೆ ಮಾಡಲು ಒಪ್ಪದೇ ಬೇರೆ ಜಾತಿಯವರೊಂದಿಗೆ ಗೆಳೆತನ ಮಾಡುತ್ತಾಳೆ. ಜೊತೆಗೆ ಸಾವಿತ್ರಿ, ಭಗವತಿ ಹೊಲೆಯರ ಗಂಡುಗಳ ಜೊತೆಗೆ ಬೆರೆಯುವುದು, ಹೀಗೆ ಮೇಲು-ಕೀಳು ಎನ್ನದೆ ಗಂಡು-ಹೆಣ್ಣುಗಳ ಕೂಡುವಿಕೆಯನ್ನು ಕಾದಂಬರಿ ಒತ್ತಾಯಿಸುತ್ತದೆ. ಏಕೆಂದರೆ ಜಾತಿಶೋಷಣೆಯ ನಾಶದ ಪರಿಕಲ್ಪನೆ ಇದರ ಆಳದಲ್ಲಿ ಗುರುತಿಸಬಹುದು. ಮಧ್ವಾಚಾರ್ಯರು ಚೆನ್ನನಿಗೆ ಹೇಳುವುದು "ನಾನು ನಿನಗೆ ಚೆನ್ನಾಗಿ ಗೊತ್ತಲ್ಲ; ನೀನು ಕಂಡ ಹಾಗೆ ನನಗಂತೂ ಜಾತಿಭೇದವು ಇಲ್ಲಪ್ಪ, ನಾನು ನಿನ್ನನ್ನು ಮುಟ್ಟಿಸಿಕೊಳ್ಳಬಾರದು ಅಂತೇ ನಿಲ್ಲವೋ... ಆದರೆ ನನಗೆ ವಯಸ್ಸಾಯ್ತು ನೋಡು, ಯಥಾರ್ಥ ಈ ಇಳಿವಯಸ್ಸಿನಲ್ಲಿ ಪದೇ ಪದೇ ತಣ್ಣೀರು ಸ್ನಾನವು ಆರೋಗ್ಯಕ್ಕೆ ವ್ಯತಿರಿಕ್ತ ಅಲ್ಲವೇನಪ್ಪ".[೩೬] ಇಲ್ಲಿ ಮೇಲ್ಜಾತಿಯ ಜನರು ವೈದಿಕ ಸಂಸ್ಕೃತಿಯ ಕಟ್ಟುಪಾಡುಗಳನ್ನು ಮೀರುವ ಪ್ರಯತ್ನದ ಸೂಚನೆ ಇದೆ. ದ್ಯಾವಯ್ಯನ ಮಾತು ಗಮನಿಸಿದರೆ "ನನ್ನ ತಾನೇ ಗಂಡೊಂದು ಜಾತಿ ಹೆಣ್ಣೊಂದು ಜಾತೀದು ಮಧ್ವ ಮಾಡ್ಯಗ ಆಡಿದ್ದ ಮಾತ್ಗಳ ಏನೆಂದರೆ ಗಂಡ ಹೆಡ್ತಿಯರಾಗಿ ಏನ್ ಬೇಕಾದ್ರೂ ಎಷ್ಟ್ ಬೇಕಾರ್ರೂ ಜಗಳವಾಡಿರಿ ಆದರೆ ಇಂತಿಂಥ ಜಾತಿ ನೀನೂ ಅಂತಂತ ಹೇಳ ಮಾತ್ರ ಜಗಳ ಮಾಡಬೇಡರಿ ಅಂತ ನಾನಾದರೂ ನಿಮ್ಮಲಿ ವಿನಂತಿಸುತ್ತೇನೆ"[೩೭] ಇಲ್ಲಿ ಜಾತಿಯನ್ನು ಮೀರಿ ಗಂಡು-ಹೆಣ್ಣುಗಳಾಗಿ ಬದುಕನ್ನು ನಿರ್ವಹಿಸಬೇಕು ಎನ್ನುವ ದುಡಿಯುವ ವರ್ಗದ ಪ್ರಜ್ಞೆಯನ್ನು ಗುರುತಿಸಬಹುದು.

'ಕಾರ್ಯ' ಕಾದಂಬರಿಯು ಕೆಳಜಾತಿಗಳ ನಡುವೆ ಇರುವ ಜಾತಿ ಶ್ರೇಣೀಕರಣ ವ್ಯವಸ್ಥೆಯನ್ನು ಕುರಿತು ಚಿತ್ರಿಸಿದೆ. ಮಚಗಾರರು ಮತ್ತು ಸಮಗಾರರು ಇಬ್ಬರೂ ಕೆಳವರ್ಗದವರೇ. ಆದರೆ ಶಾಂತಗೌಡ, ರುದ್ರಗೌಡ ಜಾತಿ ಅಸಮಾನತೆಯನ್ನು ಕಾಪಾಡಿಕೊಂಡು ಬರುತ್ತಾರೆ. ಬುಟಾಳಯ್ಯ ಹರಿಜನರ ಭಿಕ್ಷೆಯಿಂದಲೇ ಬದುಕನ್ನು ನಡೆಸುತ್ತಾನೆ. ದಲಿತರ ಘಟೇಗಾರವರೆಗೆ ದಶರಥ ತನ್ನ ಸೊಟ್ಟ ಬಾಯಿಯನ್ನು ಮರೆಮಾಡಲು ಕಲ್ಲಿಮೀಸೆ ಬಿಟ್ಟಿರುತ್ತಾರೆ. ಆದರೆ ಇದು ಊರಗೌಡನಿಗೆ, ತನ್ನನ್ನು ಕೆಣಕಿದಂತೆ ಕಾಣುತ್ತದೆ. ಇಲ್ಲಿ ಮೀಸೆ ಅಧಿಕಾರ ದರ್ಪದ ಸಂಕೇತವಾಗಿ ಮಾತ್ರ ಗೌಡನಿಗೆ ಕಂಡುಬರುತ್ತದೆ. ಅವನ ಮೀಸೆಯನ್ನು ಬೋಳಿಸುವಂತೆ ನಾಯಂದರ ಮಲ್ಲಪ್ಪನಿಗೆ ಆಜ್ಞಾಪಿಸುತ್ತಾರೆ. ಆ ಆಜ್ಞೆಯನ್ನು ಮಲ್ಲಪ್ಪ ನಿರಾಕರಿಸುತ್ತಾನೆ. ಇಲ್ಲಿ ದಲಿತ ವರ್ಗದವರು ಜಾಗೃತರಾಗಿ ಶೋಷಕ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವ ಶಕ್ತಿಯು ಕಾದಂಬರಿಯಲ್ಲಿ ಗುರುತಿಸಲು ಸಾಧ್ಯ. ಮೇಲು-ಕೀಳು ಎಂಬ ತಾರತಮ್ಯವು ನ್ಯಾಯವ್ಯವಸ್ಥೆಯಲ್ಲಿ ಇಲ್ಲ. ಕೆಂಚಪ್ಪಗೌಡನ ಮುಂದೆ ಹೇಳಿದ್ದು 'ನಾ ಬರುವ ತೆಪ್ಪೆ ನಂದೇನಿಲ್ಲ ಅವ್ರು ಕಳಸ್ಯಾರಂತ ಬಂದಿನಿ... ಇಲ್ಲನಾ ಅದಕ ಬಂದಿಲ್ಲ. ನಿಮ್ಮ ಮನಿ ಆಳಾಗಿ ಬಂದಿನಿ'[೩೪] ಎನ್ನುವುದು ಕೆಳಜಾತಿಯ ಜನರ ಅಸಹಾಯಕತೆಯಾಗಿ ಕಂಡರು. ಜಾತಿ, ವರ್ಗ ಅಸಮಾನತೆಯ ವಿರುದ್ಧ ನೆಲೆ ನಿಲ್ಲುವ ದುಡಿಯುವ ವರ್ಗದ ಜನರ ಹೋರಾಟ ನಿರೀಕ್ಷೆಗಳನ್ನು ಜೀವಂತವಾಗಿ ಕಟ್ಟಿಕೊಡುತ್ತದೆ.

ಮುಳ್ಳೂರು ನಾಗರಾಜ್ ಅವರ 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯು ಸಮಾಜದಲ್ಲಿ ಇರುವ ಜಾತಿಶೋಷಣೆ, ವರ್ಗಶೋಷಣೆಯನ್ನು ಪ್ರತಿಭಟಿಸುತ್ತಿದೆ. ಕಾದಂಬರಿಯ ನಾಯಕ ಬಸವರಾಜನ ಹೋರಾಟವು ಮೇಲ್ಜಾತಿಯ ಜಾತಿಶೋಷಣೆ ವಿರುದ್ಧವಾದುದು. ಹೊಲ್ಯಾರ ಸಿದ್ದಿ ಮತ್ತು ಗೌಡರ ಕಿರಿಯ ಮಗ ಚಂದ್ರಪ್ಪನ ಸಂಬಂಧ, ಹೋಟೆಲ್ ನಿಂಗವ್ವ ಅಸ್ಪೃಶ್ಯರನ್ನು ಕಾಣುವ ರೀತಿ, ಹೊಲ್ಯಾರ ರಂಗ-ರಂಗಿಯ ಪ್ರಕರಣ ಅಂಬೇಡ್ಕರ್ ಸಂಘವನ್ನು ತಾನೇ ಕಟ್ಟಬೇಕೆಂದು ಯತ್ನಿಸುವ ಕ್ರಿಯೆ, ಜಾತಿಯ ಅಸಮಾನತೆಯನ್ನು ತೊಲಗಿಸಿ ಸಾಮಾಜಿಕ ನ್ಯಾಯವನ್ನು ಕೊಡಿಸುವುದೇ ಆಗಿದೆ. ಇಲ್ಲಿ ಬರುವ ದಲಿತ ಪಾತ್ರಗಳು ಊರಗೌಡರ ಮನೆಯ ಜೀತದ ಆಳುಗಳಾಗಿದ್ದಾರೆ. ಸಂಗಯ್ಯನು ಗೌಡರ ಮನೆಯ ಜೀತದಾಳು. ಹೊಲ್ಯಾರ ಸಿದ್ದೀ ಕೂಲಿ ಮಾಡಿ ಜೀವನ ಸಾಗಿಸುತ್ತಾಳೆ. ಆದರೆ ಕಾದಂಬರಿಯಲ್ಲಿ ಮೇಲ್ಜಾತಿ ಹೆಣ್ಣು ಕೆಳಜಾತಿ ಗಂಡುಗಳ ಸಂಬಂಧ ಇದೆ. ಕೆಳಜಾತಿಯ ಹೆಣ್ಣು ಮತ್ತು ಮೇಲ್ಜಾತಿಯ ಗಂಡುಗಳ ಸಂಬಂಧವಿದೆ. ಆದರೆ ಈ ಸಂಬಂಧಗಳು ದೌರ್ಜನ್ಯದಿಂದ ಕೂಡಿದರೆ ಮಾತ್ರ ಬಸುರಾಜ್ ಪ್ರತಿಭಟಿಸುತ್ತಾನೆ. ಮೇಲ್ವರ್ಗದ ವಿರುದ್ಧ ಬಸುರಾಜನ ಹೋರಾಟವನ್ನು ಸಹಿಸದೆ ಊರಿನ ಯಜಮಾನ ನಂಜನ ಮೂಲಕ ಜಾತಿಯ ವಿಷಬೀಜ ಬಿತ್ತುತ್ತಾನೆ. ಹೀಗೆ ಕೆಳಜಾತಿಯವರ ನಡುವೆ ಕಂದಕವನ್ನು ಸೃಷ್ಟಿಸಿ ತನ್ನ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವುದು ಕಾದಂಬರಿಯಲ್ಲಿ ಜಾತಿಯ ಶೋಷಣೆಯನ್ನು ದೌರ್ಜನ್ಯದಿಂದ ಹೋಗಲಾಡಿಸುವ ಪ್ರಯತ್ನ ಇದೆ. ಆದರೆ ಜಾತಿಯನ್ನು ಹೋಗಲಾಡಿಸುವ ಆಲೋಚನೆಯನ್ನು ಕಾದಂಬರಿಯಲ್ಲಿ ಗೌಣಗೊಳಿಸಿದೆ.

'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಕಾದಂಬರಿಯು ಮೇಲ್ಜಾತಿಯ ಜನರು ಕೆಳಜಾತಿಗಳ ಮೇಲೆ ನಡೆಸುವ ದೌರ್ಜನ್ಯವನ್ನು ಅನಾವರಣ ಮಾಡುತ್ತದೆ. ಕೊಟ್ರ ಕೆಳವರ್ಗದವನು. ಹೈಸ್ಕೂಲಿನಲ್ಲಿ ಸವರ್ಣೀಯರ ಮಕ್ಕಳಿಂದ ಬೇರೆಯಾಗಿ ಕುಳಿತುಕೊಳ್ಳಬೇಕು. ನೀರನ್ನು ಬೊಗಸೆಯಲ್ಲಿ ಕುಡಿಯಬೇಕು. ಈ ರೀತಿ ಅವನನ್ನು ಶಾಲೆಯಲ್ಲಿ ಶೋಷಣೆ ಮಾಡಲಾಗುತ್ತದೆ. ಕೊಟ್ರ ಮತ್ತು ದಿಬ್ಬ ಪಂಡಿತ ಮನೆಯವರೆಗೆ ಬಂದಾಗ ಪಂಡಿತನ ಹೆಂಡತಿ ಹೇಳಿದ್ದು 'ಏನ್ರೋ ಹೊಲೇರಾಗಿ ಒಳಾಗ ಬಂದು ಕುಂತ್ಗಂತೀರಲ್ಲಾ ನಾಚ್ಗೆ ಹೇಸ್ಗೆ ಐತಾ ನಿಮ್ಗೆ ಬರ್‍ರೊ ಬರ್‍ರೊ ಅಡ್ಗೆ ಮನೆ ಒಳ್ಗೆ ಬಂದು ಕುಂತ್ಕಳ್ಳಿ ತಿಳೀತಾ'[೫] ಎಂದು ಆಕ್ರೋಶ ತಾಳಿದಾಗ ಇಬ್ಬರೂ ಹೊರಗೋಡಿ ನಿಲ್ಲುತ್ತಾರೆ. ಇಲ್ಲಿ ಕೆಳಜಾತಿಯ ಜನರು ಮೇಲ್ಜಾತಿಯ ಮನೆಯ ಸೂರು ಪ್ರವೇಶ ಮಾಡುವ ಹಾಗಿಲ್ಲ ಎಂಬುದನ್ನು ತಿಳಿಸುತ್ತದೆ. ಆದರೆ ಕೊಟ್ರನ ಮನಸ್ಸಿನಲ್ಲಿ ಜಾತಿಯ ಕೀಳರಿಮೆ ಇಲ್ಲ. 'ತಾನು ವಿದ್ಯೆ ಮತ್ತು ಜಾಣತನದ ದೃಷ್ಟಿಯಿಂದ ಅವರೆಲ್ಲರಿಗಿಂತ ಮೇಲು, ತಾನು ಅವರೆಲ್ಲರಿಗಿಂತ ಕಡಿಮೆ ಇರುವುದು ಜಾತಿಯಲ್ಲಿ, ಉಡುಗೆ ತೊಡುಗೆಯಲ್ಲಿ, ಆಹಾರದ ವಿಷಯದಲ್ಲಿ, ಅಂತಸ್ತಿನ ವಿಷಯದಲ್ಲಿ'[೬] ಎಂದು ಚಿಂತಿಸುತ್ತಾನೆ. ಇಲ್ಲಿ ಕೆಳಜಾತಿಯ ಜನರು ಜಾಣರು, ಬುದ್ಧಿವಂತರು ಆದರೂ ಜಾತಿಯ ಶೋಷಣೆ, ಆರ್ಥಿಕ ಶೋಷಣೆ ಜೀವಂತವಾಗಿರುವುದನ್ನು ಕಾಣಬಹುದು. ದಲಿತ ಸಮುದಾಯದವರು ಊರಿನ ದೇವಾಲಯಕ್ಕೆ ಹೋಗುವ ಹಾಗಿಲ್ಲ. ಹೋದರೆ ರಕ್ತ ಕಾರಿ ಸಾಯುತ್ತಾರೆ ಎಂಬ ಮೂಢನಂಬಿಕೆ. ಆದರೆ ವಿದ್ಯಾವಂತನಾದ ಕೊಟ್ರನ ಮನಸ್ಸು ಈ ವಿಷಯವನ್ನು ಗಂಭೀರವಾಗಿ ಚಿಂತಿಸಿ ಈ ರೀತಿ ಪ್ರತಿಕ್ರಿಯೆ ಮಾಡುತ್ತದೆ. "ಒಂದು ಕಣ್ಣಿಗೆ ಸುಣ್ಣ... ಇನ್ನೊಂದು ಕಣ್ಣಿಗೆ ಬೆಣ್ಣೆ ಇದೆಂಥ ದೇವರು" ಎಂದು ಪ್ರತಿಭಟಿಸುತ್ತಾನೆ. ಹೀಗೆ ಜಾತಿಯ ಅಸಮಾನತೆಯನ್ನು ಪ್ರತಿಭಟಿಸುವ ಪಾತ್ರಗಳನ್ನು ಕಾಣುತ್ತೇವೆ. ದಿಬ್ಬ ಜಾತಿಯಲ್ಲಿ ಕೀಳೆಂದು ಕಾದಂಬರಿಯಲ್ಲಿ ಚಿತ್ರಿಸಿದರೂ ಗೌಡನ ಮನೆಯ ಹೊಲವನ್ನು ಗೇಣಿಗೆ ಉಳುಮೆ ಮಾಡುತ್ತಿದ್ದ. ಆದರೆ ಈ ದುಡಿಯುವ ಜನರ ಭೂಮಿಯ ಹಕ್ಕಿನ ಕುರಿತು, ಅವರ ವರ್ಗಶೋಷಣೆಯ ಕುರಿತು ಮೇಲ್ವರ್ಗದ ವಿರುದ್ಧ ಪ್ರತಿಭಟನೆ, ಕಾದಂಬರಿಯಲ್ಲಿ ಕಾಣಿಸುವುದಿಲ್ಲ.

'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಕೆಳಜಾತಿಯವರಾದ ಹೊಲೆಯರು ಮಾದಿಗರು, ಸಮಗಾರರ ಚಿತ್ರಣವಿದೆ. ಹಾಗೆಯೇ ಮರಾಠರು, ಪಾಟೀಲರು, ಒಣ ಮುಕಳ್ಯಾರು ಮೇಲ್ಜಾತಿ, ಮೇಲ್ವರ್ಗವನ್ನು ಪ್ರತಿನಿಧಿಸುತ್ತಿದ್ದಾರೆ. ಕೆಳಜಾತಿಯ ಜನರ ಹಕ್ಕುಗಳನ್ನು ವಂಚಿಸಿರುವ ಮೇಲ್ವರ್ಗದ ವಿರುದ್ಧ ಕೆಳಜಾತಿಯವರ ಪ್ರತಿಭಟನೆ ಇದೆ. ಮಾದೇವ ಕೆಳಜಾತಿಯಲ್ಲಿ ಬೆಳೆದು ಶಿಕ್ಷಣ ಪಡೆದು ಕಾಲೇಜಿಗೆ ರ್‍ಯಾಂಕ್ ಬಂದಾಗ ಮೇಲ್ಜಾತಿ ಶಿಕ್ಷಕರು ಸಹಿಸಿಕೊಳ್ಳುವುದಿಲ್ಲ. ವಿದ್ಯೆ, ಬುದ್ಧಿವಂತಿಕೆ, ಪ್ರತಿಭೆ ಏನಿದ್ರು ಸವರ್ಣೀಯರಿಗೆ ಮಾತ್ರ ಎನ್ನುವ ಊಳಿಗಮಾನ್ಯಶಾಹಿ ಮೌಲ್ಯಗಳನ್ನು ಕಾದಂಬರಿಯು ಮುರಿಯುತ್ತದೆ. ಪ್ರಿನ್ಸಿಪಾಲ್ ಹೇಳಿದ್ದು 'ನೋಡ್ರೀ ಮಿರಜಕರ ದನಾಕಾಯೂ ಮಂದಿಸ್ಯೆತ ಈಗ ರ್‍ಯಾಂಕ್ ಬರ್‍ತಾ ಅದಾರ ನಮ್ಮ ಹುಡುಗರೇನ ದನಾ ಕಾಯ್ತು ಅದಾರೇನು."[೭] ಇಲ್ಲಿ ಕೆಳಜಾತಿಯ ವಿದ್ಯಾರ್ಥಿಗಳ ಮೇಲೆ ದ್ವೇಷ ಮತ್ತು ಮೇಲ್ಜಾತಿಯ

ವಿದ್ಯಾರ್ಥಿಗಳ ಮೇಲೆ ಅಸಮಾಧಾನ ಮಾಡಿಕೊಳ್ಳುವ ಪ್ರಿನ್ಸಿಪಾಲನನ್ನು ಕಾದಂಬರಿಯಲ್ಲಿ ನಿರೂಪಿಸುತ್ತದೆ.

ಮಾದೇವ ಹುಟ್ಟಿನಿಂದ ಕ್ಷತ್ರಿಯನಾದರೂ ಹೊಲೆಯರ ಕುಟುಂಬದಲ್ಲಿ ಬೆಳೆಯುತ್ತಾನೆ. ಶಿಕ್ಷಣ ಪಡೆದು ನೌಕರಿಗೆ ಸೇರಿ ಸಾಮಾಜಿಕ ಅನ್ಯಾಯವನ್ನು ಪ್ರತಿಭಟಿಸುತ್ತಾನೆ. ಪಾಟೀಲನು 'ಲಿಂಗಾಯ್ತರ ಮಂದ್ಯಾಗೂ ಬಡವರು ಇದ್ದಾರೆ, ಸರಕಾರ ನಿಮಗೆ ಕೊಟ್ಟಂಗ ಅವರಿಗೂ ಯಾಕ ಸವಲತ್ತ ಕೊಡಬಾರದು' ಎಂದಾಗ ಮಾದೇವನು ಅದನ್ನು ಒಪ್ಪುತ್ತಾನೆ. ಮತ್ತೆ ಜಾತಿಯ ಅಸಮಾನತೆಯು ನಮ್ಮವರು ಅನುಭವಿಸುವ ಹಾಗೆ ನಿಮ್ಮವರು ಅನುಭವಿಸಲು ಸಾಧ್ಯವೇನು ಎಂದು ಭಿನ್ನಾಭಿಪ್ರಾಯ ಪಡುತ್ತಾನೆ. 'ನಿಮ್ಮ ಜಾತಿ ಬಡವರು ನಮ್ಮಂಗ ಸತ್ತದನಾ ನಾಯಿ ಎಳಿತಾರೇನು? ಸಾವಿರಾರ ವರ್ಷಗಟ್ಟಲೇ ಈ ಮ್ಯಾಲೀನ ಮಂದಿ ಹೇತ ಹೇಲು ತಲಿ ಮ್ಯಾಗ ಹೊತ್ತೀವಿ. ನಿಮ್ಮ ಜಾತಿ ಬಡವರು ಹೊರತಾರೇನು? ನಿಮ್ಮ ಜಾತಿ ಬಡವರಿಗೆ ಹೋಟೆಲದಾಗ ಹೊರಗೆ ಕೂಡ್ರಿಸಿ ಚಾ ಕೊಡ್ತಾರೇನು? ಹೋಗಲಿ ನಮ್ಮೊಳಗೂ ಈಗ ಜನಾ ಕಲ್ತಾರು, ಆಫೀಸರ ಎಂ.ಎಲ್.ಎ., ಎಂ.ಪಿ. ಮಂತ್ರಿ ಆಗ್ಯಾರು. ನಿಮ್ಮ ಬಡವರು ಅವರಿಗೆ ಹೆಣ್ಣು ಕೊಟ್ಟು ಮುಂದ ನಿಂತು ಮದವಿ ಮಾಡಿಕೊಡ್ತಾರೇನು? ನಿಮಗೆ ಬೇಸಿಕಲಿ ಮನಶ್ಯಾನ ಮನಿಶ್ಯಾ ಅಂತ ಗುರ್ತುಸು ಯೋಗ್ಯತಾ ಇಲ್ಲ. ಸಮಾನತೆ ಬಗ್ಗೆ ಮಾತಾಡಾಕ ಏನ ಹಕ್ಕು ಐತಿ?"[೨] ಎಂದು ಜಾತಿಯ ಅಸ್ಪೃಶ್ಯತೆಯ ಆಚರಣೆಯನ್ನು ಜೀವಂತವಾಗಿ ಬೆಳೆಸುತ್ತಿರುವ ಆಳುವ ವರ್ಗದ ವಿರುದ್ಧ ಮಾದೇವ ಪ್ರತಿಭಟಿಸುತ್ತಾನೆ. ಆದರೆ ನಾನು ಕ್ಷತ್ರಿಯ ಕುಲದವನು ಎಂದು ತಿಳಿದಾಗ ಮೇಲ್ಜಾತಿಯವನಾಗಿ ವರ್ತಿಸುತ್ತಾನೆ. ಆದರೆ ಜಾತೀಯ ಮೌಲ್ಯಗಳನ್ನು ತೂಗಿ ನೋಡಿ ಮೂಲಸಂಸ್ಕೃತಿಗೆ ಮರಳುತ್ತಾನೆ. ಬೆಂಡಿಗೇರ ಪ್ರಕರಣದ ವಿರುದ್ಧ ಹೋರಾಟಕ್ಕೆ ಮುಂದಾಗುತ್ತಾನೆ. ಹೀಗೆ ಜಾತಿ ಮತ್ತು ವರ್ಗ ಶೋಷಣೆಯ ವಿರುದ್ಧ ಕಾದಂಬರಿಯಲ್ಲಿ ದುಡಿಯುವ ಪಾತ್ರಗಳು ಮಾತನಾಡುತ್ತವೆ.

ಬಿ.ಟಿ. ಲಲಿತಾನಾಯಕ್ ಅವರ 'ಗತಿ' ಕಾದಂಬರಿಯಲ್ಲಿ ಮೇಲ್ಜಾತಿಯಾದ ಪುರೋಹಿತಶಾಹಿ ವರ್ಗವು ಕೆಳಜಾತಿಯ ದಲಿತ ಸಮುದಾಯವನ್ನು ಶೋಷಣೆಗೆ ಮಾಡುವುದನ್ನು ಗುರುತಿಸುತ್ತದೆ. ದಿನದ ಹೊಟ್ಟೆಪಾಡಿಗಾಗಿಯೇ ಒದ್ದಾಡುವ ಸ್ಥಿತಿಯಲ್ಲಿರುವ ಲಂಬಾಣಿ ಸಮುದಾಯ ನಂಬಿಕೆ, ಆಚರಣೆಯ ಹೆಸರಲ್ಲಿ ಶೋಷಣೆಗೆ ಒಳಗಾಗುತ್ತಿದ್ದಾರೆ. ಪೂಜಾರಿ ಕಾಶಪ್ಪನೂ ಲಂಬಾಣಿ ಜಾತಿಗೆ ಸೇರಿದವನು. ಆತನ ಜೀವನೋಪಾಯವು ಸೇವಾಲಾಲ್ ಮತ್ತು ಮರಿಯಮ್ಮ ದೇವತೆಗಳ ಆರಾಧನೆಯನ್ನು ಮಾಡಿಸುವ ವೃತ್ತಿ. ಊರಿನಲ್ಲಿ ಯಾರಿಗೆ ಏನೇ ಕಷ್ಟಗಳು ಎದುರಾದರೂ ಹೂ ಬೇಡುವುದು, ಮಣಿ ಹಾಕಿಸುವುದು ಮುಂತಾದ ಹರಕೆ ಸಲ್ಲಿಸುವಂತೆ ಒತ್ತಾಯಿಸುತ್ತಾನೆ ಮತ್ತು ದೇವಿವಾಣಿಯನ್ನು ಹೇಳುವ ಮೂಲಕ ವೈದಿಕ ಸಂಸ್ಕೃತಿಯನ್ನು ಗಟ್ಟಿಗೊಳಿಸುತ್ತ ಜನರು ನೀಡುವ ಕಾಣಿಕೆ ಇತ್ಯಾದಿಗಳನ್ನು ಪಡೆದು ಜೀವಿಸುತ್ತಾನೆ. ಹಾಗೆಯೇ ಸವರ್ಣೀಯರಿಂದ ಲೈಂಗಿಕ ಶೋಷಣೆಗೆ ಒಳಗಾದವರು ಈ ಕೆಳಜಾತಿ ಮಹಿಳೆಯರು. ದಲಿತ ಮಹಿಳೆಯರು

ಶೋಷಕ ವರ್ಗದ ಮೇಲ್ಜಾತಿಯವರು ಮತ್ತು ಅವರ ಕುಟುಂಬದ ಒಳಗಿನವರಿಂದ ಶೋಷಣೆಗೆ ಒಳಗಾಗುತ್ತಾಳೆ. ಸೋನಿ ಒಂಟಿಯಾಗಿ ವಾಸಿಸ ಹತ್ತಿದಾಗ ಗುಡಿಯ ಪೂಜಾರಿ ಅವಳನ್ನು ಊರ ಚೇರಮನ್ ದೊಣ್ಣೆಗೆ 'ಮಾರಲು' ಹೊಂಚು ಹಾಕುತ್ತಾನೆ. ಹೀಗೆ ಪುರುಷಪ್ರಧಾನ ಸಮಾಜದ ಗೊಡ್ಡು ಸಂಪ್ರದಾಯಗಳು. ಕಂದಾಚಾರ ಪದ್ಧತಿಗಳು, ಜೀವವಿರೋಧಿ ಮೂಢ ನಂಬಿಕೆಗಳು, ದೇವರು-ಧರ್ಮದ ಹೆಸರಲ್ಲಿ ಶೋಷಿಸುವ ಪುರೋಹಿತಶಾಹಿಗಳ ವಿರುದ್ಧ ಚಿತ್ರಣವಿದೆ. ಈ ಕೆಳಜಾತಿ ಜನರ ಅನಕ್ಷರತೆ, ಬಡತನ, ದಾರಿದ್ರ್ಯಕ್ಕೆ ಈ ಮೇಲ್ಜಾತಿಯ ಈ ಆಚರಣೆಗಳೇ ಕಾರಣ ಎನ್ನುವ ನಿಲುವನ್ನು ತಾಳುತ್ತದೆ.

ಹೀಗೆ ಸಾಹಿತ್ಯ ಕೃತಿಗಳಲ್ಲಿ ಸಮಾಜದಲ್ಲಿ ಇರುವ ಜಾತಿ ಶ್ರೇಣೀಕರಣ ಜಾತೀಯತೆ, ಜಾತಿ ಸಮಸ್ಯೆ, ಅಸ್ಪೃಶ್ಯತೆಗಳ ಕುರಿತು ಚರ್ಚಿಸಿವೆ. ಆಳುವ ವರ್ಗಗಳು ಸಂಪತ್ತಿನ ಒಡೆತವನ್ನು ಭದ್ರಗೊಳಿಸಲು ಕೆಳಜಾತಿಯ ಜನರನ್ನು ಜಾತಿಯ ಹೆಸರಲ್ಲಿ ಅಪಮಾನಗೊಳಿಸುವುದು, ವೃತ್ತಿಯನ್ನು ಕೀಳಾಗಿ ಕಾಣುವುದು, ಶ್ರಮಮೌಲ್ಯ ಶೋಷಣೆ ಮಾಡುವುದು, ಅವರನ್ನು ಅಸಹಾಯಕರಾಗಿ ಮಾಡುವುದು ಮೇಲ್ವರ್ಗದ ರಾಜಕೀಯ ಧೋರಣೆಯಾಗಿದೆ. ಕಾದಂಬರಿಗಳಲ್ಲಿ ಕೆಳಜಾತಿಗಳನ್ನು ಮೇಲ್ಜಾತಿಯವರ ಅಧೀನದಲ್ಲಿ ಇರುವ ಹಾಗೆ ಚಿತ್ರಿಸಿದ್ದಾರೆ.

ಚೋಮ, ನಾಯಿಗುತ್ತಿ, ಕಾಳ, ಭೂಹೀನರಾಗಿ ಮೇಲ್ವರ್ಗದ ಅಧೀನದಲ್ಲಿ ಜೀತಗಾರರಾಗಿ ದುಡಿದರೆ, ಪಿಳ್ಳ, ದಿಬ್ಬ, ಮಾದೇವ ಶಿಕ್ಷಣ ಕಲಿತರೂ ಕೂಡ ಅವರು ಮೇಲ್ವರ್ಗದ ಶೋಷಣೆಗೆ ಒಳಗಾಗುತ್ತಿದ್ದಾರೆ. ಒಟ್ಟಾರೆ ಕೆಳವರ್ಗದ ಜನರನ್ನು ಆರ್ಥಿಕ ಅಸಮಾನತೆ ಮತ್ತು ಜಾತಿಯಲ್ಲಿ ಕೀಳಾಗಿ ಚಿತ್ರಿಸಿರುವುದರಿಂದ ಇವರು ಶೋಷಣೆಗೆ ಒಳಗಾಗುತ್ತಿದ್ದಾರೆ ಎಂದು ಕಾದಂಬರಿಯ ಸಾಹಿತ್ಯ ಅಭಿವ್ಯಕ್ತಿಸಿದೆ. ಈ ವರ್ಗ ಅಸಮಾನತೆ ಮತ್ತು ಜಾತಿಯ ಅಸಮಾನತೆಗೆ ಮೂಲಕಾರಣ ಸಂಪತ್ತಿನ ಅಸಮಾನತೆಯಾಗಿದೆ. ಸಂಪತ್ತಿನ ಒಡೆತನವು ಕೆಳಜಾತಿಯ ಜನರಿಗೂ ಸಿಗಬೇಕು ಎಂಬುದು ಅನೇಕ ಕಾದಂಬರಿಗಳ ಆಳದಲ್ಲಿ ಇರುವ ದುಡಿಯುವ ವರ್ಗದ ಆಲೋಚನೆಯಾಗಿದೆ.

### ೨.೩.೩. ಬಡತನ ಮತ್ತು ಹಸಿವಿನ ನೆಲೆ

ಬಡತನ ಮತ್ತು ಹಸಿವಿಗೆ ಒಂದಕ್ಕೊಂದು ಸಂಬಂಧವಿದೆ. ಅದೇ ರೀತಿಯಲ್ಲಿ ಬಡತನ ಮತ್ತು ಶ್ರೀಮಂತಿರಿಗೂ ಸಂಬಂಧವಿದೆ. ಶ್ರೀಮಂತರಾಗಿದ್ದಾರೆ ಎಂದಾಗ ಬಡವರನ್ನು ಶೋಷಣೆ ಮಾಡಿದ್ದಾರೆ ಎಂದರ್ಥ. ಹಸಿವು ಮತ್ತು ಬಡತನದ ಸಮಸ್ಯೆಯು ಊಳಿಗಮಾನ್ಯ ಸಮಾಜದ ಉತ್ಪನ್ನಗಳು. ಸಂಪತ್ತಿನ ಅಸಮಾನ ಹಂಚಿಕೆಯ ಜೊತೆಜೊತೆಗೆ ಈ ಸಮಸ್ಯೆಯು ಬೆಳೆಯುತ್ತಾ ಬಂದಿದೆ. ಸಂಪತ್ತಿನ ಒಡೆತನದ ಹಕ್ಕನ್ನು ಹೊಂದಿರುವ ವರ್ಗವು ಭೂಮಾಲೀಕ ವರ್ಗವಾಗಿ, ಬಂಡವಾಳಶಾಹಿ ವರ್ಗವಾಗಿದೆ. ಹಾಗೆಯೇ ಈ ವರ್ಗಗಳು ಆಳುವ ವರ್ಗಗಳಾಗಿ ಪರಿವರ್ತನೆ ಆಗಿವೆ. ಈ ವರ್ಗಗಳು ದುಡಿಯುವ ಜನರ ಹಕ್ಕುಗಳನ್ನು ವಂಚಿಸಿರುವುದರಿಂದ ಸಂಪತ್ತಿನ ಒಡೆತನವನ್ನು ಹೊಂದಿದ್ದಾರೆ. ಇವರು ಸಮಾಜದ ರಚನೆಯನ್ನು ಜಾತಿ ಶ್ರೇಣೀಕರಣ ಮತ್ತು

ವರ್ಗಶ್ರೇಣೀಕರಣಗಳಾಗಿ ವಿಭಾಗಿಸುತ್ತಿರುತ್ತಾರೆ. ಕೆಳಜಾತಿಯ ಬಡವರು ಜಾತಿಶೋಷಣೆ, ವರ್ಗಶೋಷಣೆಯ ಜೊತೆಯಲ್ಲಿ ಬಡತನ, ಹಸಿವು, ಅಪಮಾನಗಳನ್ನು ಅನುಭವಿಸಿದರೆ ಮೇಲ್ಜಾತಿಯ ಬಡವರು ವರ್ಗಶೋಷಣೆಯ ಜೊತೆಯಲ್ಲಿ ಬಡತನ ಹಸಿವಿನ ಸಮಸ್ಯೆಯನ್ನು ಎದುರಿಸುತ್ತಾರೆ.

ಹಸಿವು ಮತ್ತು ಬಡತನದ ಸಮಸ್ಯೆ ಕೆಳವರ್ಗದವರಲ್ಲಿದೆ. ಮೇಲ್ವರ್ಗವು ಇವರ ಹಕ್ಕುಗಳನ್ನು ಕಿತ್ತುಕೊಂಡು, ಅವರಿಗೆ ದುಡಿದ ಕೂಲಿಯನ್ನು ಸರಿಯಾಗಿ ಕೊಡದೆ ವಂಚಿಸಿರುವುದು ಮೂಲ ಕಾರಣವಾಗಿದೆ. ಹಾಗೆಯೇ ದುಡಿಮೆ ಮಾಡಲು ಶ್ರಮಿಕರು ತಯಾರೆದ್ದರು. ಅವರಿಗೆ ಕೆಲಸ ಸಿಗದೆ ಇರುವಂತ ಸ್ಥಿತಿಯಿದೆ. ದುಡಿದ ದುಡಿಮೆಗೆ ಸರಿಯಾದ ಮೌಲ್ಯವಿಲ್ಲದೆ ಶ್ರಮಮೌಲ್ಯ ಶೋಷಣೆ ಮಾಡುವ ಆಳುವ ವರ್ಗದಿಂದ ಈ ಪರಿಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ಆಹಾರ ಪ್ರಶ್ನೆ ಮಾತ್ರವಲ್ಲ, ದಿನನಿತ್ಯದ ಅಗತ್ಯ ವಸ್ತುಗಳನ್ನು ಖರೀದಿಸಲು ಸಾಧ್ಯವಾಗದ ಸ್ಥಿತಿಯು ನಿರ್ಮಾಣವಾಗಿದೆ. ಹೀಗೆ ಆರ್ಥಿಕ ಅಸಮಾನತೆಯು ಈ ಸಮಸ್ಯೆಗೆ ಮೂಲಕಾರಣ. ಬಂಡವಾಳ ಮತ್ತು ಭೂಮಿಯ ಒಡೆತನ ಮೇಲ್ವರ್ಗದ ವಶದಲ್ಲಿದೆ. ಆದರೆ ದುಡಿಯುವ ಜನರಿಗೆ ಭೂಮಿಯ ಹಕ್ಕಿಲ್ಲ. ಅದರಿಂದ ಇವರು ಕೃಷಿ, ಕೈಗಾರಿಕೆಗಳಲ್ಲಿ ಕೆಲಸ ಮಾಡುವುದೇ ಅವರ ಜೀವನ ನಡೆಸಲು ದಾರಿ. ಆದರೆ ದುಡಿದ ಶ್ರಮಿಕರನ್ನು ಮೇಲ್ವರ್ಗದ ಜಾತಿ, ಧರ್ಮ, ಅಸಮಾನತೆಯ ಹೆಸರಲ್ಲಿ ವಿಭಾಗಿಸಿ ಆಳುತ್ತದೆ. ಶ್ರೀಮಂತ-ಬಡವ ಎಂಬ ವರ್ಗತಾರತಮ್ಯ ಇರುವುದು ಸಂಪತ್ತಿನ ಅಸಮಾನತೆಯಿಂದ ಎಂಬ ಸತ್ಯಾಂಶವನ್ನು ಮರೆಮಾಚಲು ಸಮಾಜವನ್ನು ತನ್ನ ಹಿತಾಸಕ್ತಿಗೆ ರೂಪಿಸಿಕೊಳ್ಳುತ್ತದೆ. ದುಡಿಮೆಯನ್ನು ಕೀಳಾಗಿ ಪರಿಭಾವಿಸುವುದು. ಜಾತಿಯ ಹಿತಾಸಕ್ತಿಗೆ ಅನುಗುಣವಾಗಿ ಕೆಲಸ ಕೊಡುವುದು. ದುಡಿಯದ ಜನರು ಸೋಮಾರಿಗಳು ಎಂದು ಹೇಳಿ ನಿರುದ್ಯೋಗವನ್ನು ಸೃಷ್ಟಿಸುವುದು ಮಾರುಕಟ್ಟೆ ಶಕ್ತಿ ಮತ್ತು ಆಳುವ ವರ್ಗದ ಆಲೋಚನೆಯನ್ನು ಅಭಿವೃದ್ಧಿಗೊಳಿಸುತ್ತದೆ. ಸಮಾಜದಲ್ಲಿ ಮಾಲೀಕ ವರ್ಗವು ಶ್ರಮಜೀವಿಯ ಶ್ರಮಮೌಲ್ಯವನ್ನು ಅನ್ಯಾಯವಾಗಿ ದೋಚುವ ಮೂಲಕ ಶ್ರೀಮಂತವಾಗಿದೆ. ಶ್ರಮಜೀವಿಯು ತನ್ನ ಶ್ರಮಮೌಲ್ಯವನ್ನು ಅನ್ಯಾಯವಾಗಿ ಮಾಲೀಕನಿಗೆ ಬಿಟ್ಟುಕೊಡುವ ಮೂಲಕ ಬಡವನಾಗಿದ್ದಾನೆ. ಶ್ರೀಮಂತನು ಹೆಚ್ಚು ದುಡಿಯುವವರ ಶ್ರಮವನ್ನು ದೋಚಿ ಶ್ರೀಮಂತನಾಗುತ್ತಾ ಹೋಗುತ್ತಾನೆ. ಇದಕ್ಕೆ ವಿರುದ್ಧವಾಗಿ ಕೆಲಸ ಮಾಡುವವರು ಹೆಚ್ಚು ಹೆಚ್ಚು ಬಡವರಾಗುತ್ತಾ ಹೋಗುತ್ತಾರೆ.

ಒಂದು ಸಮಾಜದಲ್ಲಿ ಸಿರಿತನವಿದೆ ಎಂದರೆ ಅಲ್ಲಿ ಬಡವರ ಸುಲಿಗೆ ಇದೆ ಎಂದು ಅರ್ಥ. ಒಂದು ಸಮಾಜದಲ್ಲಿ ಬಡವರಿದ್ದಾರೆ ಎಂದರೆ, ಅಲ್ಲಿ ಸುಲಿಗೆ ಮಾಡುವ ಶ್ರೀಮಂತರಿದ್ದಾರೆ ಎಂದು ಅರ್ಥ.[೪೩] ಇಲ್ಲಿ ಸಂಪತ್ತು ಮತ್ತು ಅಧಿಕಾರದ ವಂಚನೆಯ ಫಲಿತಗಳಿಂದ ಹಸಿವು ಹುಟ್ಟಿಕೊಂಡಿದೆ. ಕನ್ನಡ ಕಾದಂಬರಿಗಳು ಈ ವಸ್ತುವಿಷಯವನ್ನು ಗ್ರಹಿಸಿರುವ ಮತ್ತು ಅಭಿವ್ಯಕ್ತಿಸಿರುವ ಕ್ರಮವನ್ನು ಚರ್ಚಿಸಲಾಗುವುದು.

ಶಿವರಾಮ ಕಾರಂತ ಅವರ 'ಚೋಮನ ದುಡಿ'ಯಲ್ಲಿ ಚೋಮನ ಕುಟುಂಬ ಬಡತನ, ಹಸಿವಿನಿಂದ ಅತ್ಯಂತ ಅಸಹಾಯಕತೆ ನೋವಿನಿಂದ ಬದುಕಿದೆ. ಊಳಿಗಮಾನ್ಯ ಸಮಾಜ ಸಂದರ್ಭದಲ್ಲಿ ಕೆಳವರ್ಗದವರು ಹೇಗೆ ಬದುಕನ್ನು ನಿರ್ವಹಿಸುತ್ತಿದ್ದರು ಎಂಬುದಕ್ಕೆ 'ಚೋಮನ ದುಡಿ' ಉತ್ತಮ ಉದಾಹರಣೆ. 'ಜಾತ್ರೆ ಸಕಲರಿಗೆ ಉತ್ಸಾಹದ ಹಬ್ಬವಾಗಿದ್ದರೂ ಚೋಮನ ಮನೆಯಲ್ಲಿ ಊಟ ಮಾಡಲು ಅನ್ನದ ಅಗುಳಿಲ್ಲ. ಒಮ್ಮೆ ಚೋಮನ ಮಗ ತೋಟಕ್ಕೆ ಕೆಲಸಕ್ಕೆ ಹೋದವನು ಆರು ತಿಂಗಳ ನಂತರ ಮನೆಗೆ ಮರಳಿದ್ದ. ಅಂದು ರಾತ್ರಿ ಚೋಮನಿಗೂ ಮಗನ ಮೋರೆ ನೋಡುವ ತವಕ. ಆದರೆ ದೀಪವಿಲ್ಲ. ಬೆಳ್ಳಿ ಒಲೆಯಲ್ಲಿ ಬೆಂಕಿ ಇದೆಯೇ ಎಂದು ಊದಿ ನೋಡಿದಳು ಎಲ್ಲಾ ಬೂದಿ. ಚೋಮ ಕತ್ತಲೆಯಲ್ಲಿ ಕೈ ಆಡಿಸಿ ಕೈ ಹಿಡಿದು ಚನಿಯನೇನೊ'[99] ಎಂದು ಕೇಳಿ ಸಂತೋಷಪಡುತ್ತಾನೆ. ಮನೆಯವರೆಲ್ಲರೂ ಒಟ್ಟಾಗಿ ಶ್ರಮಿಸಿ ದುಡಿದರೆ ಎರಡು ಪಾವು ಅಕ್ಕಿ ಮತ್ತು ಐದು ಪಾವು ಭತ್ತ ದೊರೆಯುತ್ತದೆ. ಇದು ಅವರಿಗೆ ಹೊಟ್ಟೆ ತುಂಬುವಷ್ಟು ಸಾಕಾಗುತ್ತಿರಲಿಲ್ಲ ಎಂದಾಗ ಅವರ ಕೂಲಿಯನ್ನು ಮಾಲೀಕ ವರ್ಗ ಕದಿಯುವುದು ಸ್ಪಷ್ಟವಾಗುತ್ತದೆ. ಒಂದು ಕಡೆ ಭೂಮಿಯಿಂದ ವಂಚಿಸಿರುವ ಭೂಮಾಲೀಕ ವರ್ಗ, ಮತ್ತೊಂದು ಕಡೆ ಅವರು ದುಡಿದ ದುಡಿಮೆಗೆ ಸರಿಯಾಗಿ ಪ್ರತಿಫಲ ಕೊಡದೆ ಶ್ರಮ ಮೌಲ್ಯ ಶೋಷಣೆ ಮಾಡುವ ಆಳುವ ವರ್ಗದ ಶೋಷಣೆಯಿಂದ ದುಡಿಯುವ ಜನರು ಹಸಿವು, ಬಡತನವನ್ನು ಎದುರಿಸುತ್ತಿರುವ ಚಿತ್ರಣವನ್ನು ಕಾದಂಬರಿ ಧ್ವನಿಸುತ್ತದೆ.

ಕುಡಿಯರ ಕೂಸು ಕಾದಂಬರಿಯಲ್ಲಿ ಕುಡಿಯ ಸಮುದಾಯ ಆಧುನಿಕತೆಯ ಪ್ರವೇಶ ಆಗುವುದಕ್ಕೂ ಮುಂಚೆ ಕಾಡಿನ ಮಧ್ಯದಲ್ಲಿ ಸ್ವತಂತ್ರವಾದ ಜೀವನ ಕಟ್ಟಿಕೊಂಡಿತು. ಸಾಮೂಹಿಕ ದುಡಿಮೆ ಅವರ ಮುಖ್ಯವಾದ ಕಸುಬು. ಆದರೆ ಹೀಗೆ ಈ ಪ್ರದೇಶಗಳಿಗೆ ಮೇಲ್ವರ್ಗದ ಭೂಮಾಲೀಕರು ಏಲಕ್ಕಿ ಕೃಷಿಯನ್ನು ವಿಸ್ತರಿಸಿ ಇವರನ್ನು ಜೀತದ ಆಳುಗಳಾಗಿ ದುಡಿಸಿ ಕೊಳ್ಳುತ್ತಿದ್ದಾರೆ. ನಾಲ್ಕು ತಿಂಗಳ ಕಾಲ ದುಡಿದರೂ ವರ್ಷಕ್ಕೊಂದು ಬಟ್ಟೆ ಉಪ್ಪು ಕೊಡುತ್ತಿದ್ದರು. ಉಳಿದಂತೆ ಅರಣ್ಯ ಸಂಪತ್ತು ಕೃಷಿಯಲ್ಲಿ ದುಡಿಯುವ ಈ ಕುಡಿಯರ ಹಕ್ಕುಗಳನ್ನು ವಂಚಿಸಿರುವ ಆಳುವ ವರ್ಗವು ಅವರನ್ನು ಶೋಷಣೆಯಿಂದಲೇ ನಡೆಸಿಕೊಂಡು ಬಂದಿದೆ. ಅದು ಆಧುನಿಕ ಸಂದರ್ಭಕ್ಕೂ ಅನ್ವಯವಾಗುವಂತಹ ಆಳುವ ವರ್ಗ ರಾಜಕೀಯ ಧೋರಣೆ ಕಾದಂಬರಿಯಿಂದ ತಿಳಿದುಬರುತ್ತದೆ.

'ಗ್ರಾಮಯಣ'ದಲ್ಲಿ ಆಳುವ ವರ್ಗದ ವರ್ಗವೈರುಧ್ಯತೆಯು ದುಡಿಯುವ ಜನರ ಮೇಲೆ ಪರಿಣಾಮವನ್ನು ಬೀರಿದೆ. ಇಡೀ 'ಪಾದಳ್ಳಿ' ಭೂಮಿ ಮೇಲ್ವರ್ಗದವರದು. ಅಲ್ಲಿ ಭೂಮಿಯಲ್ಲಿ ದುಡಿಯುವ ಕೃಷಿ ಕಾರ್ಮಿಕರಿಗೆ ಹೀಗೆ ದುಡಿಮೆ ಇಲ್ಲ. ವಾಡೆ, ಮಠ, ಗೌಡರ ಮನೆಯಲ್ಲಿ ನಡೆಯುವ ರಾಜಕೀಯ ಕಲಹದಲ್ಲಿ ಮೇಲ್ವರ್ಗದ ಹಿತಾಸಕ್ತಿಗಾಗಿ ದುಡಿಯುತ್ತಿದ್ದಾರೆ. ಆಹಾರದ ಕೊರತೆ ಎದುರಾಗುತ್ತದೆ. ಆದರೆ ಈ ಹಸಿವು, ಸಿಟ್ಟು ತನ್ನ ವರ್ಗಹಿತಾಸಕ್ತಿಗೆ ಧಕ್ಕೆ ಬರುವ ಹಾಗೆ ಕಾಣಿಸುತ್ತಿರುವಾಗ ಈ ಹಸಿವಿನ ಹೋರಾಟವನ್ನು ವರ್ಗಹೋರಾಟವಾಗಿ ಪರಿವರ್ತನೆ

ಆಗಬಾರದು ಎಂದು ಈ ಹೋರಾಟವನ್ನು ಆಳುವ ವರ್ಗವು ನಾಶ ಮಾಡುವುದನ್ನು ಕಾದಂಬರಿಯಲ್ಲಿ ಕಾಣಬಹುದು.

'ಬಾಳ್ಯಾ ಇದ್ದ ಚಪ್ಪರದ ಹತ್ತಿರ ಹರಕು ತಟ್ಟಿನ ಮೇಲೆ ಬಿದ್ದಿದ್ದ ಆ ಮಕ್ಕಳು, ಬಾಣಂತಿ ಎಲುಬಿನ ಹಂದರವಾಗಿದ್ದ ಆ ಬಾಳ್ಯಾ, ಚಂದ್ರಿಯ ಗುಡಿಸಲ ವರ್ಣನೆ ನಿನ್ನನ ದಿನಾ ಊರಾಗ ಹೆಣಾ ಇಟಗೊಂಡ ಕುಂತಾಗ ನಾವು ಬರಬಾರದಂತ ಬಿಟ್ಟೇವರಿ ಎಪ್ಪಾ ಅಮಾಸಿಯಂಥಾ ಅಮಾಸಿ; ಬಾಯಾಗ ತುಣುಕ ರೊಟ್ಟಿ ಹಾಕಿಲ್ಲ. ಕಾಳ ಕೊಡಬೇಕು ಎಂದು ಹಟ ಹಿಡಿದ ಆ ಆಕ್ರೋಶ, ಹಟಮಾರಿತನ, ಕ್ರೋಧ ಇವುಗಳ ಹಿಂದೆ ಕಲ್ಲೆದೆಯನ್ನು ಕರಗಿಸುವ ಕರುಣೆ ಮಿಡಿಯುತ್ತಿತ್ತು'.[೪೫] ಇಲ್ಲಿ ದುಡಿಯುವ ಜನರ ಹಸಿವು ಮತ್ತು ಪ್ರತಿಭಟನೆ ಇದೆ. ಆದರೆ ವಿಷ ಆಹಾರ ವಿತರಿಸಿ ಈ ದುಡಿಯುವ ಜನರ ಸಾವಿಗೆ ಆಳುವ ವರ್ಗ ತಂತ್ರ ರೂಪಿಸುವ ಕ್ರೂರವಾದ ಮನಸ್ಥಿತಿ ಇಲ್ಲಿ ನಿರೂಪಣೆಯಾಗಿದೆ. ಒಟ್ಟಾರೆ ಕಾದಂಬರಿಯಲ್ಲಿ ಆಳುವ ವರ್ಗವ ತನ್ನ ಅಸ್ತಿತ್ವಕ್ಕಾಗಿ ರೂಪಿಸುವು ಎಲ್ಲಾ ಯೋಜನೆಗಳು ದುಡಿಯುವ ವರ್ಗದ ಮೇಲೆ ಪರಿಣಾಮ ಬೀರುವುದನ್ನು ಕಾಣಬಹುದು.

ನಿರಂಜನರ 'ಚಿರಸ್ಮರಣೆ'ಯಲ್ಲಿ ಊಳಿಗಮಾನ್ಯಶಾಹಿ ವ್ಯವಸ್ಥೆ ಮತ್ತು ಬಂಡವಾಳಶಾಹಿ ವ್ಯವಸ್ಥೆಯು ರೈತ ಕಾರ್ಮಿಕರ ಹಕ್ಕುಗಳನ್ನು ಅಕ್ರಮವಾಗಿ ಕಿತ್ತುಕೊಂಡು ಇವರನ್ನು ಶೋಷಣೆ ಮಾಡುವ ಆಳುವ ವರ್ಗದ ವಿರುದ್ಧ ದುಡಿಯುವ ವರ್ಗದ ವರ್ಗಹೋರಾಟವನ್ನು ಗುರುತಿಸಬಹುದು. ನಂಬಿಯಾರ್, ನಂಬೂದರಿ ಭೂಮಾಲೀಕರು, ದುಡಿಯುವ ಜನರನ್ನು ವರ್ಗಶೋಷಣೆ ಮಾಡುತ್ತ ಶ್ರೀಮಂತರಾಗಿ ಬೆಳದಿದ್ದಾರೆ. ಈ ವರ್ಗಶೋಷಣೆಯಿಂದ ರೈತ ಕಾರ್ಮಿಕ ಎಚ್ಚರಗೊಂಡು ಕ್ರಾಂತಿಕಾರಿ ಸಂಘ ಸೇರುವುದು ತನ್ನ ವರ್ಗಹಿತಾಸಕ್ತಿ ವಿರುದ್ಧವಾದುದು ಎಂದು ಹೋರಾಟಗಾರರ ಮೇಲೆ ದಾಳಿ ಮಾಡಿಸುತ್ತಾರೆ. ಹೀಗೆ ಭೂಮಾಲೀಕರು ಶ್ರೀಮಂತರಾಗುತ್ತ ಹೋಗುವುದರಿಂದ ಬಡವರು ಇನ್ನಷ್ಟು ಬಡತನಕ್ಕೆ ಬೀಳುವರು. ದುಡಿದು ತಿನ್ನುವ ಸ್ವಾಭಾವಿಕ ಚಟುವಟಿಕೆಯನ್ನು ಆಳುವ ವರ್ಗ ವಶಪಡಿಸಿಕೊಳ್ಳುವುದನ್ನು ಕಾದಂಬರಿ ಚಿತ್ರಿಸುತ್ತದೆ. ಈ ಮೇಲ್ವರ್ಗದ ವರ್ಗಶೋಷಣೆಯ ಪರಿಣಾಮವೇ ಹಸಿವು ಮತ್ತು ಬಡತನವನ್ನು ಜನಸಾಮಾನ್ಯರು ಅನುಭವಿಸುತ್ತಾರೆ ಎಂದು ಕಾದಂಬರಿಯ ಅಭಿವ್ಯಕ್ತಿಸುತ್ತದೆ.

'ಒಡಲಾಳ'ದಲ್ಲಿ ಎತ್ತಪ್ಪ ಸಾಕವ್ವನ ಹಕ್ಕನ್ನು ಕಿತ್ತುಕೊಂಡು ಶ್ರೀಮಂತನಾಗಿದ್ದಾನೆ. ಮತ್ತೆ ಕಡಲೆಕಾಯಿ ಆರೋಪವನ್ನು ಮಾಡುವುದರ ಮೂಲಕ ಸಾಕವ್ವನ ಕುಟುಂಬವನ್ನು ಹಸಿವು ಬಡತನಕ್ಕೆ ತಳ್ಳುವ ಚಿತ್ರಣ ಇದೆ. ಇಲ್ಲಿ ಕಡಲೆಕಾಯಿಯು ಇಡೀ ಕುಟುಂಬಕ್ಕೆ ಜೀವಂತಿಕೆಯನ್ನು ನೀಡುತ್ತದೆ. 'ನಿಮ್ಗ ಉಣ್ಣಾಕ ಬಾನಿಂದ ಇಳ್ದು ಬಂದದಾ'[೪೬] ಎನ್ನುವುದು ಅವರ ಬಡತನದ ಸೂಚನೆಯಾಗಿದೆ. 'ಅತ್ಗಮೋರೆ ನನ್ಗಂಡ ಅಸ್ಕಂಡ ಅಳ್ತ ಮಲಗದೆ. ಮೂರು ಜಿನದಿಂದಲೂ ಕಳಕಂಬಳಕ್ಕೆ ಕರೆಯೋರು ಯಾರು ದಿಕ್ಕಿಲ್ಲ, ಏನಾರು ಇದ್ರ ಒಂದಿಷ್ಟು ಕೊಡಿ ಎಂದಿತ್ತು'.[೪೭]

ಈ ಕಾಳಕ್ಕನ ಮಾತಿನಿಂದ ಹಸಿವಿನ ಸಂಕಟವನ್ನು ಕಾದಂಬರಿ ಗುರುತಿಸುತ್ತದೆ. ಈ ಹಸಿವು, ಬಡತನ ಸಮಸ್ಯೆಯ ವಿರುದ್ಧ ದುಡಿಯುವ ಜನರು ಎಚ್ಚರವಾಗುವುದನ್ನು ಕಾಣಬಹುದು. "ಎತ್ತಪ್ಪನೇನ ದುಡುದು ಬೆವರಿಳಿಸಿ ರಗತ ಬಸುದು ಸಂಪಾದ್ನ ಮಾಡಿದ್ದನ ತಗಾ ಹೋದ್ರ ಅವನ್ದೇ ನೋಡ್ದು ಗುಡ್ಡ ಹಾಕಿರೊ ಬಡ್ಡಿ ದುಡ್ಡಲ್ಲಿ ಸಿವುರುಕನ"[೪೮] ಎಂದು ಕಾಳಣ್ಣ ಹೇಳುವುದು ಜಾಗೃತಿಯ ಸಂಕೇತವಾಗಿದೆ. ಇಲ್ಲಿ ಆಳುವ ವರ್ಗದ ವರ್ಗಶೋಷಣೆಯನ್ನು ಚಿತ್ರಿಸುತ್ತವೆ. ಅವರ ದಾಳಿಯ ವಿರುದ್ಧ ಎಚ್ಚರವಾಗುತ್ತಿರುವ ದಲಿತ ಕುಟುಂಬಗಳ ಚರಿತ್ರೆಯನ್ನು ಕಾದಂಬರಿಯು ಕಟ್ಟಿಕೊಡುತ್ತದೆ.

ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯು ದಲಿತ ಸಮುದಾಯದವರು ಹಸಿವಿನಿಂದ ಇರುವುದಕ್ಕೆ ಮೇಲ್ವರ್ಗವೇ ಕಾರಣ ಎಂಬ ನಿಲುವನ್ನು ತಾಳುತ್ತದೆ. ಖಂಡೋಬಾ ಭಯಂಕರ ಬಡತನದಲ್ಲಿ ಬೆಂದು ವಾರಗಟ್ಟಲೇ ಉಪವಾಸ ಇದ್ದು ಮಾದೇವನನ್ನು ಸಾಕಿದ್ದು, ಸುಮತಿ, ರಾಮಕ್ಕ ಕೂಲಿ ಕೆಲಸಕ್ಕೆ ಹೋಗುವುದು ಕಾಣುತ್ತೇವೆ. 'ಮಾದೇವ' ಶಿಕ್ಷಣ ಕಲಿತ ನೌಕರಿ ಪಡೆದುಕೊಂಡರು. ಮೇಲ್ಜಾತಿಯ ಶೋಷಣೆ ತಪ್ಪಲಿಲ್ಲ. ಈ ಮೇಲ್ವರ್ಗದ ಶೋಷಣೆಯ ವಿರುದ್ಧ ಮಾದೇವ ಹೋರಾಡುತ್ತಾನೆ. ತನ್ನ ವರ್ಗದ ಹಸಿವಿಗೆ, ಅಪಮಾನಕ್ಕೆ ಕಾರಣವಾದ ಆಳುವ ವರ್ಗ ನಾಶವಾಗಬೇಕು ಎಂಬುದು ಕಾದಂಬರಿಯ ಆಳವಾದ ಆಲೋಚನೆ, ದಲಿತ ಸಮುದಾಯ ಮತ್ತು ಆಳುವ ವರ್ಗದ ಸಾಂಸ್ಕೃತಿಕ ಸಂಘರ್ಷ ಕಾದಂಬರಿಯ ಕೇಂದ್ರಬಿಂದುವಾಗಿ ನಿರೂಪಣೆಗೊಂಡಿದೆ. ಮಾದೇವ ಪರಸಂಸ್ಕೃತಿ ಪ್ರವೇಶ ಮಾಡಿ ಮತ್ತೆ ಮೂಲಸಂಸ್ಕೃತಿಗೆ ಬರುವುದು ಕಾದಂಬರಿಯಲ್ಲಿ ಮನುಷ್ಯತ್ವದ ಬೆಳವಣಿಗೆಗೆ ಶಕ್ತಿ ತುಂಬುವುದಾಗಿದೆ.

ಒಟ್ಟಾರೆ ಕನ್ನಡ ಕಾದಂಬರಿಗಳು ಹಸಿವು ಮತ್ತು ಬಡತನದ ವಸ್ತುವನ್ನು ಮೂಲಭೂತ ಸಮಸ್ಯೆಯಾಗಿ ಸ್ವೀಕರಿಸಿಲ್ಲ. 'ದಲಿತರ ಮೇಲೆ ವರ್ಗಶೋಷಣೆಯನ್ನು ನಡೆಸಲಾಗುತ್ತಿದೆ. ಈ ಮೂಲಭೂತ ಕಾರಣದಿಂದ ದಲಿತರು ಹಸಿವಿನ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ"[೪೯] ಎಂದು ಬಿ.ಎಂ. ಪುಟ್ಟಯ್ಯ ಅವರು ಅಭಿಪ್ರಾಯಪಡುತ್ತಾರೆ. ಇದು ಸತ್ಯ ಕೂಡ. ಆದರೆ ಕನ್ನಡದ ನವೋದಯದಿಂದ ಇಲ್ಲಿಯವರೆಗೆ ರಚನೆಯಾದ ಅನೇಕ ಕಾದಂಬರಿಗಳು ವರ್ಗಪ್ರಜ್ಞೆಯನ್ನು ಕೇಂದ್ರಚರ್ಚೆಯಲ್ಲಿ ತರುವುದಿಲ್ಲ. ಚಿರಸ್ಮರಣೆ, ಒಡಲಾಳ, ಹೊಲೆಗೇರಿಯ ರಾಜಕುಮಾರ ಕಾದಂಬರಿಗಳಲ್ಲಿ ದುಡಿಯುವ ಜನರು ಹಸಿವು, ಬಡತನದ ವಿರುದ್ಧ ಜಾಗೃತರಾಗಿರುವುದನ್ನು ಗಮನಿಸಬಹುದು. ಚಿರಸ್ಮರಣೆಯಲ್ಲಿ ವರ್ಗಶತ್ರುಗಳ ವಿರುದ್ಧ ಹೋರಾಟ ಮಾಡುವುದರ ಮೂಲಕ ವರ್ಗನಾಶಕ್ಕೆ ಪ್ರಯತ್ನಿಸುವ ದುಡಿಯುವ ವರ್ಗದ ಆಲೋಚನೆ ಇದೆ. ಹಾಗೆಯೇ 'ಒಡಲಾಳ'ದಲ್ಲಿ ಮೇಲ್ವರ್ಗದ ವರ್ಗಶೋಷಣೆಯ ವಿರುದ್ಧ ಪ್ರತಿಭಟನೆಯ ಸೂಚನೆಗಳು ಕಾಣಿಸುತ್ತವೆ. ಹೊಲೆಗೇರಿಯ ರಾಜಕುಮಾರದಲ್ಲಿ ದುಡಿಯುವ ಜನರ ಬೆವರಿನ ಪ್ರತಿಫಲದಿಂದ

ಮೇಲ್ವರ್ಗ ನಿಂತಿದೆ. 'ನಾವು ನಾವುಗಳು ಒಂದೇ ಎಂದರೆ ಹೇಗೆ', ನಮಗೆ ಜಾತೀಯತೆ ಪಟ್ಟ ಕಟ್ಟಿ ತಮ್ಮನ್ನು ಶೋಷಣೆ ಮಾಡುವ ಆಳುವ ವರ್ಗದ ವಿರುದ್ಧ ಪ್ರತಿಭಟನೆ ಇದೆ. ಹೀಗೆ ಬಿಡಿಬಿಡಿಯಾಗಿ ಹಸಿವು, ಬಡತನದ ಚಿತ್ರಣವಿದೆ. ಆದರೆ ಕಾದಂಬರಿಯಲ್ಲಿ ಇಡಿಯಾಗಿ ದುಡಿಯುವ ವರ್ಗದ ವರ್ಗಪ್ರಜ್ಞೆಯ ಭಾಗವಾಗಿ ನಿರೂಪಣೆ ಮಾಡಿರುವುದು ಕಾಣಿಸುವುದಿಲ್ಲ. ವರ್ಗಶೋಷಣೆಯ ಪರಿಣಾಮವಾಗಿ ದುಡಿಯುವ ವರ್ಗವು ಎದುರಿಸುತ್ತಿರುವ ಈ ಸಮಸ್ಯೆಯನ್ನು ಕುರಿತು ಪ್ರಗತಿಶೀಲರ ಮತ್ತು ದಲಿತ ಬಂಡಾಯದ ಬರಹಗಾರರು ಹೆಚ್ಚು ಸಾಹಿತ್ಯ ಕೃತಿಯಲ್ಲಿ ನಿರೂಪಣೆ ಮಾಡಿದ್ದಾರೆ. ಇಂದಿಗೂ ವರ್ಗ ಅಸಮಾನತೆ ಮುಂದುವರಿದಿದೆ. ಇದರಿಂದ ಉತ್ಪನ್ನವಾದ ಹಸಿವು, ಬಡತನ, ಅವಮಾನ, ದೌರ್ಜನ್ಯಗಳು ಮುಂದುವರೆಯುತ್ತಲೇ ಮಾಡುತ್ತಿವೆ. ಸೃಜನಶೀಲ ಬರಹಗಳು ಈ ವಸ್ತುಸ್ಥಿತಿಯನ್ನು ಬರಹದಲ್ಲಿ ಕಟ್ಟಿಕೊಡುವ ಪ್ರಯತ್ನ ನಡೆದಿದೆ.

### ೨.೩.೪. ವೃತ್ತಿಯ ಅಸಮಾನತೆಯ ನೆಲೆ

ಊಳಿಗಮಾನ್ಯಶಾಹಿಯ ಸಾಮಾಜಿಕ ಸಂಬಂಧಗಳು ವೃತ್ತಿಯ ಅಸಮಾನತೆಯ ಸಾಮಾಜಿಕ ಮೌಲ್ಯಗಳನ್ನು ಉಳಿಸಿಕೊಂಡು ಬರುತ್ತಿದೆ. ಈ ವೃತ್ತಿಯ ಅಸಮಾನತೆಯು ಸಂಪತ್ತಿನ ಒಡೆತನದ ಭಾಗವಾಗಿ ಹುಟ್ಟಿಕೊಂಡಿದ್ದು, ಭೂಮಿಯ ಒಡೆತನ ಹೊಂದಿರುವ ಭೂಮಾಲೀಕ ವರ್ಗ ದುಡಿಯುವ ವರ್ಗದವರ ಭೂಮಿಯ ಹಕ್ಕನ್ನು ವಂಚಿಸಿದ್ದರ ಜೊತೆಗೆ ಉತ್ಪಾದನಾ ವಲಯದಲ್ಲಿ ಶ್ರಮವಿಭಜನೆಯನ್ನು ಪ್ರಜ್ಞಾಪೂರ್ವಕವಾಗಿ ಮಾಡಿದರ ಪರಿಣಾಮದಿಂದ ಒಂದೊಂದು ಬಗೆಯ ದುಡಿಮೆ ಒಂದೊಂದು ಗುಂಪಿನ ಜನರಿಗೆ ಸೀಮಿತವಾಗುತ್ತ ಬಂದವು. ಇದನ್ನೇ ದುಡಿಮೆಯ ಹಲವಾರು ರೂಪುಗಳೆಂದು ಕರೆದುಕೊಳ್ಳಬಹುದು. ಕಮ್ಮಾರ, ಚಮ್ಮಾರ, ನೇಕಾರ, ಬಡಗಿ, ಕುಂಬಾರ, ಆಚಾರಿ, ಕಂಚುಗಾರ ಹೀಗೆ ಅನೇಕ ವೃತ್ತಿಗಳು ರೂಢಿಗೆ ಬಂದವು. ಈ ಶ್ರಮದ ದುಡಿಮೆಯನ್ನು ಕೀಳಾಗಿ ನೋಡುವ ಅವರ ಶ್ರಮದಿಂದ ಉತ್ಪಾದಿಸುವ ವಸ್ತುಗಳ ಬಳಕೆಗೆ ಸಂಬಂಧಿಸಿದಂತೆ ವೃತ್ತಿಗಳಲ್ಲಿ ಮೇಲು-ಕೀಳು ಎಂಬ ಭಾವನೆ ಹುಟ್ಟಿಕೊಂಡವು. ಇದರ ಭಾಗವಾಗಿ ಶ್ರೇಣೀಕರಣ ವ್ಯವಸ್ಥೆಯ ತಾರತಮ್ಯಗಳು ಉತ್ಪಾದನ ಸಂಬಂಧಗಳಾಗಿ ಜನ್ಮ ತಾಳಿದ್ದನ್ನು ಕಾಣಬಹುದು. ನಂತರದಲ್ಲಿ ವೃತ್ತಿಗಳು ಹುಟ್ಟಿನಿಂದಲೇ ನಿರ್ಧಾರವಾಗುವಂತೆ ಆಳುವ ವರ್ಗದ ರಾಜಕೀಯ ಮಾಡುತ್ತಿರುತ್ತದೆ. ಊಳಿಗಮಾನ್ಯ ಶೋಷಣೆ ಮತ್ತು ದಬ್ಬಾಳಿಕೆಗಳಿಗೆ ನೇರವಾಗಿ ಸಂಬಂಧ ಏರ್ಪಡುವುದು ವ್ಯಕ್ತಿಗಳಲ್ಲಿ ಕೀಳಾದ ಆಲೋಚನೆಯನ್ನು ಬಿತ್ತಿರುವುದರಿಂದ. ಆದರೆ ಈ ಪಾರಂಪರಿಕವಾಗಿ ನಡೆಸಿಕೊಂಡು ಬರುತ್ತಿದ್ದ ವೃತ್ತಿಗಳು ಸಡಿಲಗೊಳ್ಳುತ್ತಿವೆ. ಕೆಲವು ಸಮುದಾಯಗಳು ವೃತ್ತಿಯನ್ನು ಮುಖ್ಯವಾದ ಅಂಶವೆಂದು ಪರಿಗಣಿಸಿ, ಕೀಳಾಗಿ ನೋಡುವ ಪರಿಪಾಟವನ್ನು ಇಂದಿಗೂ ಬೆಳೆಸಿಕೊಂಡು ಬರುತ್ತಿದ್ದಾರೆ.

ವೃತ್ತಿಯು ಕೆಲವು ಸಮುದಾಯಗಳಿಗೆ ಅದು ಗೌರವದ ಸಂಕೇತವಾಗಿದೆ. ಮತ್ತೆ ಕೆಲವು ಸಮುದಾಯಗಳಿಗೆ ಅದು ಶೋಷಣೆಯಾಗಿದೆ. ಕೆಳಸಮುದಾಯಗಳು ಮಾಡುವ ವೃತ್ತಿಯನ್ನು

ಅಗೌರವದಿಂದ ನೋಡುವಂತಹ ಮನಸ್ಥಿತಿ ನಿರ್ಮಾಣವಾಗಿದೆ. ಆಳುವ ವರ್ಗವು ಜಾತಿಶೋಷಣೆ, ವರ್ಗಶೋಷಣೆ ಮಾಡುವುದರ ಜೊತೆಗೆ ವೃತ್ತಿಯನ್ನು ಕೀಳಾಗಿ ಭಾವಿಸಿರುವುದರಿಂದ ಇಲ್ಲಿ ದುಡಿಯುವ ಶ್ರಮಜೀವಿಗಳು ಜಾತಿಶೋಷಣೆಗೆ ಒಳಗಾಗುತ್ತಾರೆ. ವ್ಯಕ್ತಿ, ಸಮುದಾಯಗಳ ಮೇಲೆ ದೌರ್ಜನ್ಯ, ಅಪಮಾನಗಳು ನಡೆಯುತ್ತವೆ. ಆದ್ದರಿಂದ ಊಳಿಗಮಾನ್ಯಶಾಹಿ ಸಮಾಜದಿಂದ ಇಲ್ಲಿಯವರೆಗೆ ನಡೆಯುವ ಶ್ರಮವಿಭಜನೆಯ ಕ್ರಮದಲ್ಲಿ ಆಳದಲ್ಲಿ ವರ್ಗ ಅಸಮಾನತೆಯನ್ನು ಮುಂದುವರೆಸಿಕೊಂಡು ಹೋಗುವ ತಂತ್ರ ಅಡಗಿದೆ.

ಸಾಹಿತ್ಯ ಮತ್ತು ವೈಚಾರಿಕ ಬರಹಗಳು ಆಯಾಕಾಲದ ವೃತ್ತಿ ಅಸಮಾನತೆಯ ವಿರುದ್ಧದ ವಿವರಣೆ, ವಿಶ್ಲೇಷಣೆಯ ಜೊತೆಗೆ ವೈಚಾರಿಕ ಸಂಘರ್ಷವನ್ನು ಮಾಡುತ್ತಲೇ ಬಂದಿದೆ. ನಮ್ಮಲ್ಲಿ ೧೨ನೇ ಶತಮಾನದಿಂದಲೇ ಈ ವೃತ್ತಿಯನ್ನು ಕೀಳಾಗಿ ಪರಿಭಾವಿಸುವ ಕ್ರಮದ ವಿರುದ್ಧ ಬರವಣಿಗೆ ಮೂಲಕ ಸಂಘರ್ಷ ಇಳಿದಿದ್ದನ್ನು ಕಾಣುತ್ತೇವೆ. ವಚನ ಸಾಹಿತ್ಯದಿಂದ ಈ ಕೆಳಜಾತಿಯವರು ಇದೇ ಕೆಲಸ ಮಾಡಬೇಕು. ಮೇಲ್ಜಾತಿಯರು ಈ ವೃತ್ತಿಯನ್ನು ಮಾಡಬೇಕು ಎನ್ನುವ ಪ್ರತಿಗಾಮಿ ಆಲೋಚನೆಯು ಇಂದು ಬದಲಾಗಿದೆ. ವೃತ್ತಿಯು ಇಂದು ಜಾತಿಯ ಚೌಕಟ್ಟನ್ನು ಮೀರಿದೆ. ಆದರೆ ಆಳುವ ವರ್ಗವು ಕೆಳವರ್ಗಗಳನ್ನು ಶೋಷಣೆ ಮಾಡುವುದರ ಮೂಲಕ ವೃತ್ತಿಯನ್ನು ಮುಂದುವರಿಸುತ್ತಿವೆ. ಹಾಗಾಗಿ ವೃತ್ತಿಯನ್ನು ದುಡಿಮೆಯ ವಿಧಾನಗಳ ಸಂಬಂಧದಿಂದ ಪರಿಭಾವಿಸಬೇಕಾಗಿದೆ. ಅದರಲ್ಲಿಯೂ ಇವತ್ತಿನ ಜಾಗತೀಕರಣ ಸಂದರ್ಭದಲ್ಲಿ ಹಣಕಾಸು ಬಂಡವಾಳ ಮತ್ತು ನವವಸಾಹತು ಮಾರುಕಟ್ಟೆ ಶಕ್ತಿಗಳು ವೃತ್ತಿ, ಧರ್ಮಗಳನ್ನು ಲಾಭದ ಕೇಂದ್ರವಾಗಿಸುವುದನ್ನು ಕಾಣಬಹುದು. ಇಲ್ಲಿ ಜಾತಿಯ ಚೌಕಟ್ಟಿನ ಯಾವ ನಿಬಂಧನೆಗಳು ಇರುವುದಿಲ್ಲ. ಆದರೆ ಕೆಲವು ಮೂಲಭೂತ ಧಾರ್ಮಿಕ ವಾದಿಗಳು ತನ್ನ ವರ್ಗದ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ಸಂಸ್ಕೃತಿಯ ಹೆಸರಲ್ಲಿ ಹಳೆಯ ಸಂಪ್ರದಾಯಗಳನ್ನು ಮುಂದುವರಿಸುತ್ತಿದ್ದಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿಯನ್ನು ಕೀಳಾಗಿ ಪರಿಗಣಿಸಿರುವ ಸಮುದಾಯಗಳು ತಮ್ಮ ಜೀವನ ನಡೆಸಲು ವಿವಿಧ ವೃತ್ತಿಗಳ ಮೇಲೆ ಅವಲಂಬಿಸಿದ್ದಾರೆ. ಕೃಷಿ ಕೈಗಾರಿಕೆಗಳಲ್ಲಿ ತಮ್ಮ ಉಪಕಸುಬಗಳಾಗಿ ಮಾಡುವ ಅನೇಕ ದುಡಿಮೆಯ ಸ್ವರೂಪಗಳು ಅವರ ಸಾಮಾಜಿಕ ಸಂಬಂಧಗಳನ್ನು ಸೂಚಿಸುತ್ತದೆ ಹಾಗೂ ಅವರ ಆರ್ಥಿಕ ಮತ್ತು ಸಾಮಾಜಿಕ ಶ್ರೇಣೀಕರಣಗಳನ್ನು ಈ ವೃತ್ತಿಯಾಧಾರಿತ ಕಸುಬುಗಳು ನಿರ್ಧರಿಸುವುದನ್ನು ಕಾಣುತ್ತೇವೆ.

ಕನ್ನಡದ ಅನೇಕ ಕಾದಂಬರಿಗಳಲ್ಲಿ ಪ್ರಾದೇಶಿಕ ಉತ್ಪಾದನಾ ವಿಧಾನಗಳ ಮೂಲಕ ವೃತ್ತಿಯನ್ನು ನಿರ್ಧರಿಸಿರುವುದನ್ನು ಕಾಣಬಹುದು. ದಕ್ಷಿಣ ಕನ್ನಡ ಭಾಗದ ಪರಿಸರದಲ್ಲಿ ರಚನೆಯಾದ ಶಿವರಾಮ ಕಾರಂತರ 'ಚೋಮನ ದುಡಿ' ಮತ್ತು ಕುಡಿಯರ ಕೂಸು' ಕಾದಂಬರಿಯಲ್ಲಿ ಬರುವ ವೃತ್ತಿಯಾಧಾರಿತ ಪಾತ್ರಗಳನ್ನು ಗಮನಿಸಿದ್ದರೆ ಚೋಮ ಸಂಕಪ್ಪಯ್ಯನ ಮನೆಯ ಜೀತ ಮಾಡಿದರ ಊಟಕ್ಕೆ ಅನ್ನ ಸಿಗುತ್ತಿತ್ತು. ಇವನು ಗೇಣಿಗಾಗಿ ಭೂಮಿ ಕೇಳಿದ್ದು,

ಅದನ್ನು ಆಳುವ ವರ್ಗ ನಿರಾಕರಿಸಿದ್ದು ಕಾಣುತ್ತೇವೆ. ಇಲ್ಲ ಕೃಷಿಕಾರ್ಮಿಕರಾಗಿ ದುಡಿಯುವುದೇ ಚೋಮನ ವೃತ್ತಿಯಾಗಿದೆ. 'ಕುಡಿಯರ ಕೂಸು'ನಲ್ಲಿ ಕುಡಿಯ ಸಮುದಾಯ ಅರಣ್ಯದಲ್ಲಿ ಬದುಕನ್ನು ಕಟ್ಟಿಕೊಂಡಿತ್ತು. ಇವರು ಕಮರಿ ಬೆಳೆಯುವುದು ಮೂಲ ಕಸುಬು. ಆದರೆ ಆಧುನಿಕತೆಯ ಆಗಮನದಿಂದ ಭೂಮಾಲೀಕ ವ್ಯವಸ್ಥೆ ಭೂಮಿಯನ್ನು ಅಕ್ರಮವಾಗಿ ವಶಪಡಿಸಿ ಕೊಂಡು ಏಲಕ್ಕಿ ಬೆಳೆಯನ್ನು ಕಾಡಿಗೆಲ್ಲ ವಿಸ್ತರಿಸಿದರು. ಇದರಿಂದ ಕುಡಿಯರ ಸಾಮೂಹಿಕ ಉತ್ಪಾದನಾ ರಂಗವು ಕಳೆದುಹೋಗಿ ಮೇಲ್ವರ್ಗದ ಜೀತದ ಆಳುಗಳಾಗಿ ದುಡಿಯುವಂತಹ ಪರಿಸ್ಥಿತಿ ಬಂದಿತು. ಏಲಕ್ಕಿ ಕೃಷಿಯಲ್ಲಿ ದುಡಿಯುವುದು, ಅರಣ್ಯಸಂಪತ್ತನ್ನು ಸಂಗ್ರಹಿಸಿ ದಣಿಗೆ ಕೊಡುವುದು. ಬೇಟೆಯಾಡುವುದು ಇವರ ಕಸುಬು. ನಾಲ್ಕು ತಿಂಗಳ ಕಾಲ ಕೂಲಿ ಇಲ್ಲದೆ ಬಿಟ್ಟಿ ದುಡಿಯಬೇಕಾಗಿದೆ. ವರ್ಷಕ್ಕೊಂದು ಬಟ್ಟೆ, ಉಪ್ಪು, ಎಲೆ, ಅಡಿಕೆ, ಮೆಣಸು ಹಾಗೂ ಹೆಂಡ ತೆಗೆಯುತ್ತಿದ್ದಕ್ಕಾಗಿ ಧಣಿ ಕೊಡುತ್ತಿದ್ದ ಸುಂಕ ಇವರಿಗೆ ಸಿಗುತ್ತಿತ್ತು. ಹೀಗೆ ಶ್ರಮಶೋಷಣೆ ಮಾಡುವುದರ ಮೂಲಕ ಆಳುವ ವರ್ಗ ತನ್ನ ಅಸ್ತಿತ್ವ ಕಾಪಾಡಿಕೊಂಡಿದೆ.

ಕುವೆಂಪು ಅವರ "ಕಾನೂರು ಹೆಗ್ಗಡತಿ" ಮತ್ತು 'ಮಲೆಗಳಲ್ಲಿ ಮದುಮಗಳು" ಕಾದಂಬರಿಗಳಲ್ಲಿ ದುಡಿಯುವ ವರ್ಗದ ಜನರ ಭೂಮಿಯ ಪ್ರಶ್ನೆಯ ಕುರಿತು ಕಾದಂಬರಿಗೆ ಆಸಕ್ತಿ ಇಲ್ಲ. ಆದರೆ ಇವುಗಳಲ್ಲಿ ದುಡಿಯುವ ಜನರು ಮೇಲ್ವರ್ಗದ ಜೀತದ ಆಳುಗಳಾಗಿ ದುಡಿಯುವ ಚಿತ್ರಣ ಮಾತ್ರ ಕಾಣಿಸುತ್ತದೆ. ಕಾದಂಬರಿಯಲ್ಲಿ ಬರುವ ಹೊಲೆಯ ಸಮುದಾಯಗಳು ಜೀತದ ಆಳುಗಳು. ಇವರು ಮಲೆನಾಡಿನ ಭೂಮಾಲೀಕರ ಒಡೆತನದಲ್ಲಿರುವ ಗದ್ದೆ, ತೋಟಗಳಲ್ಲಿ ಕೃಷಿ ಕಾರ್ಮಿಕರಾಗಿ ದುಡಿಯುವವರು. ಇಲ್ಲಿ ಬರುವ ದುಡಿಮೆಗಾರರು ಮೇಲ್ವರ್ಗದ ಶೋಷಣೆಯನ್ನು ಒಪ್ಪಿಕೊಂಡು ಹೋಗುತ್ತಿರುವುದನ್ನು ಕಾಣಬಹುದು. ಧಣಿಯ ಮನೆ ಪಾಲಾದಾಗ ಮನೆಯ ವಸ್ತುಗಳನ್ನು ಪಾಲು ಮಾಡಿಕೊಳ್ಳುವಂತೆ ಜೀತಗಾರರನ್ನು ಪಾಲು ಮಾಡಿಕೊಳ್ಳುತ್ತಾರೆ. ಅವರಿಗೆ ಇಷ್ಟವಾದ ಭೂಮಾಲೀಕರ ಭೂಮಿಯಲ್ಲಿ ದುಡಿಯುವ ಹಕ್ಕಿಲ್ಲ. ಆ ರೀತಿಯಾಗಿ ಅವರನ್ನು ನಿಯಂತ್ರಿಸುತ್ತದೆ. ಊಳಿಗಮಾನ್ಯಶಾಹಿ ವ್ಯವಸ್ಥೆಯ ಭೂಸಂಬಂಧದ ವಿಧಾನದ ಮೂಲಕ ಉತ್ಪಾದನಾ ಪ್ರಕ್ರಿಯೆಯನ್ನು ನಿರೂಪಿಸುತ್ತಿದೆ. ಅಂದರೆ ದುಡಿಯುವ ವರ್ಗದವರನ್ನು ತಮ್ಮ ಭೂಮಿಯಲ್ಲಿ ದುಡಿಸಿಕೊಂಡು ಅವರನ್ನು ಶೋಷಣೆ ಮಾಡುವುದರ ಮೂಲಕ ಕಾದಂಬರಿಯು ದುಡಿಯುವ ಜನರು ಹಕ್ಕನ್ನು ಹೊಂದುವುದನ್ನು ಕಾದಂಬರಿಯು ಆಳದಲ್ಲಿ ವಿರೋಧಿಸುತ್ತದೆ.

ಬರಗೂರರ 'ಸೂರ್ಯ' ಕಾದಂಬರಿಯಲ್ಲಿ ಕರಿಯ ಮೇಲ್ವರ್ಗದವರ ಭೂಮಿಯಲ್ಲಿ ದುಡಿಯುವ ಜೀತದ ಆಳು. ಕೃಷಿ ಕೆಲಸ ಮಾಡಿಕೊಂಡು ಬದುಕುತ್ತಿರುವುದನ್ನು ಕಾಣುತ್ತೇವೆ. ಇಲ್ಲಿ ಕರಿಯನನ್ನು ಮುಗ್ಧನನ್ನಾಗಿ ಚಿತ್ರಿಸಲಾಗಿದೆ. ಈ ಮುಗ್ಧತೆಗೆ ಆಳುವ ವರ್ಗದವರ ಶೋಷಣೆಯೇ ಕಾರಣ ಎಂದು ಚರ್ಚಿಸುತ್ತದೆ. ಜಮೀನ್ದಾರನ ಅಪ್ಪಣೆ ಇಲ್ಲದೆ ಒಂದು ಹುಲ್ಲು ಕಡ್ಡಿಯೂ ಅಲುಗಾಡುವ ಹಾಗಿಲ್ಲ. ಅಂಥ ಸ್ಥಿತಿಯಲ್ಲಿ ಕೆಳವರ್ಗದವರನ್ನು ನೋಡಿಕೊಳ್ಳುತ್ತಿದ್ದರು. ಆದರೆ

ಕಾದಂಬರಿಯು ಈ ಕೆಳಜಾತಿಯ ಕರಿಯನ ಮೇಲ್ಜಾತಿ ಹೆಣ್ಣುಗಳ ಸಂಬಂಧವು ಜಾತಿಶೋಷಣೆಯನ್ನು ಮೀರುವ ಕ್ರಿಯೆಯಾಗಿ ನಿರೂಪಣೆಗೊಂಡಿದೆ. ಚೆನ್ನಣ್ಣ ವಾಲೀಕಾರರ ಒಂದು ಹೆಣ್ಣಿನ ಒಳಜಗತ್ತು ಕಾದಂಬರಿಯಲ್ಲಿ ತಳವಾರರು, ಬ್ಯಾಡರು, ಕುರುಬರು, ಹೊಲೆಯರಾಗಿ ದುಡಿಯುತ್ತಾರೆ. ಮಾದರ ಮಲ್ಯ ಮತ್ತು ಸಂಗಣ್ಣಗೌಡನ ತಂಗಿ ರತ್ನಳ ಸಂಬಂಧವು ಮಲ್ಯನ ಸಾವಿನೊಂದಿಗೆ ಅಂತ್ಯವಾಗುತ್ತದೆ. ಇಲ್ಲಿ ಕೂಲಿ ಮಾಡುವ ಜನರನ್ನು ಮೇಲ್ವರ್ಗ ಮೋಸದಿಂದ ಕೊಲೆ ಮಾಡುತ್ತದೆ. ಇದು ಆಳುವ ವರ್ಗವು ಹಿಂದಿನಿಂದಲೂ ಅನುಸರಿಸಿಕೊಂಡು ಬಂದಿರುವ ರಾಜಕೀಯ ಧೋರಣೆ ಯಾಗಿ ಕಾದಂಬರಿ ನಿರೂಪಿಸಿದೆ. 'ಬೆಂಕಿಯ ಮಧ್ಯ' ಕಾದಂಬರಿಯಲ್ಲಿ ಪಾವಸ್ಕರನ ತಂದೆ ಜೀತದಾಳು. ಧಣಿ ಒಮ್ಮೆ ಸಣ್ಣ ತಪ್ಪಿಗೆ ಅವನನ್ನು ಬೈಯುತ್ತಾನೆ. ಆದರೆ ಅವನು ನಂತರ ಅವನ ಮನೆಗೆ ಕೆಲಸಕ್ಕೆ ಹೋಗುವುದಿಲ್ಲ. ಇಲ್ಲಿ ಜೀತ ಮಾಡುವ ವೃತ್ತಿಯಾದರೂ ಅವರು ಸ್ವಾಭಿಮಾನದಿಂದ ಬದುಕುತ್ತಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು.

ಕುಂ. ವೀರಭದ್ರಪ್ಪನವರ 'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಕಾದಂಬರಿಯಲ್ಲಿ ದುಡಿಯುವ ವರ್ಗದ ಜನರು ಅನೇಕ ವೃತ್ತಿಗಳನ್ನು ಮಾಡುತ್ತಿರುವುದನ್ನು ಕಾಣುತ್ತೇವೆ. ಚಪ್ಪಲಿ ಮಾಡುವವರು, ಕೃಷಿ ಕೆಲಸ ಮಾಡುವ ಜೀತಗಾರರು, ಕೂಲಿಕಾರರು, ಸುಳ್ಳು ಸಾಕ್ಷಿ ಹೇಳಿ ಜೀವನ ಸಾಗಿಸುವವರು ಆತ್ಮವಿಶ್ವಾಸವನ್ನೇ ಬಂಡವಾಳ ಮಾಡಿಕೊಂಡವರು, ವೈದ್ಯ ವೃತ್ತಿ ಅವಲಂಬಿಸಿದವರು ಹೀಗೆ ವೃತ್ತಿಯನ್ನು ಗುರುತಿಸುತ್ತಾರೆ. ದಿಬ್ಬ ಮನೆಯಿಂದ ಹೊರಡುವಾಗ ಒಂದು ಹೆಗಲಿಗೆ ಕೊಡಲಿ, ಇನ್ನೊಂದು ಹೆಗಲಿಗೆ ಹಲಗೆಯನ್ನು ಹಾಕಿಕೊಳ್ಳುತ್ತಿದ್ದನು. ಅವನು ಎರಡು ಕೆಲಸಗಳನ್ನು ನಿರ್ವಹಿಸುವುದನ್ನು ಕಾಣಬಹುದು. ಮಾಲೀಕ ಹೇಳಿದ ಕೆಲಸವನ್ನು ಮಾಡುವ ವೃತ್ತಿಯನ್ನು ದಿಬ್ಬ ಮಾಡುತ್ತಿದ್ದನು. ಹೀಗೆ ಮೇಲ್ವರ್ಗದ ಶೋಷಣೆಗೆ ಒಳಗಾಗಿ ಅವರು ಕೊಟ್ಟ ಕೆಲಸವನ್ನು ಮಾಡುವ ಜೀತಗಾರರಾಗಿ ಈ ದುಡಿಯುವ ವರ್ಗವನ್ನು ಚಿತ್ರಿಸಿದ್ದಾರೆ. 'ಒಡಲಾಳ'ದಲ್ಲಿ ಗೌರಮ್ಮ, ಪುಟಗೌರಿ ಕೂಲಿ ಕೆಲಸ ಮಾಡುವುದು ಅವರ ವೃತ್ತಿಯಾಗಿದೆ. ಆದರೆ ಈ ಕೂಲಿಗೂ ಕರೆಯದೆ ಇವರನ್ನು ಶೋಷಣೆ ಮಾಡುವ ಆಳುವ ವರ್ಗವನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

'ಕಾರ್ಯ' ಕಾದಂಬರಿಯಲ್ಲಿ ಡೋರರು ತೊಗಲಿನ ವ್ಯಾಪಾರ ಮಾಡುತ್ತಿದ್ದರು. ಮಚಗಾರರು ಚಪ್ಪಲಿ ಹೊಲೆಯುತ್ತಿದ್ದರು. ಮೇಲ್ವರ್ಗದ ವರ್ಗಶೋಷಣೆಯಿಂದ ಹೊರಬರುವ ಕಾರ್ಯದಲ್ಲಿ ಇವರು ತೊಡಗಿದ್ದಾರೆ. ಅಷ್ಟೇ ಅಲ್ಲ, ಶಿವಪ್ಪ-ಭೂಮಿಯ ಒಡೆತನ ಹೊಂದಿದ್ದಾನೆ. ಹೀಗೆ ವೃತ್ತಿಯ ಮತ್ತು ಮೇಲ್ಜಾತಿಯ ಶೋಷಣೆಯಿಂದ ಬಿಡಿಸಿಕೊಳ್ಳುವ ಪ್ರಯತ್ನವನ್ನು ಕಾದಂಬರಿಯು ಗುರುತಿಸುತ್ತದೆ. 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಜಾನೋಬಾ ಎಮ್ಮೆ ಸಾಕಿ, ಹಾಲು ಮಾರಿ ಜೀವನ ಸಾಗಿಸುತ್ತಾನೆ. ರಾಮಕ್ಕ, ಸುಮತಿ, ಭೂಮಾಲೀಕರ ಭೂಮಿಯಲ್ಲಿ ಕೃಷಿ ಕೆಲಸ ಮಾಡುತ್ತಾರೆ. ಮಾದೇವ ಸರ್ಕಾರಿ ನೌಕರಿ ಮಾಡುತ್ತಾನೆ. ಇಲ್ಲಿ ಕೆಳವರ್ಗದ ಜನರು ಊಳಿಗಮಾನ್ಯಶಾಹಿ ವೃತ್ತಿ ವಿಭಜನೆಯಿಂದ ಹೊರಬಂದು ಸ್ವತಂತ್ರವಾದ ಬದುಕನ್ನು ಕಟ್ಟಿಕೊಡುವ ಕ್ರಿಯಾಶೀಲ ನಿರೂಪಣೆ ಇದೆ.

ಒಟ್ಟಾರೆ ಬೇರೆ ಬೇರೆ ಭೌಗೋಳಿಕ ಪ್ರದೇಶದಲ್ಲಿ ರಚನೆಯಾಗಿರುವ ಕಾದಂಬರಿಗಳು ಆಯಾ ಭಾಗದ ಉತ್ಪಾದನಾ ವಿಧಾನದ ಮೂಲಕ ವೃತ್ತಿಯನ್ನು ಗ್ರಹಿಸಿವೆ. ಭೂಮಿಯ ಒಡೆತನದಿಂದ ವಂಚಿತವಾಗಿರುವುದನ್ನು ಗುರುತಿಸಿದ್ದಾರೆ. 'ಚೋಮನ ದುಡಿ'ಯಲ್ಲಿ ಬರುವ ಹೊಲೆಯ ಸಮುದಾಯ ಭೂಮಾಲೀಕರ ಹೊಲ, ಗದ್ದೆ, ತೋಟಗಳಲ್ಲಿ ದುಡಿಯುವ ಶ್ರಮಜೀವಿಗಳು. 'ಕುಡಿಯರ ಕೂಸು' ಕಾದಂಬರಿಯಲ್ಲಿ ಮಲೆ ಕುಡಿಯರು ಅರಣ್ಯ ಪ್ರದೇಶದಲ್ಲಿ ಕಮರಿ ಬೆಳೆಯನ್ನು ಬೆಳೆದು ಜೀವನ ನಡೆಸುತ್ತಿದ್ದರು. ಆಧುನಿಕತೆಯ ಪ್ರವೇಶದಿಂದ ಭೂಮಾಲೀಕರು ಇವರ ಭೂಮಿಯನ್ನು ಅಕ್ರಮವಾಗಿ ವಶಪಡಿಸಿಕೊಂಡಿದ್ದರಿಂದ ಜೀತದ ಆಳಾಗಿ, ಕೃಷಿ ಕೂಲಿಗಳಾಗಿ, ಅರಣ್ಯಸಂಪತ್ತು ಸಂಗ್ರಹಿಸುವ, ಬೇಟೆಯಾಡುವ ಕಾರ್ಯದಲ್ಲಿ ತೊಡಗಿದರು. ಕುವೆಂಪು ಕಾದಂಬರಿಗಳಲ್ಲಿ ಹೊಲ ಗದ್ದೆಯಲ್ಲಿ ದುಡಿಯುವ ಕೃಷಿಕಾರ್ಮಿಕರಾಗಿ(ಹೊಲೆಯ ಸಮುದಾಯ)ದುಡಿಯುತ್ತಿದ್ದಾರೆ. 'ಒಡಲಾಳ'ದಲ್ಲಿ ಸಾಕವ್ವನ ಕಿರಿಮಗ ಗುರುಸಿದ್ದು ರೇಷ್ಮೆಗೂಡಿನ ವ್ಯಾಪಾರ, ಚಿಲ್ಲರೆ ಅಂಗಡಿ ಇಟ್ಟಿದ್ದನು ಮತ್ತು ದನದ ವ್ಯಾಪಾರ ಮಾಡುತ್ತಿದ್ದನು. 'ಕುಸುಮಬಾಲೆ'ಯಲ್ಲಿ ಕಿಟ್ಟಯ್ಯ, ಊರೂರು ತಿರುಗಿ ಹುಣಸೆ, ಬೇವಿನ ಬೀಜಗಳನ್ನು ಜನರಿಂದ ಕೊಂಡು ಸಾಬರಿಗೆ ಮಾರಿ ಜೀವನ ನಡೆಸುತ್ತಿದ್ದನು. ಮೊಗಿಯಲ್ಲಿ ಸವತಿ ಸಣ್ಣಿ ಎಲೆ ಮಾರಿ ಬದುಕ ಕಟ್ಟಿಕೊಂಡಿದ್ದಾಳೆ. ಸಿಂದಳ್ಳಿ ಸಿದ್ದಿಯು ಬೆಂಕಿಪೆಟ್ಟಿಗೆ, ನುಗ್ಗೆ ಸೊಪ್ಪು, ಅಗಸೆ ಸೋಪ್ಪು ಮಾರಿ ಬದುಕನ್ನು ನಿರ್ವಹಿಸುತ್ತಾಳೆ. 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಜಾನೋಬಾ ಎಮ್ಮೆ ಸಾಕಿ ಹಾಲು ಮಾರಿ ಜೀವನ ಸಾಗಿಸುತ್ತಾನೆ. ಹೀಗೆ ದುಡಿಯುವ ವರ್ಗವು ಉತ್ಪಾದನಾ ಶಕ್ತಿಗಳಾಗಿ ಮೇಲ್ಜಾತಿಯ ಭೂಮಾಲೀಕ ಭೂಮಿಯಲ್ಲಿ ಕೃಷಿ ಕೂಲಿಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಹಾಗೆಯೇ ಈ ಜೀತಪದ್ಧತಿ ಸ್ವತಂತ್ರ್ಯವಾಗಿ ವೃತ್ತಿಗಳನ್ನು ಮಾಡುವುದು ಕಾಣುತ್ತೇವೆ. ಒಟ್ಟಾರೆ ಕನ್ನಡ ಕಾದಂಬರಿಗಳು ದುಡಿಯುವ ವರ್ಗ ಮೇಲ್ವರ್ಗದ ಶೋಷಣೆಗೆ ಒಳಗಾಗಿ ದುಡಿಯುವುದರ ಜೊತೆಗೆ ಇತರೆ ವೃತ್ತಿ ಕೆಲಸ ಮಾಡುವುದರ ಮೂಲಕ ದುಡಿಮೆಯ ಸಂಸ್ಕೃತಿಯನ್ನು ಎತ್ತಿಹಿಡಿದರೆ, ದುಡಿಯದೆ ಭೂಮಿಯ ಒಡೆಯರಾಗಿ, ದುಡಿಯುವ ಜನರ ಶೋಷಣೆ ಮಾಡುವ ಆಳುವ ವರ್ಗವು ಈ ಶೋಷಣೆಗೆ ಮೌಲ್ಯಗಳನ್ನು ಉಳಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿರುವ ಆಲೋಚನೆಯನ್ನು ಕಾದಂಬರಿಗಳ ಆಳದಲ್ಲಿ ವಿರೋಧಿಸುತ್ತಿವೆ.

### ೨.೩.೫. ಪ್ರತಿಭಟನೆಯ ನೆಲೆ

ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರತಿಭಟನೆಯು ನೈಸರ್ಗಿಕವಾದ ಕ್ರಿಯೆಯಾಗಿದೆ. ಸಮಾಜದಲ್ಲಿ ಅನ್ಯಾಯ ಮತ್ತು ಶೋಷಣೆಗಳು ನಡೆಯುತ್ತಿವೆ ಎಂದಾಗ ಶೋಷಣೆ ಮಾಡುವವರು ಇದ್ದಾರೆ ಎಂದರ್ಥ. ಪ್ರತಿಭಟನೆ ನಡೆಯುತ್ತಿದೆ ಅಂದಾಗ ಅಲ್ಲಿ ಶೋಷಣೆ ನಡೆದಿದೆ ಎಂದು ಭಾವಿಸಬಹುದು. ನಿಸರ್ಗದ ಅಥವಾ ಮನುಷ್ಯನ ಬೆಳವಣಿಗೆ ಎಂಬುದು ವಿರೋಧಗಳ 'ಸಂಘರ್ಷ'ವಾಗಿದೆ ಎಂದು ಮಾರ್ಕ್ಸ್‌ವಾದಿ ಭೌತಿಕವಾದದ ನಿಯಮ ಹೇಳುತ್ತದೆ. ಮಾರ್ಕ್ಸ್

ಮತ್ತು ಎಂಗೆಲ್ಸ್ ಅವರು ಪ್ರಪ್ರಥಮ ಬಾರಿಗೆ ತಮ್ಮ ಕಮ್ಯೂನಿಸ್ಟ್ ಪ್ರಣಾಳಿಕೆಯಲ್ಲಿ "ಇತಿಹಾಸವೆಂಬುದು ಗತಕಾಲದ ಹಾಗೂ ಪ್ರಸ್ತುತ ಸಮಾಜದಲ್ಲಿನ ವರ್ಗಹೋರಾಟದ ಇತಿಹಾಸವೇ"[೫೦] ಎಂದರು. ಹೀಗೆ ವೈಜ್ಞಾನಿಕವಾಗಿ ವರ್ಗಹೋರಾಟದ ತಳಹದಿ ಹಾಕಿಕೊಟ್ಟರೂ ಸಮಾಜದಲ್ಲಿ ಅನೇಕ ಸ್ವರೂಪದಲ್ಲಿ ಪ್ರತಿಭಟನೆ ನಡೆಯುತ್ತಿವೆ. ವರ್ಗಹೋರಾಟ, ಜಾತಿಹೋರಾಟದ ಜೊತೆಗೆ ಎಲ್ಲಾ ರೀತಿಯದ ಅನ್ಯಾಯದ ವಿರುದ್ಧ ಪ್ರತಿಭಟನೆ ನಡೆಯುತ್ತಿದೆ. ಆಳುವ ವರ್ಗದ ವಿರುದ್ಧ ದುಡಿಯುವ ವರ್ಗದ ಪ್ರತಿಭಟನೆ, ಮೇಲ್ಜಾತಿಯ ಶೋಷಣೆಯ ವಿರುದ್ಧ ಕೆಳಜಾತಿಗಳ ಪ್ರತಿಭಟನೆ, ಭೂಮಾಲೀಕರ ಶೋಷಣೆಯ ವಿರುದ್ಧ ಪ್ರತಿಭಟನೆ. ಬಂಡವಾಳಶಾಹಿಗಳ ಶೋಷಣೆಯ ವಿರುದ್ಧ ಕಾರ್ಮಿಕ ವರ್ಗದ ಪ್ರತಿಭಟನೆ, ಭೂಮಿ ವಂಚಕರ ವಿರುದ್ಧ ಭೂಹೀನರ ಪ್ರತಿಭಟನೆ – ಹೀಗೆ ಸಾಮಾಜಿಕವಾಗಿ ಅನ್ಯಾಯಕ್ಕೆ ಒಳಗಾದ ಜನರು ಶೋಷಣೆ ಮಾಡುವ ವರ್ಗದ ವಿರುದ್ಧ ಸಂಘರ್ಷ ಮಾಡುತ್ತಲೇ ಬಂದಿದ್ದಾರೆ. ಭೂಮಿಯ ಖಾಸಗಿ ಒಡೆತನ ಅಥವಾ ಸಂಪತ್ತಿನ ಅಸಮಾನ ಹಂಚಿಕೆಯ ವಿರುದ್ಧ ವರ್ಗಹೋರಾಟಗಳು ನಡೆಯುತ್ತಿವೆ. ಹಾಗೆಯೇ ಶ್ರಮವಿಭಜನೆಯ ಮೂಲಕ ಜಾತಿಯ ಹಣೆಪಟ್ಟಿ ಕಟ್ಟಿ ಜಾತಿಶೋಷಣೆ ಮಾಡುವ ಮೇಲ್ಜಾತಿ ಮೇಲ್ವರ್ಗದ ವಿರುದ್ಧ ಜಾತಿನಾಶದ ಹೋರಾಟಗಳು ನಡೆಯುತ್ತಿವೆ. ಇಂದು ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಶ್ರಮಮೌಲ್ಯ ಶೋಷಣೆಯ ವಿರುದ್ಧ ದುಡಿಯುವ ವರ್ಗದ ಹೋರಾಟ ನಡೆಯುತ್ತಿದೆ.

ಈ ವಸ್ತುಸ್ಥಿತಿಯನ್ನು ಕನ್ನಡ ಕಾದಂಬರಿ ಸಾಹಿತ್ಯ ಗ್ರಹಿಸಿರುವ ಮತ್ತು ಅಭಿವ್ಯಕ್ತಿಸಿರುವುದನ್ನು ನೋಡುವುದಾದರೆ, ಶಿವರಾಮ ಕಾರಂತರ ಕಾದಂಬರಿಯಲ್ಲಿ 'ಚೋಮನ ದುಡಿ'ಯಲ್ಲಿ ಚೋಮನ ಕುಟುಂಬ ಭೂಮಿಯ ಹಕ್ಕನ್ನು ಕಳೆದುಕೊಂಡ ಕೆಳಜಾತಿ, ಕೆಳವರ್ಗದ ಪ್ರತಿನಿಧಿಯಾಗಿದೆ. ಚೋಮ ಸಂಕಪ್ಪಯ್ಯನ ಮನೆಯ ಜೀತದ ಆಳು. ಇವನಿಗೆ ಯಾವುದೇ ಸ್ವಾತಂತ್ರ್ಯವಿಲ್ಲದ ಹಾಗೆ ನಿರೂಪಣೆ ಇದೆ. ಗೇಣಿಗಾಗಿ ಭೂಮಿಯ ಉಳುಮೆ ಮಾಡಲು ಆಸೆ ಪಡುತ್ತಾನೆ. ಮೂರು ಸಂದರ್ಭದಲ್ಲಿ ಗೇಣಿಗಾಗಿ ಭೂಮಿ ಕೇಳುತ್ತಾನೆ. 'ಅಬ್ಬ ಹೊಲೆಯರ ಸೊಕ್ಕೆ' ಎಂದು ಸಂಕಪ್ಪಯ್ಯನವರ ಅಮ್ಮ ಹೇಳಿಕೊಳ್ಳುತ್ತಾಳೆ. ಅವನ ಚಿಕ್ಕ ಮಗು ಹೊಳೆಯಲ್ಲಿ ನೀರು ಕುಡಿಯಲು ಹೋಗಿ ಮುಳುಗುತ್ತದೆ. ಆಗ ಅಲ್ಲಿಯೇ ಇದ್ದ ಬ್ರಾಹ್ಮಣ ಯುವಕನೊಬ್ಬ ಮುಳುಗಿ ಎತ್ತಬೇಕೆಂದು ಬಂದರೆ ಅಲ್ಲಿದ್ದ ಬ್ರಾಹ್ಮಣರು ಅವನನ್ನು ತಡೆದು ಅವನು ಹೊಲೆಯನಲ್ಲವೇ? ಎಂದು ಹೇಳುತ್ತಾನೆ. ಇಲ್ಲಿ ಜಾತಿಶೋಷಣೆ ಮತ್ತು ಭೂಮಿಯ ಹಕ್ಕಿನ ವಂಚನೆ ನಡೆದರೂ ಚೋಮನು ಪ್ರತಿಭಟಿಸುವುದಿಲ್ಲ. ಕೆಲಸದಲ್ಲಿ ಅಸಡ್ಡೆ ತೋರಿದಾಗ 'ನೀನು ಬೆಳಿಗ್ಗೆಯೂ ಸೇಂದಿ ಅಂಗಡಿಗೆ ಹೋಗತೊಡಗಿದ್ದೀಯಾ?' ಎನ್ನುತ್ತಾರೆ. ಯಾವಾಗಲೂ ಒಡೆಯರಿಗೆ ತಗ್ಗಿ ಬಗ್ಗಿ ನಡೆಯುವ, ದೊಡ್ಡ ಧ್ವನಿಯಿಂದ ಮಾತಾಡಲೂ ಹೆದರುವ ಚೋಮನ 'ಹೂಂ ನೀವು ನನಗೆ ಕೈ ತುಂಬ ಸಂಬಳ ಕೊಡುವಾಗ ಬೆಳಿಗ್ಗೇನು ಸಂಜೆಗೇನು?' ಎಂದು ಉತ್ತರಿಸುತ್ತಾನೆ. ಇನ್ನು ಇಲ್ಲಿ ಕಾಲಿಡಬೇಡ ಎಂದು ಸಂಕಪ್ಪಯ್ಯ ಗದರಿಸಿದರೆ ತಿರಸ್ಕಾರದ ನಗೆ ನಕ್ಕು ಮನೆಗೆ ನಡೆಯುತ್ತಾನೆ. ಹೀಗೆ ಪ್ರತಿಭಟನೆ ಏನಿದ್ದರೂ ಅವನ ವೈಯಕ್ತಿಕ ಮಟ್ಟದಲ್ಲೇ

ನಡೆಯುತ್ತದೆ. ದಣಿಗಳ ಮೇಲಿನ ಸಿಟ್ಟನ್ನು ತನ್ನ ಎತ್ತಿನ ಕಾಲು ಕುಂಟುವ ಹಾಗೆ ಹೊಡೆದು ತೀರಿಸುತ್ತಾನೆ. ಬೆಳ್ಳಿ-ಮನ್ವೇಲನನ್ನು ಒಟ್ಟಿಗೆ ನೋಡಿ ತುಂಬಾ ಪ್ರಕ್ಷುಬ್ಧನಾಗುತ್ತಾನೆ. ಮನೆವೇಲನನ್ನು ದೊಣ್ಣೆಯಿಂದ ಹೊಡೆದು ತರುತ್ತಾನೆ. ಮಗಳ ಕುತ್ತಿಗೆ ಹಿಚುಕಿ ಹಿತ್ತಲಿಗೆ ಒಗೆಯುತ್ತಾನೆ. ತನ್ನ ಎತ್ತೆರಡನ್ನು ಅಡವಿಯ ಮಧ್ಯೆ ಬಿಟ್ಟು ಬರುತ್ತಾನೆ. ಗುಡಿಸಲ ಕದ ಮುಚ್ಚಿ ದುಡಿ ಬಾರಿಸಲು ಶುರು ಮಾಡುತ್ತಾನೆ. ಹೀಗೆ ಚೋಮ ಪ್ರತಿಭಟನೆಯನ್ನು ವೈಯಕ್ತಿಕವಾಗಿ ಧ್ವನಿಸುತ್ತಾನೆ. ಆದರೆ ಇಲ್ಲಿ ಮೇಲ್ವರ್ಗದ ಜಾತಿಶೋಷಣೆ, ವರ್ಗಶೋಷಣೆಯ ವಿರುದ್ಧ ಪ್ರತಿಭಟನೆ ಇಲ್ಲ. ಏಕೆಂದರೆ ಚೋಮನ ವರ್ತನೆ, ಸ್ವಭಾವಗಳು ಮೇಲ್ವರ್ಗದ ಆಲೋಚನೆಯನ್ನು ಪ್ರತಿನಿಧಿಸುತ್ತವೆಯೇ ಹೊರತು ದುಡಿಯುವ ವರ್ಗದ ವರ್ಗ ಪ್ರಜ್ಞೆಯ ಭಾಗವಾಗಿ ಮೂಡಿಬಂದಿಲ್ಲವಾಗಿದೆ.

'ಗ್ರಾಮಾಯಣ' ಕಾದಂಬರಿಯಲ್ಲಿ ಆಸ್ತಿ, ಅಧಿಕಾರ ನಡೆಯುವ ಆಳುವ ವರ್ಗದ ಸಂಘರ್ಷವನ್ನು ಗುರುತಿಸಬಹುದು. ವಾಡೆ, ಮಠ, ಹೊಲಗಳನ್ನು ನಿರ್ಮಾಣ ಮಾಡಿದವರು ದುಡಿಯುವ ಜನರು. ಆದರೆ ಅವರ ಹಕ್ಕುಗಳನ್ನು ವಂಚಿಸಿ ಶ್ರೀಮಂತ ವರ್ಗವು ಅವರನ್ನು ಕೃಷಿ ಭೂಮಿಯಲ್ಲಿ ಕೃಷಿ ಕಾರ್ಮಿಕರಾಗಿ ದುಡಿಸಿಕೊಳ್ಳುತ್ತಿದೆ. ಮತ್ತೊಂದು ಕಡೆ ಸ್ವಾರ್ಥ ಆಡಳಿತದಲ್ಲಿ ತನ್ನ ವರ್ಗದ ಹಿತಾಸಕ್ತಿಗಾಗಿ ದುಡಿಯುವ ಜನರನ್ನು ಬಳಸಿಕೊಳ್ಳುತ್ತದೆ. ಇಲ್ಲಿ ಸಮಾಜದ ಬದಲಾವಣೆ, ಬದುಕಿನ ಬದಲಾವಣೆಗಳು ಕಾಣಿಸಿಕೊಳ್ಳುವುದು ಸಂಘರ್ಷದ ನೆಲೆಯಲ್ಲಿಯೇ. ಮೇಲ್ವರ್ಗಗಳ ನಡುವೆ ಆಸ್ತಿ, ಅಧಿಕಾರದ ಒಡೆತನ ಹಕ್ಕಿಗಾಗಿ ಸಂಘರ್ಷ ಶುರುವಾಗಿ ಪಾದಳ್ಳಿಯು ದುರಂತದಿಂದ ಕೊನೆಗೊಳ್ಳುತ್ತದೆ.

ರಾಣೋಜಿರಾಯನ ಮರಣದ ನಂತರ ಅವನ ಎರಡು ಜನ ಹೆಂಡತಿಯರಲ್ಲಿ ಆಸ್ತಿಯ ಒಡೆತನದ ಕಲಹ ಪ್ರಾರಂಭವಾಯಿತು. ಲಕ್ಷ್ಮೀಬಾಯಿ ದೀಪಾವಳಿ ಹಬ್ಬ ಮುಗಿಸಿಕೊಂಡು ಒಂದು ಸಂಜೆ ಮರಳಿ ಊರಿಗೆ ಬಂದಾಗ ಗ್ರಾಮದ ವಿರೋಧವೇ ಅವಳನ್ನು ಸ್ವಾಗತಿಸಿತು. ದಳವಾಯಿ 'ಯವ್ವಾ ಈಗ ವಾಡೆದ ನೆಪ್ಪಾತೇನು ನಿಮಗೆ? ಹಬ್ಬದಾಗ ವಾಡೆ ಹಾಳಗೆಡವಿ ಹೋಗಿ ಈಗ ಬಂದರ ಯಾರು ಕೇಳಬೇಕು? ದೇವರು ನಮ್ಮ ಮ್ಯಾಗ ಇದ್ದಾ ಚಿಕ್ಕ ಅವ್ವಾ ಅವರು ನಾವು ಕರ್ಯಾಣಾ ಬಂದರೂ ದೊಡ್ಡ ಹಬ್ಬದಗ ವಾಡೆದಗ ದೀಪಕ್ಕೆ ದಿಕ್ಕಿಲ್ಲಧಾಂಗ ಮಾಡಿದವರಿಗೆ ಇಲ್ಲೇನ್ ದಗದ? ಎಲ್ಲಿಗೆ ಹೋಗಿದ್ದೀರೋ ಅಲ್ಲೇ ಹೋಗೂ ದಿನ' ಎಂದು ನಾಟಕೀಯವಾಗಿ ಮರ್ಯಾದೆ ಮೀರಿ ಮಾತನಾಡಿದನು.[೫೦]

ಹೀಗೆ ದುಡಿಯುವ ಜನರ ಮೂಲಕ ಬಾಪುಸಾಹೇಬ ತನ್ನ ವರ್ಗದ ಹಿತಾಸಕ್ತಿಯನ್ನು ಈಡೇರಿಸಿಕೊಳ್ಳುತ್ತಾನೆ. ಆದರೆ ಲಕ್ಷ್ಮೀಬಾಯಿ ಮನೆ ಬಿಟ್ಟು ಹೋದ ಮೇಲೆ ಪುತಳಾಬಾಯಿ ಕುರಿತು 'ದಾದಾ' ಹೀಗೆ ಹೇಳುತ್ತಾನೆ. ದೊಡ್ಡ ಅವ್ವಾವರ್ನ ಊರುಬಿಟ್ಟು ಓಡಿಸಿ ನೀನು ಮರೆದಾಡಬೇಕಂತೀಯಾ? ಎಂದು ದೊಡ್ಡ ದನಿಯಲ್ಲಿ ಕೂಗುತ್ತ ಏರಿ ಹೋಗುತ್ತಾನೆ. ಇಲ್ಲಿ ದಾದಾನಿಗೆ ವೈಯಕ್ತಿಕ ಸಿಟ್ಟಿಲ್ಲ. ಲಕ್ಷ್ಮೀಬಾಯಿ ಮೇಲಿನ ನಂಬಿಕೆ ದಾದಾನನ್ನು ಈ ವರ್ತನೆಗೆ

ತಳ್ಳುತ್ತಿದೆ. ಅಂದರೆ ಇಲ್ಲಿ ಬರುವ ದುಡಿಯುವ ವರ್ಗವು ಭೂಮಿಯ ಹಕ್ಕಿಗಾಗಿ, ಮೇಲ್ವರ್ಗದ ಶೋಷಣೆಯನ್ನು ಪ್ರತಿಭಟಿಸುವುದಿಲ್ಲ. ಮೇಲ್ವರ್ಗದ ಹಿತಾಸಕ್ತಿಗಾಗಿ ಪ್ರತಿಭಟಿಸುತ್ತಿದ್ದಾರೆ. ಚಿನ್ನಪ್ಪನ ಬಣವೆಗೆ ಬೆಂಕಿ ಹಾಕಿದ್ದು, ಲಕ್ಷ್ಮೀಬಾಯಿ ವಾಡೆಗೆ ಮರಳದಂತೆ ಪ್ರಯತ್ನಿಸಿದ್ದು, ಗೌಡರ ಹೊಲವನ್ನು ಲೂಟಿ ಮಾಡಲು ದುಡಿಯುವ ಜನರನ್ನು ಬಳಸಿಕೊಳ್ಳುತ್ತದೆ. ಆದರೆ ದುಡಿಯುವ ವರ್ಗದ ಮೇಲೆ ನಡೆಯುವ ಶೋಷಣೆಯ ವಿರುದ್ಧ ಪ್ರತಿಭಟನೆ ಇಲ್ಲ. ದಾದಾ ಚಿಮಣಾ ವಿಷಯದಲ್ಲಿ ಮೇಲ್ವರ್ಗದ ಹಿತಾಸಕ್ತಿಗಾಗಿ ಹೋರಾಡಿದುದು ವೈಯಕ್ತಿಕ ಘಟನೆಯಾಗಿ ಕಾಣುತ್ತವೆ. ಹೀಗೆ ಆಳುವ ವರ್ಗದ ವರ್ಗ ವಿಶ್ಲೇಷಣೆ ಕಾದಂಬರಿಯ ಮುಖ್ಯ ಕೇಂದ್ರವಾಗಿದೆ. ಆದರೆ ದುಡಿಯುವ ಜನರ ಹಕ್ಕಿನ ಪ್ರಶ್ನೆಯನ್ನು, ವರ್ಗಹೋರಾಟವನ್ನು ಕಾದಂಬರಿಯ ಆಳದಲ್ಲಿ ವಿರೋಧಿಸುತ್ತಿದೆ.

‘ಚಿರಸ್ಮರಣೆ’ ಕಾದಂಬರಿಯಲ್ಲಿ ವರ್ಗಸಂಘರ್ಷವನ್ನು ಕಾಣಬಹುದು. ಆಳುವ ವರ್ಗದ ಶೋಷಣೆಯ ವಿರುದ್ಧ ದುಡಿಯುವ ವರ್ಗ ಸಂಘಟಿತರಾಗಿ ಹೋರಾಡಿದ ಚರಿತ್ರೆಯನ್ನು ಕಟ್ಟಿಕೊಡುತ್ತಿದೆ. ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿ ವರ್ಗವು ರೈತರ ಭೂಮಿಯ ಹಕ್ಕನ್ನು ಆಕ್ರಮವಾಗಿ ಕಿತ್ತುಕೊಂಡು, ಅವರನ್ನು ಶೋಷಣೆ ಮಾಡುತ್ತಿದೆ. ಇದರ ಪರಿಣಾಮವಾಗಿ ಬಡತನ, ಹಸಿವು, ಅಪಮಾನಗಳು ತೀವ್ರಗೊಂಡಿವೆ. ಈ ಆಳುವ ವರ್ಗದ ಶೋಷಣೆಯನ್ನು ವಿರೋಧಿಸುವ ಕ್ರಾಂತಿಕಾರಿ ಸಂಘಟನೆಗಳ ಮೂಲಕ ವರ್ಗಸಂಘರ್ಷಕ್ಕೆ ದುಡಿಯುವ ಜನರು ಮುಂದಾಗುತ್ತಿದ್ದಾರೆ. ನಂಬಿಯಾರ್ ಮತ್ತು ನಂಬೂದರಿ ಭೂಮಾಲೀಕರ ದೌರ್ಜನ್ಯದ ವಿರುದ್ಧ ರೈತಕಾರ್ಮಿಕರು ಹೋರಾಟಕ್ಕೆ ಮುಂದಾಗುವುದನ್ನು ಚಿತ್ರಿಸುತ್ತಿದೆ.

“ಈ ಮಣ್ಣು ಯಾರದು? ನಮ್ಮದು. ಇದು ನಮ್ಮ ತಾಯ್ನೆಲ. ಈ ದೇಶ ಯಾರದು? ನಮ್ಮದು. ಇದು ನಮ್ಮ ರಾಷ್ಟ್ರ. ಹೊಲ ಯಾರದು? ಉಳುವವನದು. ಉಳುವವನೇ ಹೊಲದ ಒಡೆಯ. ಹೌದೋ ಅಲ್ಲವೊ?’[೨೨] ಎಂದು ಪಂಡಿತರ ಮಾತುಗಳು. ಭೂಮಿಯಲ್ಲಿ ಉತ್ಪಾದನೆ ಮಾಡುವ ಶ್ರಮಶಕ್ತಿಗಳಿಗೆ ಈ ಭೂಮಿಯ ಹಕ್ಕಿನ ಒಡೆತನ ಇದೆ. ಆದರೆ ಈಗಾಗಲೇ ಆಳುವ ವರ್ಗ ನಮ್ಮ ಹಕ್ಕುಗಳನ್ನು ಕಿತ್ತುಕೊಂಡಿದೆ. ಅದನ್ನು ಪಡೆದುಕೊಳ್ಳಬೇಕೆಂಬುದೇ ಕಾದಂಬರಿಯಲ್ಲಿ ಸಂಘರ್ಷಕ್ಕೆ ಕಾರಣವಾಗಿದೆ. ಆಡುವವರ ಮಕ್ಕಳು ಆಡ್ಬೇಕು ಬೇಡುವವರ ಮಕಳ್ಳು ಬೇಡ್ಬೇಕು” ಅನ್ನೋದು ಭೂಮಾಲೀಕ ವರ್ಗವು ಸಮಾಜ ಹೀಗೇ, ಇರಬೇಕು, ಶೋಷಣೆ, ಅಸಮಾನತೆ ಹೀಗೇ ಮುಂದುವರೆಯಲಿ ಎಂಬುದು ಆಳುವ ವರ್ಗದ ರಾಜಕೀಯ ಧೋರಣೆಯಾಗಿದೆ. ಈ ಧೋರಣೆಯನ್ನು ಈ ದೃಷ್ಟಿಕೋನವನ್ನು ಕಾದಂಬರಿಯು ನಿರಾಕರಿಸುತ್ತಿದೆ. “ಸಾಮ್ರಾಜ್ಯಶಾಹಿ ನಾಶವಾಗೋದನ್ನ ನೋಡಿ ಸಾಯ್ಬೇಕೂಂತ ನಮ್ಮ ಆಸೆ ನಡೆಸಿಕೊಡ್ತಾರಾ ಕೇಳು ಚಿರುಕಂಡ’.[೨೩] ಇದು ಪ್ರತಿಭಟನಾಕಾರರ ಕೊನೆಯ ಒತ್ತಾಯ. ಈ ರೀತಿಯಲ್ಲಿ ವರ್ಗ ಹೋರಾಟಕ್ಕೆ ಕೈಯೂರಿನ ರೈತರು ತಯಾರಿಯಾಗಿದ್ದರು ಎಂದು ಕಾದಂಬರಿಯು ಧ್ವನಿಸುತ್ತಿದೆ. “ದಲಿತ ಕೋಟಿಯ ಎಲುಬುಗೂಡಿನ ಮೇಲೆ ಕಟ್ಟಿದ ಈ ಸಾಮ್ರಾಜ್ಯ ಖಂಡಿತ ಪುಡಿಪುಡಿಯಾಗ್ತದೆ!

ಲೋಕದೆಲ್ಲ ದುಡಿಯುವ ಜನ ವಿಜಯಪತಾಕೆ ಹಾರಿಸಿಯೇ ಹಾರಿಸ್ತಾರೆ"[೫೪] ಎಂದು ವರ್ಗಹೋರಾಟದ ಅಂತಿಮ ಘಟ್ಟ ದುಡಿಯುವ ವರ್ಗ ಸಮಾಜವನ್ನು ಎತ್ತಿಹಿಡಿಯುತ್ತಿದೆ.

ಬರಗೂರು ರಾಮಚಂದ್ರಪ್ಪ ಅವರ 'ಸೂರ್ಯ' ಕಾದಂಬರಿಯಲ್ಲಿ ಜೀತಕ್ಕೆ ಇದ್ದ ಕರಿಯ ವರ್ಗಹೋರಾಟದ ವೈರಿಯಾಗಿದ್ದಾನೆ. ಕರಿಯ ಮತ್ತು ಗೌಡನ ಹೆಂಡತಿ ಸಂಬಂಧವು ಬೆಳೆಯುವುದನ್ನು ಮುಂಚೆ ಕರಿಯನ ಮೇಲೆ ಗೌಡನ ದೌರ್ಜನ್ಯವನ್ನು ಸೀತಕ್ಕ ತಡೆಯುತ್ತಾಳೆ. ಆವಾಗ ಗೌಡನಿಗೆ ಅಪಮಾನವಾಗುತ್ತದೆ. "ಈ ಕಳ್ಳ ಬಡ್ಡೀ ಮಗನೇ ಇದಕ್ಕೆಲ್ಲ ಮೂಲ ಈ ಬಡ್ಡಿ ಮಗನ್ನ ಜೀತಕ್ಕಿಟ್ಕೊಂಡ್ರೆ ಆ ಮನೆವಿಷ್ಯ ನನ್ನ ಮನೆವಿಷ್ಯ ಆಯ್ತಲ್ಲ!"[೫೫] ಇಲ್ಲಿ ಊಳಿಗಮಾನ್ಯಶಾಹಿ ಪ್ರತಿನಿಧಿಯಾದ ಗೌಡನ ವಿರುದ್ಧ ವರ್ಗವೈರಿಯಾಗಿ ಕರಿಯನ ಪಾತ್ರವಿದೆ. ದಲಿತ ವರ್ಗದ ಕರಿಯ ಮೇಲ್ವರ್ಗದ ಭೂಮಾಲೀಕನಿಗೆ ವೈರಿಯಾಗಿ ಕಾದಂಬರಿಯು ಚಿತ್ರಿಸುತ್ತದೆ. ಹಾಗೆಯೇ ಸೀತಕ್ಕ ಕೂಡ ತನ್ನ ವರ್ಗದಲ್ಲಿ ನಡೆಯುತ್ತಿರುವ ವರ್ಗಶೋಷಣೆಯನ್ನು ಪ್ರತಿಭಟಿಸುತ್ತಾಳೆ. ಹೆಣ್ಣೆಂಗ್ಸಿಗೆ ಬಾಯ ಬಂದಿದ್ಕೆ ಹಿಂಗಾತು ಇನ್ನು ಊರಾಗಿರೋ ಗಂಡಬಗೆಲ್ಲ ಬಾಯ ಬಂದ್ರೆ ನಿಮ್ಮ ಗತ್ಯೇನ' ಎಂದು ಹೇಳುವ ಸೀತಕ್ಕನ ಮಾತಿನಲ್ಲಿ ಸಾಮಾಜಿಕ ಸಮಸ್ಯೆಯ ಹೋರಾಟದ ಸೂಚನೆ ಇದೆ. ನಂತರ ಕರಿಯ-ಸೀತಕ್ಕ ಸೇರುವುದು ವರ್ಗಶಕ್ತಿಯ ಪ್ರತಿಬಿಂಬವಾಗಿದೆ.

ಆರ್.ವಿ. ಭಂಡಾರಿ ಅವರ 'ಬೆಂಕಿಯ ಮಧ್ಯ' ಕಾದಂಬರಿಯಲ್ಲಿ ಮುನಿಯಪ್ಪ ದಲಿತ ವರ್ಗದ ಪ್ರತಿನಿಧಿಯಾಗಿ ಓದಿ ನೌಕರಿ ಪಡೆದುಕೊಂಡಿದ್ದಾನೆ. ಬಾಲಕನಾಗಿದ್ದಾಗ ಸವರ್ಣೀಯ ಶೋಷಣೆ, ದೌರ್ಜನ್ಯಗಳ ಅನುಭವಿ. ನಗರದಲ್ಲಿ ಓದಿದ್ದಾನೆ. ಕಬಡ್ಡಿ ಆಟದಲ್ಲಿ ತನ್ನ ಮಗನ ಕಾಲು ಎಳೆದಿದ್ದಕ್ಕಾಗಿ ಅಪ್ಪನಿಂದಲೇ ಮಗನನ್ನು ಹೊಡೆಯಿಸಿದ. ಮೇಲ್ವರ್ಗದ ಪಾಳೇಗಾರಿ ನಡುವೆ ಓದಿದ್ದನು. ದಲಿತ ಯುವಕರೊಂದಿಗಿನ ಒಡನಾಟ, ಓದು, ಅಂಬೇಡ್ಕರರ ಚಿಂತನೆಗಳ ಪ್ರಭಾವದಿಂದ ಹೋರಾಟಕ್ಕೆ ಮುಂದಾಗುತ್ತಾನೆ. ದಲಿತ ಸಂಘರ್ಷ ಸಮಿತಿಯ ಮೂಲಕ ಸವರ್ಣೀಯರ ದೇವಾಲಯ ಪ್ರವೇಶದ ಸಂದರ್ಭದಲ್ಲಿ ಪೊಲೀಸರೆದುರು ಸವರ್ಣೀಯ ಗೂಂಡಾಗಳು ದಲಿತರನ್ನು ಕಲ್ಲು, ಕಬ್ಬಿಣದ ಸರಳುಗಳಿಂದ ಹೊಡೆದು ಪ್ರತಿಭಟನೆಯನ್ನು ಚದುರಿಸುವುದನ್ನು ಕಾಣಬಹುದು. ಇಲ್ಲಿ ಸವರ್ಣೀಯರು ಮತ್ತು ಪೊಲೀಸ್ ವ್ಯವಸ್ಥೆಯು ದುಡಿಯುವ ವರ್ಗದ ವಿರುದ್ಧವಿರುವ ಹಿತಾಸಕ್ತಿಯನ್ನು ಕಾದಂಬರಿಯಲ್ಲಿ ಗುರುತಿಸಬಹುದು.

'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಕೂಡ ಶಿಕ್ಷಣ ಪಡೆದ ಮಾದೇವ ಮೇಲ್ಜಾತಿ, ಮೇಲ್ವರ್ಗದ ಜಾತಿಶೋಷಣೆ ವಿರೋಧಿಸುತ್ತಾನೆ ಮತ್ತು ಸಮಾನ ಹಕ್ಕುಗಳಿಗಾಗಿ ಪ್ರತಿಭಟಿಸುತ್ತಾನೆ. ಕ್ಷತ್ರಿಯನಾಗಿ ಹುಟ್ಟಿ ಹೊಲೆಯ ಸಮುದಾಯದಲ್ಲಿ ಬೆಳೆದು ಜಾತಿಶೋಷಣೆ ವಿರುದ್ಧ ಧ್ವನಿ ಮಾಡುವ ಮಾದೇವನಿಗೆ ಅಂಬೇಡ್ಕರ್ ಚಿಂತನೆಗಳು, ದಲಿತ ಚಳುವಳಿಗಳು ಪ್ರೇರಣೆ ನೀಡಿವೆ. ಜಾತಿ ಶ್ರೇಷ್ಠತೆಯ ಮೌಲ್ಯವನ್ನು ಹುಡುಕುವ ಮಾದೇವ ದುಡಿಯುವ

ವರ್ಗದ ವರ್ಗಪ್ರಜ್ಞೆಯ ಭಾಗವಾಗಿ ಸಮಾಜದ ಸಮಸ್ಯೆಗಳ ವಿರುದ್ಧ, ವರ್ಗಶೋಷಣೆಯ ವಿರುದ್ಧ ಹೋರಾಡುವ ಪ್ರತಿಭಟನೆಗೆ ಕಾರಣನಾಗಿದ್ದಾನೆ.

ಕನ್ನಡದ ಅನೇಕ ಕಾದಂಬರಿಗಳು ಸಮಾಜದಲ್ಲಿ ಇರುವ ಸೂಕ್ಷ್ಮವಾದ ಪ್ರತಿಭಟನೆಯ ಸ್ವರೂಪವನ್ನು ಕಟ್ಟಿಕೊಡುತ್ತಿವೆ. ಭೂಮಿಯ ಅಸಮಾನತೆ ವಿರುದ್ಧ, ಜಾತಿಶೋಷಣೆ ವಿರುದ್ಧ, ವರ್ಗಶೋಷಣೆಯ ವಿರುದ್ಧ ಪ್ರತಿಭಟನೆಯ ಮಾದರಿಯಲ್ಲಿ ಪ್ರಗತಿಶೀಲ ಮತ್ತು ದಲಿತ-ಬಂಡಾಯ ಕಾದಂಬರಿಗಳು ನಿರೂಪಣೆಗೊಂಡಿವೆ. ಇದಕ್ಕೆ ವಿರುದ್ಧವಾಗಿ ನವೋದಯ, ನವ್ಯದಲ್ಲಿ ವ್ಯಕ್ತಿಸಮಸ್ಯೆಯನ್ನು ಸಾರ್ವಜನಿಕ ಸಮಸ್ಯೆಯಾಗಿ ಚಿತ್ರಿಸುತ್ತ ಅದರ ಆಳದಲ್ಲಿ ವರ್ಗಶೋಷಣೆಯನ್ನು ಸಮರ್ಥಿಸುವ ಆಳುವ ವರ್ಗದ ಆಲೋಚನೆ ಮಾದರಿಯನ್ನು ಕಾಣಬಹುದು. ಒಟ್ಟಾರೆಯಾಗಿ ಆಳುವ ವರ್ಗದ ವಿರುದ್ಧ ದುಡಿಯುವ ವರ್ಗಪ್ರಜ್ಞೆಯ ಭಾಗವಾಗಿ ಪ್ರತಿಭಟನೆಯನ್ನು ಸಾಹಿತ್ಯ ಕೃತಿಯು ಮಾಡಿರುವುದು ಕಡಿಮೆ. ಆದರೆ ವರ್ಗವಿಶ್ಲೇಷಣೆಯನ್ನು ಕಾದಂಬರಿಗಳು ಸೂಕ್ಷ್ಮವಾಗಿ ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ. ಈ ಗ್ರಹಿಸುವಿಕೆಯ ಹಿಂದೆ ಆಳುವ ವರ್ಗ ಆಲೋಚನೆಯನ್ನು ಕೆಲಸ ನಿರ್ವಹಿಸಿದೆ ಎಂದು ಹೇಳಬಹುದು.

### ೨.೪. ಬಂಡವಾಳಶಾಹಿ ಸಾಮಾಜಿಕ ಸಂಬಂಧಗಳು ಮತ್ತು ದುಡಿಯುವ ವರ್ಗ

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಊಳಿಗಮಾನ್ಯಶಾಹಿ ವ್ಯವಸ್ಥೆಯಷ್ಟೇ ಬಂಡವಾಳಶಾಹಿ ವ್ಯವಸ್ಥೆಯೂ ಸಮಾಜದ ಭಾಗವಾಗಿದೆ. ಊಳಿಗಮಾನ್ಯಶಾಹಿ ಶೋಷಣೆಯ ಮೌಲ್ಯಗಳನ್ನು ಮತ್ತಷ್ಟು ಹೆಚ್ಚಿಗೆ ಮಾಡುವುದರ ಮೂಲಕ ಸಾಮಾಜಿಕ ಸಂಬಂಧಗಳಲ್ಲಿ ಬಂಡವಾಳಶಾಹಿ ವ್ಯವಸ್ಥೆ ಬೆರೆತು ಹೋಗಿದೆ. ವಸಾಹತುಶಾಹಿ ಕಾಲಘಟ್ಟದಿಂದ ಉತ್ಪಾದನಾ ವಲಯದ ಜೊತೆಗೆ, ಬೌದ್ಧಿಕ ನೆಲೆಯಲ್ಲಿ ಹೊಸ ಸಂವೇದನೆಗಳ ಸೃಷ್ಟಿಗೆ ಈ ವ್ಯವಸ್ಥೆ ಕಾರಣವಾಗಿದೆ. ಇದರ ಬೆಳವಣಿಗೆಯಿಂದ ಆರ್ಥಿಕ ಸಂರಚನೆಯಲ್ಲಿ ಅನೇಕ ಬದಲಾವಣೆಗಳು ಘಡಿಸಿದರೂ ಶೋಷಣೆಯ ಸ್ವರೂಪದಲ್ಲಿ ಯಾವ ವ್ಯತ್ಯಾಸಗಳು ನಡೆಯಲಿಲ್ಲ. ಅಸಮಾನತೆ, ಶೋಷಣೆ, ಅನ್ಯಾಯ ದೌರ್ಜನ್ಯಗಳು ಹೆಚ್ಚಾದವೇ ಹೊರತು ಅವುಗಳ ನಿಯಂತ್ರಣ ಸಾಧ್ಯವಾಗಲಿಲ್ಲ. ಏಕೆಂದರೆ ಬಂಡವಾಳಶಾಹಿ ಸಂಪತ್ತಿನ ಒಡೆಯರಾಗಿದ್ದರೆ ಈ ಒಡೆತನದ ಹಕ್ಕು ಪಲ್ಲಟವಾಗದ ಹಾಗೆ ಕಾಪಾಡಿಕೊಳ್ಳಬೇಕಾದರೆ, ದುಡಿಯುವ ಜನರನ್ನು ಶೋಷಣೆ ಮಾಡಲೇಬೇಕು. ದುಡಿಯುವ ವರ್ಗ ದುಡಿದ ಪ್ರತಿಫಲವನ್ನು ಮೇಲ್ವರ್ಗ ಅಕ್ರಮವಾಗಿ ಕಿತ್ತುಕೊಂಡು ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಊಳಿಗಮಾನ್ಯಶಾಹಿ ವ್ಯವಸ್ಥೆಯಲ್ಲಿ ಇದ್ದ ಉದ್ಯೋಗ ಶಿಕ್ಷಣ ಮುಂತಾದ ರಂಗಗಳು ನಿರ್ದಿಷ್ಟ ಜಾತಿಗಳ ಬಂಧನದಿಂದ ಸ್ವಲ್ಪಮಟ್ಟಿಗೆ ಬಿಡುಗಡೆಗೊಂಡಿವೆ. ಕೈಗಾರೀಕರಣವು ಜಾತಿಗಳಲ್ಲಿ ಇದ್ದ ಕುಲಕಸುಬುಗಳನ್ನು ಛಿದ್ರಗೊಳಿಸಿದೆ. ಮೇಲ್ಜಾತಿ, ಕೆಳಜಾತಿ ಎನ್ನುವ ತಾರತಮ್ಯವಿಲ್ಲದೆ ಕಾರ್ಮಿಕ ವರ್ಗವಾಗಿ ದುಡಿಯುವಂತಹ ಸ್ಥಿತಿಯನ್ನು ಸೃಷ್ಟಿಸಿದೆ. ಆದರೆ ಜಾತಿ, ಜಾತಿಗಳ ನಡುವಿನ ಕಂದಕಗಳು ಇನ್ನೂ ಉಳಿದುಕೊಂಡಿವೆ. ಜೊತೆಗೆ ಸಂಪತ್ತಿನ ಅಸಮಾನತೆ, ವರ್ಗ ತಾರತಮ್ಯ, ಜಾತಿ ಅಸಮಾನತೆಗಳು ಮತ್ತಷ್ಟು ಹೆಚ್ಚಾಗಲು ಕಾರಣವಾಗಿದೆ.

ಬಂಡವಾಳಶಾಹಿ ವ್ಯವಸ್ಥೆಯಲ್ಲಿ ದುಡಿಯುವ ವರ್ಗವು ಕಾರ್ಮಿಕ ವರ್ಗವಾಗಿರುತ್ತದೆ. ಈ ದುಡಿಯುವ ವರ್ಗ ತನ್ನ ದುಡಿಮೆಯ ಪ್ರತಿಫಲವನ್ನು ಆಳುವ ವರ್ಗಕ್ಕೆ ನೀಡುತ್ತಲೇ ಬಂದಿದೆ. ದುಡಿಯದ ಆಳುವ ವರ್ಗ ಮಾತ್ರ ಈ ಪ್ರತಿಫಲವನ್ನು ತನ್ನ ಹಕ್ಕು ಎಂಬಂತೆ ಅನುಭವಿಸುತ್ತಲೇ ಬಂದಿದೆ. ದುಡಿಯುವ ಕಾರ್ಮಿಕ ವರ್ಗವನ್ನು ಉತ್ಪಾದಕ ವರ್ಗವಾಗಿ ಗುರುತಿಸಬಹುದು. ಆದರೆ ಅದು ಮಾಲೀಕ ವರ್ಗವಾಗಿರುವುದಿಲ್ಲ. ಉತ್ಪಾದನೆಗೆ ಒಡೆತನ ಇಲ್ಲದೆ ಇವರನ್ನು ಬಂಡವಾಳಶಾಹಿ ವರ್ಗವು ವಂಚಿಸಿರುವುದರಿಂದ ಇವರು ಉತ್ಪಾದಕ ವರ್ಗವಾಗಿದ್ದರೆ. ಈ ವರ್ಗವೈರುಧ್ಯವೇ ಬಂಡವಾಳಶಾಹಿ ಸಮಾಜದ ಪ್ರಧಾನ ತಳಹದಿಯಾಗಿದೆ. ಉತ್ಪಾದನಾ ಸಾಧನ ಸಲಕರಣೆಗಳು, ಯಂತ್ರಗಳು, ಕಚ್ಚಾಪದಾರ್ಥಗಳು ಮತ್ತು ಜೀವನೋಪಾಯದ ಸಾಧನಗಳಿಗೆ ಬಂಡವಾಳಶಾಹಿ ಮಾಲೀಕನಾಗಿರುತ್ತಾನೆ. ಆದ್ದರಿಂದ ದುಡಿಯುವ ವರ್ಗವನ್ನು ಶೋಷಣೆ ಮಾಡುವುದು, ಆರ್ಥಿಕ ಅಸಮಾನತೆ ಮುಂದುವರಿಯುವ ಸಲುವಾಗಿ, ಶೋಷಣೆಗೆ ಒಳಗಾದ ಕಾರ್ಮಿಕ ವರ್ಗವು ದುಡಿಮೆಯನ್ನು ಮಾರುವಂತಹ ಸಾಮಾಜಿಕ ಸಂರಚನೆಯನ್ನು ಆಳುವ ವರ್ಗ ರಚಿಸಿಕೊಂಡಿದೆ. ಈ ವರ್ಗ ತನ್ನ ಅಧೀನದಲ್ಲಿ ಇರಬೇಕು ಎಂಬುದೇ ಅವರ ಮುಖ್ಯ ಧೋರಣೆ. ತಮ್ಮ ಅಸ್ತಿತ್ವಕ್ಕೆ ಧಕ್ಕೆಯಾಗದ ರೀತಿಯಲ್ಲಿ ಕಟ್ಟಿಕೊಂಡಿರುವ ಸಾಮಾಜಿಕ ವ್ಯವಸ್ಥೆ ಕಾರ್ಮಿಕ ವರ್ಗದ ಹೋರಾಟದಿಂದ ನಾಶವಾಗುವ ಆತಂಕವು ಕಾರ್ಮಿಕ ವರ್ಗವನ್ನು ವಿಭಜಿಸುತ್ತಿರುತ್ತದೆ. ಈ ಕಾರಣದಿಂದ ಕಾರ್ಮಿಕ ವರ್ಗವು ತನ್ನ ಶ್ರಮದ ಮೌಲ್ಯವನ್ನು ಮಾರಿ ಬದುಕುವಂತಹ ಸಾಮಾಜಿಕ ಸಂಬಂಧಗಳು ದುಡಿಮೆಯಿಂದ ನಿರ್ಧಾರವಾಗುತ್ತಿವೆ. ಬಂಡವಾಳಗಾರ ಕಾರ್ಮಿಕನಿಗೆ ಕೂಲಿ ನಿಗದಿಪಡಿಸುತ್ತಾನೆ. ಉತ್ಪಾದನೆಯಿಂದ ಬರುವ ಲಾಭವನ್ನು ತಾನು ಇಟ್ಟುಕೊಂಡು ಕಾರ್ಮಿಕ ವರ್ಗದ ದುಡಿಮೆಯ ಶಕ್ತಿಯನ್ನು ಮಾರುವಂತಹ ವಸ್ತುಸ್ಥಿತಿಯನ್ನು ನಿರ್ಮಿಸುತ್ತಿರುತ್ತದೆ. ಅಭಿವೃದ್ಧಿಯ ಹೆಸರಿನಲ್ಲಿ ಹುಟ್ಟಿಕೊಂಡ ಬಂಡವಾಳಶಾಹಿ ಪದ್ಧತಿ ತನ್ನ ಬಂಡವಾಳವನ್ನು ಉತ್ಪಾದಕ ವಲಯದ ಮೇಲೆ ಹೂಡುವುದರ ಮೂಲಕ ವರ್ಗ ಶೋಷಣೆಗೆ ಇಳಿಯುತ್ತದೆ. ಬಂಡವಾಳಶಾಹಿಗಳು ಎರಡು ಮಾದರಿಯಲ್ಲಿವೆ. ದೇಶೀಯ ಬಂಡವಾಳಶಾಹಿಗಳು ಮತ್ತು ವಿದೇಶಿ ಬಂಡವಾಳಶಾಹಿಗಳು. ಈ ಎರಡು ವರ್ಗಗಳ ಹಿತಾಸಕ್ತಿ ಒಂದೇ ಆಗಿರುತ್ತದೆ. ಈ ವರ್ಗವು ಶೋಷಣೆ ಮಾಡುವುದು ದುಡಿಯುವ ವರ್ಗವನ್ನೇ. ವಿದೇಶಿ ಬಂಡವಾಳಶಾಹಿಗಳ ಆಗಮನದಿಂದ ಅನೇಕ ಬದಲಾವಣೆಗಳಿಗೆ ಕಾರಣವಾಯಿತು. ಈ ಬದಲಾವಣೆ ಎಷ್ಟರಮಟ್ಟಿಗೆ ರಾಜಕೀಯದ್ದೋ ಅಷ್ಟರಮಟ್ಟಿಗೆ ಆರ್ಥಿಕ ಹಾಗೂ ಸಾಮಾಜಿಕ, ಸಾಂಸ್ಕೃತಿಕವಾದದ್ದು ಆಗಿದೆ. ರೈಲ್ವೆಯ ಪ್ರಾರಂಭ ಇಲ್ಲಿನ ಆರ್ಥಿಕ ಪದ್ಧತಿಯ ಮೇಲೆ ಸಾಕಷ್ಟು ಪರಿಣಾಮವುಂಟುಮಾಡಿತು. ಅಂಚೆ, ದೂರವಾಣಿಗಳು, ಹಡಗುಗಳ ಸರಕು ಸಾಗಾಣಿಕೆ, ಕೈಗಾರಿಕೆಯ ಬೆಳವಣಿಗೆ, ಕೃಷಿಯಲ್ಲಿನ ಬದಲಾವಣೆಗಳು ಅವರ ಪೂರಕ ಸಾಧನಗಳಾದವು. ಇಲ್ಲಿ ನಮ್ಮವರು ತಮ್ಮ ಸಲುವಾಗಿಯೇ ಸಂಪೂರ್ಣ ಹೊಸದಾದ ದುಡಿಮೆಗೆ ಹೊಂದಿಕೊಂಡರು. ಆದರೆ ಇಂದು ಎಲ್ಲಾ ವಲಯಗಳ ಮೇಲೆ ವಿದೇಶಿ ಬಂಡವಾಳಶಾಹಿಗಳು ತಮ್ಮ ಹಕ್ಕೆಂದು ಪರಿಭಾವಿಸುತ್ತಿವೆ. ಈ ಎಲ್ಲಾ

ವಲಯಗಳಲ್ಲಿ ಕಾರ್ಮಿಕ ವರ್ಗವು ನೇರವಾಗಿ ಶ್ರಮಮೌಲ್ಯ ಶೋಷಣೆ ಒಳಗಾದ ದುಡಿಯುವ ವರ್ಗವಾಗಿದೆ.

ದೇಶೀಯ ಒಳಗಿನ ಬಂಡವಾಳಶಾಹಿಗಳು ಕೃಷಿರಂಗ, ಕೈಗಾರಿಕೆ, ಯಂತ್ರೋಪಕರಣ, ಸಾಧನ ಸಲಕರಣೆಗಳ ಒಡೆಯರಾಗಿ, ಕೃಷಿ ಕಾರ್ಮಿಕರನ್ನು, ಕಾರ್ಮಿಕ ವರ್ಗವನ್ನು ಶೋಷಣೆ ಮಾಡುವ ಆಳುವ ವರ್ಗವಾಗಿದೆ. ಊಳಿಗಮಾನ್ಯಶಾಹಿ ಭೂಮಾಲೀಕ ವರ್ಗದ ಹಿತಾಸಕ್ತಿಗೆ ಅನುಗುಣವಾಗಿ ಇಲ್ಲಿ ಕಾರ್ಯನಿರ್ವಹಿಸುವ ವರ್ಗ ಇದು. ಇವರ ಶೋಷಣೆಗೆ ಒಳಗಾಗುವ ದುಡಿಯುವ ಜನರು ಎಲ್ಲಿಯವರೆಗೆ ಇರುತ್ತಾರೋ ಅಲ್ಲಿಯವರೆಗೆ ಶೋಷಣೆ ಇದ್ದೇ ಇರುತ್ತವೆ. ಹೀಗೆ ಬಂಡವಾಳಶಾಹಿ ಮತ್ತು ದುಡಿಯುವ ವರ್ಗದ ನಡುವೆ ಶೋಷಕ-ಶೋಷಿತ ಸಂಬಂಧಗಳು ಇವೆ.

ಬಂಡವಾಳಶಾಹಿ ಮತ್ತು ಭೂಮಾಲೀಕ ವರ್ಗದ ಹಿತಾಸಕ್ತಿಗಳಿಗನುಗುಣವಾಗಿ ಹುಟ್ಟುವ ಸಾಹಿತ್ಯಕ್ಕೂ ಇವರಿಂದ ಶೋಷಣೆಗೆ ಒಳಗಾದ ಜನರ ಹಿತಾಸಕ್ತಿಯಿಂದ ಹುಟ್ಟುವ ಸಾಹಿತ್ಯಕ್ಕೂ ಮೂಲಭೂತವಾಗಿ ವ್ಯತ್ಯಾಸವಿದೆ. ಸಮಾಜವನ್ನು ಹೇಗಿದೆಯೋ ಹಾಗೆ ಉಳಿಸಿಕೊಂಡು ಹೋಗಬೇಕೆನ್ನುವುದು ಬಂಡವಾಳಶಾಹಿ ಮತ್ತು ಭೂಮಾಲೀಕ ವರ್ಗದ ಹಿತಾಸಕ್ತಿಯಾದರೆ, ಆ ನೆಲೆಗಳನ್ನು ಛಿದ್ರಗೊಳಿಸಿ ಅಲ್ಲಿ ಹೊಸದೊಂದು ಹುಟ್ಟಿಗೆ, ಸಾಮಾಜಿಕ ಬದಲಾವಣೆಗೆ ದುಡಿಯುವ ವರ್ಗದ ಸಾಹಿತ್ಯ ಒತ್ತಾಯಿಸುತ್ತದೆ. ಕಾದಂಬರಿಗಳು ಸಮಾಜದ ಸೂಕ್ಷ್ಮವಾದ ವಸ್ತುವಿಷಯಗಳನ್ನು ಗ್ರಹಿಸಿ ಕಟ್ಟಿಕೊಡುವುದರ ಮೂಲಕ ಸಾಮಾಜಿಕ ವ್ಯವಸ್ಥೆಯ ಜೊತೆಗೆ ಮುಖಾಮುಖಿಯಾಗುವುದು ಸಾಹಿತ್ಯದ ಸೃಜನಶೀಲತೆ. ಏಕೆಂದರೆ ಇದೊಂದು ಆಕೃತಿಯಾಗಿ ನೋಡದೆ ಅದನ್ನು ಸಮಾಜದಲ್ಲಿ ಇರುವ ಜ್ಞಾನಗಳನ್ನು ವಿವಿಧ ಆಯಾಮದಲ್ಲಿ ಸೃಷ್ಟಿಸುತ್ತಿರುತ್ತದೆ.

ನವೋದಯ ಕಾಲದಲ್ಲಿ ರಚನೆಯಾದ ಕಾದಂಬರಿಗಳು ಎತ್ತುವ ವಸ್ತುವಿಷಯಗಳನ್ನು ಗಮನಿಸುವುದಾದರೆ, ಕಾರಂತರ 'ಚೋಮನ ದುಡಿ' ಕಾದಂಬರಿಯಲ್ಲಿ ದಲಿತರ ದಿನನಿತ್ಯದ ಬದುಕು ಭೂಮಿಯೊಂದಿಗೆ ಬೆಸೆದುಕೊಂಡಿದೆ. ಇಲ್ಲಿ ಬರುವ ಚೋಮನ ಪಾತ್ರವು ದುಡಿಯುವ ವರ್ಗವನ್ನು ಪ್ರತಿನಿಧಿಸುತ್ತದೆ. ಇವರು ಭೂಮಿಯ ಒಡೆಯರೆಲ್ಲ. ಆದರೆ ಕೃಷಿ ಭೂಮಿಯಲ್ಲಿ ದುಡಿಮೆ ಮಾಡುವ ಕೃಷಿಕಾರ್ಮಿಕರು. ದಿನನಿತ್ಯ ಭೂಮಿಯಲ್ಲಿ ದುಡಿಯುವ ದುಡಿಮೆಗಾರರು. ಆದರೆ ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾದರೂ ಚೋಮ ಕೊನೆಯತನಕ ಭೂಮಿಯಲ್ಲಿ ಗೇಣಿಗಾಗಿ ದುಡಿಯಬೇಕು ಎನ್ನುವ ದುಡಿಮೆ ಸಂಸ್ಕೃತಿಯ ಪ್ರತೀಕವಾಗಿದ್ದಾನೆ.

ಊಳಿಗಮಾನ್ಯಶಾಹಿ ಭೂಮಾಲೀಕ ವರ್ಗವು ಗೇಣಿಗಾಗಿ ಭೂಮಿಯನ್ನು ವಂಚಿಸುತ್ತದೆ. ಆದರೆ ಚೋಮನು ಮತಾಂತರ ಹೊಂದಿದರೆ ಭೂಮಿ ಉಳುಮೆ ಮಾಡಬಹುದು ಎನ್ನುವ ಆಲೋಚನೆಯು ಬಂಡವಾಳಶಾಹಿಗಳ ಮೂಲಕ ಹರಿದು ಬಂದಿದೆ. ಆದರೆ ಚೋಮನು ಮತಾಂತರಕ್ಕೆ ಒಳಗಾಗುವುದಿಲ್ಲ. ಗೇಣಿಗಾಗಿ ಭೂಮಿಯೂ ಸಿಗುವುದಿಲ್ಲ. ಆದರೆ ಅವನ

ಮಕ್ಕಳ ತಲೆಮಾರು ಮತಾಂತರ ಹೊಂದಿ ಭೂಮಿಯ ಒಡೆತನಕ್ಕೆ ಶ್ರಮಿಸುತ್ತಾರೆ. ಆಧುನಿಕತೆಯ ಸಂದರ್ಭದಲ್ಲಿ ಬಂಡವಾಳಶಾಹಿಗಳ ಬೆಳವಣಿಗೆಯಿಂದ ಭೂಮಾಲೀಕರ ಮನೆಯಲ್ಲಿ ಜೀತದ ಆಳುಗಳಾಗಿ ದುಡಿಯುತ್ತಿದ್ದ ದುಡಿಯುವ ವರ್ಗದವರ ಬದಲಾವಣೆಯನ್ನು ಕಾದಂಬರಿಯು ನಿರಾಕರಿಸುತ್ತದೆ. ಜೊತೆಗೆ ಬಂಡವಾಳಶಾಹಿಗಳ ಶೋಷಣೆಯನ್ನು ಚಿತ್ರಿಸದೆ ಊಳಿಗಮಾನ್ಯಶಾಹಿ ಭೂಮಾಲೀಕರೇ ಚೋಮನ ಈ ಸ್ಥಿತಿಗೆ ಕಾರಣ ಎಂದು ನಿರ್ಣಯಿಸುತ್ತದೆ. ಆದರೆ ವರ್ಗ ಅಸಮಾನತೆ, ಭೂಮಿಯ ಒಡೆತನ, ಜಾತಿ ಶೋಷಣೆಯ ವಿರುದ್ಧ ಪ್ರತಿಭಟಿಸುವ ಆಸಕ್ತಿ ಹೊಂದದ ಕಾದಂಬರಿ ದಲಿತರಿಗೆ ಭೂಮಿಯ ಹಕ್ಕಿನ ಬಗ್ಗೆ ವಿವರಿಸುತ್ತದೆ. ಸಂಕಪ್ಪಯ್ಯ, ಮನ್ವೇಲ, ಬಿರುದು ಮೇಲ್ವರ್ಗದ ಶೋಷಕರಾಗಿದ್ದರು. ಚೋಮನಿಗೆ ಇವರ ಶೋಷಣೆಯ ಅರಿವು ಬಂದರೂ ಅವನ ವರ್ತನೆಗಳು ಆಳುವ ವರ್ಗವನ್ನು ಪ್ರತಿನಿಧಿಸುವ ಶ್ರಮಜೀವಿ ಚೋಮನಾಗಿ ದುಡಿಯುತ್ತಾನೆ.

ಕುವೆಂಪು ಅವರ 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಉತ್ಪಾದನಾ ಸಂಬಂಧಗಳು ಯಾಂತ್ರಿಕವಾಗಿ ನಿರೂಪಣೆಗೊಂಡಿವೆ. ಇಲ್ಲಿ ಬರುವ ಹೊಲೆಯ ಸಮುದಾಯವು ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾಗಿದೆ. ಭೂಮಾಲೀಕರ ಭೂಮಿಯಲ್ಲಿ ದುಡಿಯುವ ಕೃಷಿ ಕಾರ್ಮಿಕರು, ಜಾತಿಯಲ್ಲಿ ಇವರನ್ನು ಕೀಳಾಗಿ ಪರಿಭಾವಿಸಿದ ಭೂಮಾಲೀಕ ವ್ಯವಸ್ಥೆ ಅವರನ್ನು ಜಾತಿಯ ಹೆಸರಲ್ಲಿ ಶೋಷಣೆ ಮಾಡುತ್ತಿದೆ ಮತ್ತು ದುಡಿದ ಕೂಲಿಯನ್ನು ವಂಚಿಸಿ ಶೋಷಣೆ ಮಾಡುತ್ತಿದೆ. ಇಲ್ಲಿ ಬರುವ ಒಕ್ಕಲಿಗ ಸಮುದಾಯ ಭೂಮಿಯ ಒಡೆತನ ಹೊಂದಿರುವುದರಿಂದ ಇವರ ಕೆಳಸಮುದಾಯಗಳನ್ನು ಕ್ರೂರವಾಗಿ ನಡೆಸಿಕೊಳ್ಳುತ್ತಾರೆ. ಕಾದಂಬರಿಯಲ್ಲಿ ಬರುವ ಹೊನ್ನಾಳಿ ಹೊಡ್ತ ಇದಕ್ಕೊಂದು ಉದಾಹರಣೆ. ದುಡಿಯುವ ವರ್ಗದ ಜನರು ಭೂಮಿಯ ಹಕ್ಕನ್ನು ಕಳೆದುಕೊಂಡು, ಮೇಲ್ವರ್ಗದ ಶೋಷಣೆಗೆ ಒಳಗಾದರೂ ಯಾವುದೇ ಪ್ರತಿರೋಧವಿಲ್ಲದೆ ತಮ್ಮ ಮೇಲಾಗುವ ಶೋಷಣೆಯನ್ನು ಒಪ್ಪಿ ನಡೆಯುವ ಪಾತ್ರಗಳಾಗಿಯೇ ಕಾಣಿಸಿಕೊಳ್ಳುತ್ತವೆ. ಕಾದಂಬರಿಗೆ ವರ್ಗಸಂಘರ್ಷ, ಜಾತಿಶೋಷಣೆ, ಭೂಮಿಯ ಹಕ್ಕಿಗಾಗಿ ಧ್ವನಿ ಮಾಡುವ ಆಸಕ್ತಿಯನ್ನು ನಿರಾಕರಿಸಿರುವ ಮನೋಭಾವ ಇದೆ. ಈ ಮನಸ್ಥಿತಿಯು ಬಂಡವಾಳಶಾಹಿ ಪ್ರಭಾವದಿಂದ ಆದಂತಹ ಅನೇಕ ಬದಲಾವಣೆಗಳನ್ನು ಕಟ್ಟಿಕೊಡುವುದಕ್ಕೆ ಸಾಧ್ಯವಾಗಿಲ್ಲ. ಆ ಕಾಲದ ಸಮಾಜದಲ್ಲಿ ಬೆಳೆಯುತ್ತಿದ್ದ ಬಂಡವಾಳಶಾಹಿಗಳ ಆಧುನಿಕತೆಯನ್ನು ಕಾದಂಬರಿ ಗುರುತಿಸುವುದಿಲ್ಲ. ಮತಾಂತರ ಪ್ರಶ್ನೆಯನ್ನು ಮುಂದೆ ತಂದ ಭೂಮಿಯ ಒಡೆತನ. ಕೃಷಿ ಸಲಕರಣೆ, ಯಂತ್ರೋಪಕರಣಗಳ ಮೇಲೆ ಬಂಡವಾಳಶಾಹಿ ಪ್ರಭಾವವನ್ನು ಕಾದಂಬರಿಯು ಚರ್ಚಿಸುವುದಿಲ್ಲ. ಆದ್ದರಿಂದ ಕಾದಂಬರಿ ದುಡಿಯುವ ವರ್ಗವನ್ನು ಗುಲಾಮರಾಗಿ ಚಿತ್ರಿಸಿದೆಯೇ ಹೊರತು ಒಂದು ಶೋಷಣೆಗೆ ಒಳಗಾದ ಸಮುದಾಯ ಎಂಬುವ ವರ್ಗಪ್ರಜ್ಞೆಯನ್ನು ಆರೋಪಿಸಿದೆ. ಏಕೆಂದರೆ ಆಸ್ತಿ, ಮನೆಯ ಪಾಲು ನಡೆಯುವ ಹಾಗೆ ದುಡಿಯುವ ಜನರನ್ನು ಪಾಲು ಮಾಡುವ ಸಂಸ್ಕೃತಿಯು ಬಂಡವಾಳಶಾಹಿ ಸರಕುಸಂಸ್ಕೃತಿಯೆಂದು ಗುರುತಿಸಬಹುದು. ದುಡಿಯುವ

ಕೃಷಿ ಕಾರ್ಮಿಕರ ಹಕ್ಕು ಮತ್ತು ಅವರ ಸ್ವಾತಂತ್ರ್ಯವನ್ನು ಮೊಟಕು ಮಾಡುವುದು ಕಾದಂಬರಿಕಾರರ ನಿರೂಪಣೆಯು ಆಳುವ ವರ್ಗದ ಪ್ರಜ್ಞೆಯಾಗಿದೆ.

ಕಾರಂತರ 'ಕುಡಿಯರ ಕೂಸು' ಕಾದಂಬರಿಯಲ್ಲಿ ಕೃಷಿಯೊಂದಿಗೆ, ಬದುಕನ್ನು ಕಟ್ಟಿಕೊಂಡಿರುವ ಮಲೆಕುಡಿಯ ಸಮುದಾಯವು ಆಧುನಿಕತೆಯ ಪ್ರದೇಶದಿಂದ ತಮ್ಮ ಹಕ್ಕುಗಳನ್ನು ಕಳೆದುಕೊಂಡು ಜೀತಗಾರರಾಗಿ ಮೇಲ್ವರ್ಗದ ಭೂಮಿಯಲ್ಲಿ ದುಡಿಯುವಂತಹ ಸ್ಥಿತಿಯು ನಿರ್ಮಾಣವಾಗಿದೆ. ಭೂಮಾಲೀಕರು ವ್ಯಕ್ತಿ ಕೃಷಿಯನ್ನು ಕಾಡಿಗೆಲ್ಲ ವಿಸ್ತರಣೆ ಮಾಡಿದರ ಪರಿಣಾಮವಾಗಿ ತಮ್ಮ ಭೂಮಿಯಲ್ಲಿ ಜೀತದ ಆಳುಗಳಾಗಿ ದುಡಿಯುವಂತಹ ಪರಿಸ್ಥಿತಿಯನ್ನು(ತಿರುಮಲಭಟ್ಟ) ಆಳುವ ವರ್ಗ ಮಾಡಿದೆ. "ಈ ಮಲೆಯನ್ನು ಹತ್ತಾರು ವರ್ಷಗಳ ಕಾಲ ದುಡ್ಡುತೆತ್ತು ತಲೆಗೆ ಸುತ್ತಿ ಕೊಂಡವನು ನಾನು. ನೀವು ಇಲ್ಲಿ ಮೂಲದ ಜೀತದ ಆಳುಗಳು. ಮಲೆಯ ಕೆಲಸವೆಲ್ಲ ನಿಮ್ಮಿಂದಲೇ ಆಗುತ್ತದೆ. ನೀವಿದ್ದರೆ ಬೆಳಕು, ಇಲ್ಲದಿದ್ದರೆ ಕತ್ತಲು ಎಂದು ತಿಳಿಯಬೇಡಿ. ಹಿಂದೆ ಸಂಪಾಜೆಯಲ್ಲಿ ನನಗೆ ಹನ್ನೊಂದು ಮಲೆ ಇತ್ತು. ಇದರ ಅಪ್ಪನಂತ ಏಲಕ್ಕಿ ತೋಟ. ವಿಟ್ಲದಿಂದ ನಾನು ಜನರನ್ನು ಕಟ್ಟಿಕೊಂಡು ಹೋಗಿ ಅಲ್ಲಿ ಬೇಸಾಯ ಮಾಡಿಸುತ್ತಿದ್ದೆ. ನನ್ನೆದುರಿಗೆ ನಿಮ್ಮ ಧಿಮಾಕು ದಿಟ್ಟತನ ಬೇಡ. ಕೆಂಚ ತೀರಿ ಹೋದರೇನಾಯಿತಂತೆ? ಕೆಂಚನದಲ್ಲಿ ಮಲೆ, ನನ್ನದು, ನಾನು ಇದ್ದಿರಿ, ಬಿದ್ದಿರಿ, ಎಂದಷ್ಟು ಕಾಲ ಇಲ್ಲಿ ಇರಬಹುದಾದವರು ನೀವು. ಅದನ್ನು ಮಾತ್ರ ಮರೆಯಬೇಡಿ".[೩೩] ಇಲ್ಲಿ ಮಲೆಕುಡಿಯರ ಬದುಕಿನ ಆಶ್ರಯವಾದ ಮಲೆಯನ್ನು ಕಿತ್ತುಕೊಂಡು ಅವರ ಬದುಕಿನ ಮೇಲೆ ಶೋಷಣೆ ಮಾಡುವ ಭೂಮಾಲೀಕ ವರ್ಗವನ್ನು ಕಾದಂಬರಿಯು ಚರ್ಚಿಸುತ್ತದೆ. ಆಧುನಿಕತೆಯ ಪ್ರವೇಶದೊಂದಿಗೆ ಬಂದಂತಹ ಕೆಳಸಮುದಾಯಗಳ ಮತಾಂತರ ಕ್ರಿಯೆಯ ಪ್ರಶ್ನೆಯನ್ನು ಗಮನಿಸಿದರೆ, ವಲ್ಲಿ ಬ್ರಿಗಾಂಜಾ ಚೋಮನ ಮಗಳು ಗಿಡ್ಡಿ(ಪೌಲಿ)ಯನ್ನು ವಿವಾಹವಾಗಲು ಮತಾಂತರ ಮಾಡಲು ಪ್ರಯತ್ನಿಸುತ್ತಾನೆ. ಗಿಡ್ಡಿಯು 'ಪೌಲಿನ್' ಆಗಿ ಕುಕ್ಕು ಪೌಲು ಆಗಿ ಹೆಸರನ್ನಿಹಿಡುತ್ತಾನೆ. ಈ ಮತಾಂತರವನ್ನು ಕುಡಿಯರ ಚೋಮ ಪ್ರತಿಭಟಿಸಿ, ಬ್ರಿಗಾಂಜಾನ ಗುಡಿಸಲಿಗೆ ಬೆಂಕಿ ಹಾಕುತ್ತಾನೆ. ಇಲ್ಲಿ ಚೋಮನ ಪಾತ್ರವು ಪ್ರತಿರೋಧಿಸುತ್ತದೆ. ಆದರೆ ಅವರ ಹಕ್ಕುಗಳನ್ನು ಕಿತ್ತುಕೊಂಡು ಶೋಷಣೆ ಮಾಡುವ ಭೂಮಾಲೀಕ ವರ್ಗದ ವಿರುದ್ಧ ಮೌನ ವಹಿಸುವುದನ್ನು ಕಾಣುತ್ತೇವೆ. ಕಾದಂಬರಿಯು ಧಾರ್ಮಿಕ ಮೂಲಭೂತವಾದದ ಅಡಿಯಲ್ಲಿ ಕೆಳಸಮುದಾಯಗಳ ಮತಾಂತರವನ್ನು ನಿರಾಕರಿಸುತ್ತದೆ. ಬಂಡವಾಳಶಾಹಿ ಬೆಳವಣಿಗೆಯಿಂದ ಭೂಮಾಲೀಕರ ಭೂಮಿಯ ವಿಸ್ತರಣೆಗೆ ಅನುಕೂಲವಾಗಿದೆ. ದುಡಿಯುವ ಜನರ ಹಕ್ಕುಗಳನ್ನು ಕಳೆದುಕೊಂಡಿರುವ ನಿರಸನಗಳು ಕಾದಂಬರಿಗಳ ಮೂಲಕ ವ್ಯಕ್ತವಾಗುತ್ತವೆ.

'ಗ್ರಾಮಾಯಣ' ಕಾದಂಬರಿಯು ಬಂಡವಾಳಶಾಹಿ ವ್ಯವಸ್ಥೆಯ ಮಜಲುಗಳ ಜೊತೆಯೇ ಬೆಳೆದುಬಂದಿದೆ. ವಸಾಹತುಶಾಹಿ ವ್ಯವಸ್ಥೆಯಲ್ಲಿ ಗ್ರಾಮದ ಆಡಳಿತವು ಎದುರಿಸಿದ ಅನೇಕ ವೈರುಧ್ಯತೆಗಳನ್ನು ಕಥನ ರೂಪದಲ್ಲಿ ಚಿತ್ರಿಸಿದೆ. ವಸಾಹತುಶಾಹಿ ಮತ್ತು ಬಂಡವಾಳಶಾಹಿ,

ಭೂಮಾಲೀಕ ವರ್ಗಗಳ ವಿರುದ್ಧ ಸ್ವಾತಂತ್ರ್ಯಕ್ಕಾಗಿ, ಭೂಮಿಯ ಹಕ್ಕಿಗಾಗಿ ಹೋರಾಡುತ್ತಿದ್ದ ಸಾಮಾಜಿಕ ಚಳುವಳಿಯ ಕಾಲಘಟ್ಟದಲ್ಲಿ ಕಾದಂಬರಿಯು ರಚನೆಯಾಗಿದೆ. ಆಸ್ತಿ ಮತ್ತು ಅಧಿಕಾರದ ಒಡೆತನಕ್ಕಾಗಿ ಸಂಘರ್ಷಕ್ಕೆ ಇಳಿಯುವ ಪಾದಳ್ಳಿಯ ಆಳುವ ವರ್ಗವು, ಭೂಮಿಯ ಒಡೆತನ ತನ್ನ ವರ್ಗದಿಂದ ಕೆಳವರ್ಗಕ್ಕೆ ಪಲ್ಲಟವಾಗದ ಹಾಗೆ ನಿಯಂತ್ರಿಸುವ ಸಲುವಾಗಿ ತನ್ನ ವರ್ಗದಲ್ಲೇ ಕಲಹವನ್ನು ಸೃಷ್ಟಿ ಮಾಡುತ್ತದೆ. ದುಡಿಯುವ ವರ್ಗವನ್ನು ಬಳಸಿಕೊಂಡು ತನ್ನ ಹಿತಾಸಕ್ತಿಯನ್ನು ಈಡೇರಿಸಿಕೊಳ್ಳುತ್ತದೆ. ಇಲ್ಲಿ ನಡೆಯುವ ಚಿಮಣಾ, ನಾನಾ ಅವರ ಪ್ರಕರಣಗಳು ಭೂಮಿಯ ಹಕ್ಕಿನ ಪ್ರಶ್ನೆಯ ಮರೆಮಾಚುವಂತಹ ಸನ್ನಿವೇಶವಾಗಿ ನಿರೂಪಣೆಗೊಂಡಿವೆ. ಜಿನ್ನಪ್ಪನ ಬಣವೆಗೆ ಬೆಂಕಿ ಹಾಕಿದ್ದು, ಆಳುವ ವರ್ಗದ ವರ್ಗವೈರುಧ್ಯತೆಯಾದರೂ ಅದರ ಪರಿಣಾಮ ದುಡಿಯುವ ಜನರ ಮೇಲಾಗುತ್ತದೆ.

ಬ್ರಿಟೀಶ್ ಸಾಮ್ರಾಜ್ಯಶಾಹಿಗಳ ಆಡಳಿತವು ದೇಶದಲ್ಲಿ ಉಂಟುಮಾಡಿದ ಅನೇಕ ಬದಲಾವಣೆಗಳ ಬಗೆಗೆ ಕಾದಂಬರಿಯಲ್ಲಿ ಚಿತ್ರಣವಿಲ್ಲ. ಆದರೆ ವರ್ಗ ಹೊಂದಾಣಿಕೆಯ ಮೂಲಕ ದುಡಿಯುವ ವರ್ಗವನ್ನು ಶೋಷಣೆ ಮಾಡುವುದನ್ನು ಕಾಣುತ್ತೇವೆ. ಫಕುರುದ್ದೀನ ಗಿಬ್ಬಸ್ ಸಾಹೇಬರ ಅಧೀನದಲ್ಲಿ ಊರಿನ ಗೌಡ ಕುಲಕರ್ಣಿ ಇರಬೇಕು. ಇವರು ಸ್ಥಳೀಯ ಮಟ್ಟದಲ್ಲಿ ಆಳ್ವಿಕೆ ಮಾಡುತ್ತಾರೆ. ಈ ವರ್ಗದ ವಿರುದ್ಧ ಧ್ವನಿ ಮಾಡುವ ಕೆಳವರ್ಗದ 'ದಾದಾ'ನನ್ನು ವರ್ಗ ಹೊಂದಾಣಿಕೆಯ ಮೂಲಕ ಬಂಧಿಸುತ್ತಾರೆ. ಇಲ್ಲಿ ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿಗಳು ಕೆಳವರ್ಗದ ಹಕ್ಕಿನ ಪ್ರಶ್ನೆ ಬಂದಾಗ ಒಂದಾಗುವುದನ್ನು ಗುರುತಿಸುತ್ತೇವೆ. ಹೀಗೆ 'ದಾದಾ' ಬಂಧನವು ಈ ವರ್ಗ ಹಿತಾಸಕ್ತಿಯಿಂದಲೇ ಆದುದು. ಆದರೆ 'ದಾದಾ'ನ ಪ್ರತಿಭಟನೆ ವ್ಯಕ್ತಿವಾದಿ ಪ್ರತಿಭಟನೆಯಾಗಿ ನಿರೂಪಣೆಗೊಂಡಿದೆ. ಕಾದಂಬರಿಯಲ್ಲಿ ಶೋಷಿತ ವರ್ಗ ಇದೆ. ಆದರೆ ಈ ವರ್ಗವು ಶೋಷಕ ವರ್ಗದ ವಿರುದ್ಧ ಪ್ರತಿಭಟಿಸುವುದಿಲ್ಲ. ಆಧುನಿಕತೆಯ ಬೆಳವಣಿಗೆಯಿಂದ ಹಳೆಯ ಊಳಿಗಮಾನ್ಯಶಾಹಿ ಆಡಳಿತ ನೀತಿಗಳು ಹೊಸ ರೂಪವನ್ನು ಪಡೆದುಕೊಳ್ಳುತ್ತಿವೆ. ಆದರೆ ದುಡಿಯುವ ವರ್ಗದ ಶೋಷಣೆಯ ಸ್ವರೂಪದಲ್ಲಿ ಯಾವ ಬದಲಾವಣೆಗಳೂ ಕಾಣಿಸುವುದಿಲ್ಲ. ಭೂಮಿಯ ಹಕ್ಕನ್ನು ವಂಚಿಸಿರುವ ಆಳುವ ವರ್ಗದ ವ್ಯವಸ್ಥೆಯ ವಿರುದ್ಧ ಸಂಘರ್ಷಗಳಿಲ್ಲ. ತನ್ನ ವರ್ಗದ ಶೋಷಣೆಗೆ ಕಾರಣವಾದ ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿಗಳ ವಿರುದ್ಧ ಧ್ವನಿಯು ಕಾದಂಬರಿಯಲ್ಲಿ ಕಾಣಿಸುವುದಿಲ್ಲ. ಇಲ್ಲಿ ಬಂಡವಾಳಶಾಹಿಗಳ ಬೆಳವಣಿಗೆಯಿಂದ ಭೂಮಾಲೀಕ ವರ್ಗಗಳ ನಡುವೆಯಾದ ಆಂತರಿಕ ಬಿಕ್ಕಟ್ಟುಗಳ ಬಗೆಗೆ ವಿವರಗಳಿವೆ. ಈ ವಿವರಗಳ ಹಿಂದಿನ ಚರಿತ್ರೆಯ ಆಳದಲ್ಲಿ ಶೋಷಿತ ವರ್ಗದ ವರ್ಗಸಂಘರ್ಷವನ್ನು ಮರೆಮಾಚುವ ಆಳುವ ವರ್ಗದ ರಾಜಕೀಯ ಧೋರಣೆ ಇದೆ.

ಪ್ರಗತಿಶೀಲ ಸಾಹಿತ್ಯವು, ಸಾಹಿತ್ಯ ಮತ್ತು ಸಮಾಜದೊಂದಿಗಿನ ಸಂಬಂಧಗಳನ್ನು ಕುರಿತು ಬರವಣಿಗೆಗೆ ಹೆಚ್ಚು ಒತ್ತುಕೊಟ್ಟಿದೆ. ಏಕೆಂದರೆ ಆ ಕಾಲದ ಸಮಾಜದ ಸಮಸ್ಯೆಗಳತ್ತಲೇ

ಪ್ರಗತಿಶೀಲ ಸಾಹಿತ್ಯ ಕೇಂದ್ರೀಕೃತವಾಗಿ ಬರೆದಿರುವುದೇ ಹೆಚ್ಚು. ಈ ಕಾಲದಲ್ಲಿ ರಚನೆಯಾದ ಕಾದಂಬರಿಗಳಾದ ನಿರಂಜನರ 'ಚಿರಸ್ಮರಣೆ', ವಿಮೋಚನೆ, ಕಟ್ಟೀಮನಿಯವರ 'ಜ್ವಾಲಾಮುಖಿ'ಗಳಲ್ಲಿ ಊಳಿಗಮಾನ್ಯಶಾಹಿ ಮತ್ತು ಬಂಡವಾಳಶಾಹಿ ವರ್ಗಗಳ ವರ್ಗಶೋಷಣೆಯ ಕುರಿತು ನಿರೂಪಿಸುವುದರ ಜೊತೆಗೆ ಅಸಮಾನತೆ, ಶೋಷಣೆಯ ವಿರುದ್ಧ ಪ್ರತಿಭಟನೆ ಇದೆ. 'ಚಿರಸ್ಮರಣೆ' ಕಾದಂಬರಿಯಲ್ಲಿ ಭೂಮಾಲೀಕ ವರ್ಗವು ರೈತರ ಭೂಮಿಯನ್ನು ಅಕ್ರಮವಾಗಿ ಕಿತ್ತುಕೊಂಡು ಶೋಷಣೆ ಮಾಡಿರುವುದನ್ನು ಕಾಣುತ್ತೇವೆ. ಈ ವರ್ಗಶೋಷಣೆಯನ್ನು ಪ್ರತಿಭಟಿಸಿ, ಭೂಮಿಯ ಹಕ್ಕಾಗಿ ಕೃಷಿ ಕಾರ್ಮಿಕರು ಪ್ರತಿಭಟಿಸುವ ಕಥನವಾಗಿದೆ. ವರ್ಗ ಅಸಮಾನತೆಯನ್ನು ವಿರೋಧಿಸುವುದರ ಮೂಲಕ ವರ್ಗರಹಿತ ಸಮಾಜಕ್ಕೆ ಕರೆ ಕೊಡುತ್ತದೆ. ಶೋಷಣೆಗೆ ಒಳಗಾದ ಕೃಷಿ ಕಾರ್ಮಿಕರು ಶೋಷಕ ವರ್ಗದ ವಿರುದ್ಧ ಹೋರಾಟಕ್ಕೆ ಇಳಿಯುತ್ತಾರೆ. ಭೂಮಾಲೀಕ, ಬಂಡವಾಳಶಾಹಿ, ಸಾಮ್ರಾಜ್ಯಶಾಹಿ ವರ್ಗಶತ್ರುಗಳನ್ನು ಈ ಸಮಾಜದ ಶೋಷಕ ಶಕ್ತಿಯಾಗಿ ಗುರುತಿಸುವ ಕಾದಂಬರಿಯು ಈ ಆಳುವ ವರ್ಗಗಳ ವಿರುದ್ಧ ಕ್ರಾಂತಿಕಾರಿ ದುಡಿಯುವ ವರ್ಗವನ್ನು ಕಟ್ಟಿ ತಮ್ಮ ಹಕ್ಕಿಗಾಗಿ ವರ್ಗ ಹೋರಾಟಕ್ಕೆ ಮುಂದಾಗುವ ಆಲೋಚನೆಯನ್ನು ಚಿತ್ರಿಸಲಾಗಿದೆ. 'ಸಾಮ್ರಾಜ್ಯಶಾಹಿ ನಾಶವಾಗೋದನ್ನ ನೋಡಿ ಸಾಯ್ಬೇಕೊಂತ ನಮ್ಮ ಆಸೆ'[೫೭] ಎನ್ನುವ ಪ್ರತಿಭಟನಾಕಾರರು ಹೇಳಿರುವುದು ಅಸಮಾನತೆಯ ಸಮಾಜದ ಬದಲಾವಣೆಯನ್ನು ಬಯಸುತ್ತದೆ.

"ದಲಿತ ಕೋಟಿಯ ಎಲುಬುಗೂಡಿನ ಮೇಲೆ ಕಟ್ಟಿದ ಈ ಸಾಮ್ರಾಜ್ಯ ಖಂಡಿತ ಪುಡಿಪಡಿಯಾಗ್ತದೆ! ಲೋಕದೆಲ್ಲ ದುಡಿಯುವ ಜನ ವಿಜಯ ಪತಾಕೆ ಹಾರಿಸಿಯೇ ಹಾರಿಸ್ತಾರೆ"[೫೮] ಎಂದು ಅಬೂಬಕರ್ ಹೇಳಿರುವುದು ವರ್ಗನಾಶದ ಪರಿಧಿಯಲ್ಲಿ ಸಮಾಜವಾದ ಆಶೆಯನ್ನು ಎತ್ತಿಹಿಡಿಯುತ್ತದೆ. ಬಂಡವಾಳಶಾಹಿಗಳು ಮತ್ತು ಭೂಮಾಲೀಕರು ವಶಪಡಿಸಿಕೊಂಡಿರುವ ಭೂಮಿಯ ಹಕ್ಕು ಎಲ್ಲರಿಗೂ ಸಮಾನವಾಗಿ ಸಿಗುವ ಆಸಕ್ತಿಯನ್ನು ಕಾದಂಬರಿಯು ತಾಳುತ್ತದೆ. ಆದ್ದರಿಂದ ವರ್ಗಹೋರಾಟ ಅನಿವಾರ್ಯ ಎನ್ನುವ ನಿಲುವನ್ನು ತಾಳುತ್ತದೆ. ಹೀಗೆ ಬಂಡವಾಳಶಾಹಿಗಳು ಮತ್ತು ಭೂಮಾಲೀಕರು ವರ್ಗದ ವರ್ಗಶೋಷಣೆ ವಿರುದ್ಧ ದುಡಿಯುವ ಜನರ ಹಕ್ಕಿಗಾಗಿ ಹೋರಾಡುವ ದುಡಿಯುವ ವರ್ಗದ ರಾಜಕೀಯ ಧೋರಣೆ ಇದೆ.

ನವ್ಯ ಸಾಹಿತ್ಯದಲ್ಲಿ ರಚನೆಯಾದ ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಮತ್ತು 'ಭಾರತೀಪುರ', ವ್ಯಾಸರಾಯ ಬಲ್ಲಾಳರ 'ಬಂಡಾಯ' ಕಾದಂಬರಿಗಳಲ್ಲಿ ಬಂಡವಾಳಶಾಹಿ ಚಹರೆಗಳನ್ನು ಗುರುತಿಸಬಹುದು. ಸಮಾಜ, ವ್ಯಕ್ತಿ, ಸಮುದಾಯದೊಂದಿಗಿನ ಸಂಬಂಧಗಳತ್ತ ಇವು ಗಮನ ಹರಿಸಿವೆ. 'ಸಂಸ್ಕಾರ'ದಲ್ಲಿ ಬಂಡವಾಳಶಾಹಿ ಪ್ರಭಾವದಿಂದ ಮೂಲಭೂತವಾದ, ಜಾತಿವಾದ, ಸಮುದಾಯ ಮತ್ತು ಸಮಾಜದ ಮೌಲ್ಯಗಳಲ್ಲಿ ಬದಲಾವಣೆಯನ್ನು ಚಿತ್ರಿಸುತ್ತದೆ. ಮೇಲು-ಕೀಳು ಎಂಬ ಜಾತಿಚೌಕಟ್ಟನ್ನು ಈ ಬಂಡವಾಳಶಾಹಿಗಳ ಕಾಲದಲ್ಲಿ ಯಾವ ಯಾವ ರೀತಿಯಲ್ಲಿ ಮೂಲದಲ್ಲಿ ಬದಲಾಗುತ್ತಿವೆ ಎಂಬುದನ್ನು ಕಾದಂಬರಿ ಗುರುತಿಸುತ್ತದೆ ಮತ್ತು

ಅದನ್ನು ಮೀರುವ ಕ್ರಿಯೆ ಮಾಡಿದೆ. ಯಾವ ವರ್ಗ ಮೇಲ್ವರ್ಗದ ಶೋಷಣೆ ಒಳಗಾಗಿತ್ತೋ ಆ ವರ್ಗದ ಉತ್ಪಾದನಾ ಸಂಬಂಧಗಳನ್ನು ಮುಚ್ಚಿಟ್ಟು ಬ್ರಾಹ್ಮಣ ಸಮುದಾಯದ ನಂಬಿಕೆ, ಆಚರಣೆಯಲ್ಲಿ ಆದ ಬದಲಾವಣೆಯನ್ನು ಕಾದಂಬರಿಯು ಕೇಂದ್ರಚರ್ಚೆಯಲ್ಲಿ ನಿರೂಪಿಸುತ್ತದೆ. ಈಗಾಗಲೆ ನಾರಣಪ್ಪ, ಶ್ರೀಪತಿಯು ಬ್ರಾಹ್ಮಣರಾಗಿ ಸಂಸ್ಕೃತಿ, ಆಹಾರ ಪದ್ಧತಿ, ಮಡಿಮೈಲಿಗೆಯನ್ನು ಮೀರಿ ಬದಲಾಗಿದ್ದರೆ, ನಾರಾಯಣಪ್ಪನ ಸಾವು ಕಾದಂಬರಿಯಲ್ಲಿ ಜಾತಿ, ವರ್ಗ ಆಲೋಚನೆಗೆ ಕಾರಣವಾಗುತ್ತದೆ. ಚಂದ್ರಿ ಮತ್ತು ನಾರಣಪ್ಪನ ನಡುವಿನ ಸಂಬಂಧವು ಅಗ್ರಹಾರಕ್ಕೆ ನುಂಗಲಾರದ ತುತ್ತಾಗಿತ್ತು. ಆದರೆ ನಾರಣಪ್ಪ ಸತ್ತ ನಂತರ, ನಾರಣಪ್ಪನ ಶವಸಂಸ್ಕಾರ ಯಾರು ಮಾಡಬೇಕು ಎನ್ನುವುದು ಊರಲ್ಲೆಲ್ಲಾ ತುಂಬಿ ಅದಕ್ಕೆ ಪರಿಹಾರ ಹುಡುಕುವ ಪ್ರಾಣೇಶಾಚಾರ್ಯರು ನಂಬಿದ ಧಾರ್ಮಿಕ ಗ್ರಂಥಗಳಲ್ಲಿ ಬಗೆಹರಿಯುವುದಿಲ್ಲ. ಆದರೆ ಚಂದ್ರಿ ಮತ್ತು ಪ್ರಾಣೇಶಾಚಾರ್ಯರ ಕೂಡುವಿಕೆಯಲ್ಲಿ ಶ್ರೇಣೀಕರಣ ಸಂಸ್ಕೃತಿಯನ್ನು ಮೀರುವ ಪ್ರಯತ್ನ ಇದೆ. ಆದರೆ ಶ್ರೀಪತಿಯು ಮತ್ತು ಬೆಳ್ಳಿಯ ನಡುವಿನ ಸಂಬಂಧಗಳಲ್ಲಿ ಮೇಲ್ವರ್ಗದ ಶೋಷಣೆ ಅಡಗಿದೆ.

ನಾರಾಯಣಪ್ಪ, ಶ್ರೀಪತಿಯು ಜುಟ್ಟನ್ನು ತೆಗೆಸಿ ಕ್ರಾಫ್ ಬಿಟ್ಟಿದ್ದು ಬಂಡವಾಳಶಾಹಿ ಪ್ರಭಾವದಿಂದ. ಇದು ಮೇಲ್ಜಾತಿ-ಕೆಳಜಾತಿಗಳ ನಡುವೆ ಬಾಂಧವ್ಯಕ್ಕೆ ಕಾರಣವಾದರೆ ಇದರಲ್ಲಿ ವರ್ಗಶೋಷಣೆ ಅಜೆಂಡಾ ಅಡಗಿದೆ. ಜಾತಿ, ಧರ್ಮಗಳ ನಡುವೆ ಅಂತರಗಳು ಸೃಷ್ಟಿಯಾಗಿವೆ. ಈ ಬದಲಾವಣೆಯ ಹಿಂದೆ ನೈಸರ್ಗಿಕ ಮನಸ್ಸು ಸಂಬಂಧಗಳು ಬೆಸೆಯುವ ಕಾರ್ಯವನ್ನು ಕಾದಂಬರಿಯು ಪ್ರತಿಧ್ವನಿಸುತ್ತದೆ. ಇದೇ ಸಂದರ್ಭದಲ್ಲಿ ದುಡಿಯುವ ವರ್ಗದ ಹಕ್ಕಿನ ಪ್ರಶ್ನೆ, ಅವರ ಶೋಷಣೆಯನ್ನು ಗೌಣಗೊಳಿಸಿ ಆಳುವ ವರ್ಗದ ವರ್ಗಸಂಸ್ಕೃತಿಯ ಒಳಗೆ ದುಡಿಯುವ ವರ್ಗಪ್ರಜ್ಞೆಯನ್ನು ಕಾದಂಬರಿಯು ಆರೋಪಿಸುತ್ತದೆ. ಹಾಗೆಯೇ ಬಂಡವಾಳಶಾಹಿಗಳ ನೇರವಾದ ಶೋಷಣೆಯನ್ನು ಚಿತ್ರಿಸಿದೆ. ಭೂಮಾಲೀಕ ವರ್ಗ, ಊಳಿಗಮಾನ್ಯಶಾಹಿ ಮೌಲ್ಯಗಳಿಗೆ ಹೆಚ್ಚು ಒತ್ತು ಕೊಡುವ ಹಿನ್ನೆಲೆ ವೈದಿಕ ಪ್ರಶ್ನೆಯನ್ನು ಪ್ರಚಾರಪಡಿಸುವುದು ಕೂಡ ಆಳುವ ವರ್ಗದ ಮಾದರಿಯದು.

'ಭಾರತೀಪುರ' ಕಾದಂಬರಿಯಲ್ಲಿ ಹೊಲೆಯ ಸಮುದಾಯದವರು ಸವರ್ಣೀಯರ ಭೂಮಿಯಲ್ಲಿ ದುಡಿಯುವ ಜೀತಗಾರರಾಗಿದ್ದಾರೆ. ಹಾಗೆಯೇ ಮಲ ಹೊರುವ ವೃತ್ತಿಯನ್ನು ಮಾಡುತ್ತಿದ್ದಾರೆ. ಇವರ ಈ ಸ್ಥಿತಿಗೆ ಮೇಲ್ವರ್ಗದ ವರ್ಗಶೋಷಣೆ ಕಾರಣವಾಗಿದೆ. ಸವರ್ಣೀಯರು ಇವರ ಹಕ್ಕುಗಳನ್ನು ಕಿತ್ತುಕೊಂಡು ಅವರ ಭೂಮಿಯಲ್ಲಿ ದುಡಿಸಿಕೊಳ್ಳುತ್ತಾರೆ. ಅದೇ ಸಂದರ್ಭದಲ್ಲಿ ಕೆಳಜಾತಿಯಾದ ಕಾರಣಕ್ಕಾಗಿ ಅವರು ಮಲ ಹೊರುವ ಕ್ರೂರ ಪದ್ಧತಿಯ ಚಿತ್ರಣ ಬರುತ್ತದೆ. ಇವರ ಶೋಷಣೆಯ ವಸ್ತುಸ್ಥಿತಿಯನ್ನು ಕಾದಂಬರಿಯು ಅನಾವರಣ ಮಾಡುವ ಆಸಕ್ತಿಯು ವರ್ಗಶೋಷಣೆಯ ಭಾಗವಾಗಿಲ್ಲ. ದಲಿತ ವರ್ಗವು ದೇವಾಲಯ ಪ್ರವೇಶದ ಹಿಂದೆ ಇರುವ ಊಳಿಗಮಾನ್ಯಶಾಹಿ ಮೌಲ್ಯಗಳು ಕಾದಂಬರಿಯಲ್ಲಿ ನಿರೂಪಣೆಗೊಂಡಿವೆ. ಮಲ ಹೊರುವ ಪದ್ಧತಿಯ ವಿರುದ್ಧ ದುಡಿಯುವ ವರ್ಗ ಪ್ರತಿಭಟಿಸುವುದಿಲ್ಲ. ಮೇಲ್ವರ್ಗದ ಶೋಷಣೆಯನ್ನು

ಒಪ್ಪಿಕೊಂಡು ಹೋಗುತ್ತಾರೆ. ಜಗನ್ನಾಥನು ಮಂಜುನಾಥನ ದೇವಾಲಯ ಪ್ರವೇಶಕ್ಕೆ ಪ್ರಯತ್ನಿಸುತ್ತಾನೆ. ಆದರೆ ಅವರ ಜೀತಪದ್ಧತಿ ಕುರಿತು ಮೌನ ತಾಳುತ್ತಾನೆ. ಮೇಲ್ವರ್ಗದ ಜನರು ದುಡಿಯುವ ಜನರ ಸಮಸ್ಯೆಯನ್ನು ಯಾಂತ್ರಿಕವಾಗಿ ಗ್ರಹಿಸಿ, ಮೂಲ ಸಮಸ್ಯೆಯನ್ನು ಮರೆಮಾಚಿ ಮತ್ತೊಂದು ವಸ್ತುವಿಷಯವನ್ನು ಪ್ರಚಾರಪಡಿಸುತ್ತದೆ. ಜಗನ್ನಾಥ ಮಾಡಿರುವುದು ಇದೇ ಕೆಲಸ. ಬಂಡವಾಳಶಾಹಿ ಪ್ರಭಾವದಿಂದ ಸಂಸ್ಕೃತಿ, ವೃತ್ತಿ, ಆಚರಣೆ, ನಂಬಿಕೆಗಳಲ್ಲಿ ಬದಲಾವಣೆಗಳು ಜರುಗುತ್ತಿವೆ. ಆದರೆ ಆ ಸಂಸ್ಕೃತಿಯ ಮುಖಾಮುಖಿಯಾಗದೆ, ಇರುವುದನ್ನು ಸುಧಾರಿಸುವ ಆಲೋಚನೆಯು ಆಳುವ ವರ್ಗದ ಧೋರಣೆಯಾಗಿದೆ.

ದಲಿತ ಬಂಡಾಯ ಸಾಹಿತ್ಯದ ಬರಹಗಾರರು ತಾವು ಅನುಭವಿಸಿದ ಅನುಭವವನ್ನು ಬರಹ ರೂಪದಲ್ಲಿ ಕಟ್ಟಿಕೊಡುವುದರ ಮೂಲಕ ಅಭಿವ್ಯಕ್ತಿಸಿರುವುದು ಮುಖ್ಯವಾದುದು. ಕತೆ ಕಾದಂಬರಿಗಳಲ್ಲಿ ಶೋಷಣೆಯನ್ನು ವಸ್ತುವಾಗಿ ನಿರೂಪಿಸಿದ್ದಾರೆ. ಬರಗೂರು ರಾಮಚಂದ್ರ, ಕುಂ. ವೀರಭದ್ರಪ್ಪ, ಚೆನ್ನಣ್ಣ ವಾಲೀಕಾರ, ದೇವನೂರು, ಅರವಿಂದ ಮಾಲಗತ್ತಿ ಮುಂತಾದವರು ರಚನೆ ಮಾಡಿರುವ ಕಾದಂಬರಿಯಲ್ಲಿ ಸಾಮಾಜಿಕ ತುಡಿತವು ಸಮಾಜದ ವರ್ಗಪ್ರಜ್ಞೆಯಾಗಿ ಮೂಡಿವೆ. ಜಾತಿಶೋಷಣೆ, ಅಸಮಾನತೆ, ಹಸಿವು, ಬಡತನ, ದ್ವೇಷ ಮುಂತಾದ ವಸ್ತುಸಮಸ್ಯೆಯನ್ನು ಕಾದಂಬರಿಯು ಅಭಿವ್ಯಕ್ತಿಸಿದೆ. ದೇವನೂರ ಮಹಾದೇವ ಅವರ 'ಒಡಲಾಳ' ಮತ್ತು 'ಕುಸುಮಬಾಲೆ', ಮನಜ ಅವರ 'ಮಾಗಿ', ಅರವಿಂದ ಮಾಲಗತ್ತಿ ಅವರ 'ಕಾರ್ಯ', ಮುಳ್ಳೂರು ನಾಗರಾಜರ 'ಮರಣ ಮಂಡಲ ಮಧ್ಯದೊಳಗೆ', ಆರ್.ವಿ. ಭಂಡಾರಿ ಅವರ 'ಬೆಂಕಿಯ ಮಧ್ಯೆ', ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಮುಂತಾದ ಕಾದಂಬರಿಗಳಲ್ಲಿ ದುಡಿಯುವರ್ಗ ವರ್ಗಪ್ರಜ್ಞೆಯ ಮೇಲೆ ರಚನೆಯಾಗಿವೆ. ಊಳಿಗಮಾನ್ಯಶಾಹಿ ವ್ಯವಸ್ಥೆ ಮತ್ತು ಬಂಡವಾಳಶಾಹಿ ವ್ಯವಸ್ಥೆ ಹಾಗೂ ಜಾಗತೀಕರಣ ಸಂದರ್ಭದಲ್ಲಿ ದಲಿತ, ಕಾರ್ಮಿಕ, ರೈತರ ಸೂಕ್ಷ್ಮವಾದ ಸಮಸ್ಯೆಗಳನ್ನು ಕುರಿತು ಚಿತ್ರಿಸಿವೆ.

'ಒಡಲಾಳ'ದಲ್ಲಿ ದಲಿತ ಕುಟುಂಬವೊಂದರ ಆಂತರಿಕ ಬಿಕ್ಕಟಿಗೆ ಕಾರಣವಾಗುವ, ಭೂಮಾಲೀಕ ವರ್ಗ ಮತ್ತು ಪ್ರಭುತ್ವಶಕ್ತಿಗಳ ಶೋಷಣೆಯು ದಲಿತ ಕುಟುಂಬಗಳಿಗೆ ಉಂಟುಮಾಡಿದ ಪರಿಸ್ಥಿತಿಯು ಒಡಲಾಳದ ಕಥನವಾಗಿದೆ. ಮೇಲ್ವರ್ಗದ ಎತ್ತಪ್ಪ ಸಾಕವ್ವನ ಕುಟುಂಬದ ಮೇಲೆ ಕಡಲೆಕಾಯಿ ಆರೋಪ ಮಾಡಿ ಅವರನ್ನು ಶೋಷಣೆ ಮಾಡುತ್ತಾನೆ. ಹೀಗಾಗಲೇ ಸಾಕವ್ವ ತನ್ನ ಆಸ್ತಿಯಾಗಿದೆ. ಕೋಳಿ ಹುಂಜವನ್ನು ಕಳೆದುಕೊಂಡು ಸಂಕಷ್ಟದಲ್ಲಿ ಇರುವಾಗ ಎರಡನೆಯ ಹುಂಜ ಕೈ ತಪ್ಪುವ ಸನ್ನಿವೇಶ ದುಡಿಯುವ ವರ್ಗದ ಹಕ್ಕುಗಳ ವಂಚನೆಯ ಭಾಗವಾಗಿದೆ. ಸಾಕವ್ವನ ಎರಡನೆಯ ಹುಂಜವನ್ನು ಜಮೀನ್ದಾರರು ತೆಗೆದುಕೊಳ್ಳುವಾಗ ಎಲೆ, ಅಡಿಕೆಯನ್ನು ಮುದುಕಿಗೆ ಕೊಡುತ್ತಾರೆ. ಇದು ಅವಳಿಗೆ ಇನಾಮು. ಒಂದು ಬಗೆಯಿಂದ ಇದೊಂದು ಫ್ಯೂಡಲ್ ಸಿಸ್ಟಮ್ಮಿನ ಸಭ್ಯತೆ. ಈ ಮೂಲಕ ಫ್ಯೂಡಲ್ ವ್ಯವಸ್ಥೆಯನ್ನು ಇಲ್ಲಿ ಟೈಪಿಫಾಯ್ಡ್ ಮಾಡಲಾಗಿದೆ. ಹೀಗೆ ಮಾದರಿಗಳನ್ನು ರಚಿಸಿ ಆ ಮಾದರಿಯ ಅನ್ಯಾಯವನ್ನು

ಪ್ರಸ್ತುತಪಡಿಸುವುದೇ ಇಲ್ಲಿಯ ಹೆಚ್ಚುಗಾರಿಕೆ"[೫೯] ಎಂದು ಆರ್.ವಿ. ಭಂಡಾರಿಯವರು ಹೇಳುವುದರಲ್ಲಿ ಸತ್ಯತೆಯಿದೆ. ಸಾಹುಕಾರ ಎತ್ತಪ್ಪ ಜಮೀನ್ದಾರಿ ವ್ಯವಸ್ಥೆಯ ಮತ್ತು ಜೀತ ಪದ್ಧತಿಯ ಕುತಂತ್ರಕ್ಕೆ ಸಂಕೇತವಾದರೆ, ಪೊಲೀಸ್ ವ್ಯವಸ್ಥೆ 'ಕಾರ್ಯ'ದ ಸಂಕೇತವಾಗಿದ್ದರೆ ಇಲ್ಲಿ ಶೋಷಣೆಗೆ ಒಳಗಾದ ಸಾಕವ್ವನ ಕುಟುಂಬವು ದುಡಿಯುವ ವರ್ಗವಾಗಿ ಇವರ ಶೋಷಣೆಯನ್ನು ಒಪ್ಪಿಕೊಂಡು ಬದುಕುತ್ತಿದ್ದಾರೆ. ಆದರೆ ಎಲ್ಲಿಯೂ ಬಂಡವಾಳಶಾಹಿ ಬೆಳವಣಿಗೆಯು ದಲಿತ ಸಮುದಾಯದ ಮೇಲೆ ಬೀರಿರುವ ಅಂಶಗಳು ಕಾಣುವುದಿಲ್ಲ. ಆ ಬಗೆಯ ಅಂಶಗಳು ಇದ್ದರೂ ಕಾದಂಬರಿಗೆ ಆ ವರ್ಗ ಅಸಮಾನತೆಯ ಬಗೆಗೆ ಆಸಕ್ತಿಯು ಕಾಣುವುದಿಲ್ಲ.

'ಕುಸುಮಬಾಲೆ'ಯ ಅಸಮಾನತೆ ಕಾರಣದಿಂದ ಮನುಷ್ಯ ಸಂಬಂಧಗಳು ಜಾತಿಯ ಸುತ್ತ ಸುತ್ತುವ ಕ್ರಿಯೆಯನ್ನು ಚಿತ್ರಿಸುತ್ತದೆ. ಗಂಡು-ಹೆಣ್ಣು ಎಂಬ ಎರಡು ಜಾತಿಗಳ ನಡುವಿನ ಸಂಬಂಧಗಳು ಸಾಮಾಜಿಕ ಪ್ರಕರಣಗಳಾಗಿ ರೂಪ ಪಡೆದು ಸಂಬಂಧಗಳ ಒಳಗೆ ಬೆಸೆಯುವ ಕ್ರಿಯೆ ಇದೆ. ಕುಸುಮಳ ಮಗು ಹೊಲೆಯ ಸಮುದಾಯದ ಯುವಕ ಚನ್ನನಿಗೆ ಹುಟ್ಟಿದ್ದು. ಕುಸುಮ ಮತ್ತು ಚನ್ನ ಪ್ರತಿನಿತ್ಯ ಕೂಡುತ್ತಿದ್ದ ಜೋಪಡಿಯ ಜೋತಮ್ಮ(ಸಿಂಗಾರಮ್ಮ)ಳ ಬಾಯಲ್ಲಿ ಕತೆಯ ಆರಂಭದಲ್ಲೇ ಈ ಕುರಿತು ಪ್ರಸ್ತಾಪ ಬರುತ್ತದೆ. ಕೊನೆಯಲ್ಲಿ ಈಕೆ ಆ ಜಾಗದಲ್ಲಿ ಚನ್ನನ ಜೀವ ತೆಗೆದುದನ್ನು ಸ್ಮರಿಸಿಕೊಳ್ಳುತ್ತಾ ಸಾಯುತ್ತಾಳೆ. ಇನ್ನು ಅಕ್ಕಮಾದೇವಮ್ಮ ತನ್ನ ತೌರಿನ ಜೀತಗಾರನೊಂದಿಗೆ ಕೂಡಿದುದರಿಂದ ಅವಳ ಗಂಡ ಸತ್ತು ಹನ್ನೆರಡು ತಿಂಗಳ ನಂತರ ಗಂಡು ಮಗುವಿಗೆ ಜನ್ಮ ಕೊಡುತ್ತಾಳೆ. ಕೆಂಪಿಯು ಮೇಲ್ಜಾತಿಯವರೊಂದಿಗೆ ಕೂಡುತ್ತಾಳೆ. ಇಲ್ಲಿ ಮೇಲು-ಕೀಳು ಎಂಬ ಜಾತಿಯ ಚೌಕಟ್ಟನ್ನು ಮೀರುತ್ತದೆ. ಮಧ್ವಾಚಾರ್ಯ ಮತ್ತು ಚನ್ನ ಸಂಭಾಷಣೆಯಲ್ಲಿ 'ನೀನು ಕಂಡ ಹಾಗೆ ನನಗಂತು ಜಾತಿಭೇದವು ಇಲ್ಲಪ್ಪ ನಾನು ನಿನ್ನನ್ನು ಮುಟ್ಟಿಸಿಕೊಳ್ಳಬಾರದು ಅಂತೇ ನಿಲ್ಲವೋ. ಆದರೆ ನನಗೆ ವಯಸ್ಸಾಯ್ತು ನೋಡು: ಯಥಾರ್ಥ ಈ ಇಳಿವಯಸ್ಸಿನಲ್ಲಿ ಪದೇಪದೇ ತಣ್ಣೀರು ಸ್ನಾನವು ಆರೋಗ್ಯಕ್ಕೆ ವ್ಯತಿರಿಕ್ತ ಅಲ್ವೇನಪ್ಪ'.[೬೦] ಇಲ್ಲಿ ಜಾತಿಯ ಚಹರೆಗಳು ಬದಲಾವಣೆಯಾಗುವುದನ್ನು ನಿರೂಪಿಸುತ್ತದೆ. ಗಾರಸಿದ್ಧ ಮಾವ ಹದಿನಾರು ಎಳನೀರನ್ನು ಕದ್ದಿದ್ದಾನೆ ಎಂದು ಆರೋಪಿಸಿ ಊರವರು ಕಟ್ಟಿಹಾಕಿ ಹೊಡೆಯುತ್ತಾರೆ. ಬೆತ್ತಲು ಮಾಡಿ ನಿಲ್ಲದಲ್ಲಿ ಗುಂಪಿಗ್ಯೂ ಮೂಲಪುರುಷನಾದ ಆದಿಮಾನವನಾಗಿ ಗೋಚರಿಸುವುದು ಅವನು ಹಕ್ಕಿನ ಮೂಲವಸ್ತುವಾಗಿ ಧ್ವನಿಸುತ್ತದೆ. ಇಲ್ಲಿ ಮೇಲ್ವರ್ಗದವರು ನ್ಯಾಯಗಂಬಕ್ಕೆ ಕಟ್ಟಿ ಹಾಕಿರುವುದು ಎಳನೀರಿನ ಹಕ್ಕು ಅವರ ಖಾಸಗಿ ಪ್ರವೃತ್ತಿಯಾಗಿ ಕಾಣಿಸುತ್ತದೆ. ಮುಳ್ಳೂರು ನಾಗರಾಜ ಸೂಚಿಸುವಂತಹ ಪೊಲೀಸರಿಗೆ ಕೊಡಬೇಕಿತ್ತು ಎನ್ನುವುದು ಭೂಮಾಲೀಕ ವರ್ಗದ ವಿರುದ್ಧ ಧ್ವನಿಯಾಗಿದೆ. ಹೀಗೆ ಬಂಡವಾಳಶಾಹಿ ಪ್ರವೃತ್ತಿಯನ್ನು ಯಾಂತ್ರಿಕವಾಗಿ ಗ್ರಹಿಸಿರುವುದು ದುಡಿಯುವ ವರ್ಗದ ಪ್ರಜ್ಞೆಯಲ್ಲಿ ಬದಲಾವಣೆ ಕಾಣಿಸುವುದಿಲ್ಲ.

ವ್ಯಾಸರಾಯ ಬಲ್ಲಾಳ 'ಬಂಡಾಯ' ಕಾದಂಬರಿಗಳಲ್ಲಿ ಕಾರ್ಮಿಕ ವರ್ಗ ಮತ್ತು ಬಂಡವಾಳ ಶಾಹಿಗಳ ನಡುವಿನ ಸಂಘರ್ಷ ಇದೆ. ಕಾರ್ಮಿಕ ವರ್ಗ ತಮ್ಮ ಶ್ರಮಮೌಲ್ಯ ಶೋಷಣೆಯ

ವಿರುದ್ಧ ಪ್ರತಿಭಟಿಸುತ್ತಾರೆ. ಈ ಹೋರಾಟವನ್ನು ಆಳುವ ವರ್ಗ ಹತ್ತಿಕ್ಕುವ ಪ್ರಯತ್ನ ದಾಖಲಾಗಿದೆ. ವರ್ಗ ಸಂಘರ್ಷವು ಆರ್ಥಿಕ ಅಸಮಾನತೆಯ ತಳಹದಿಯ ಮೇಲೆ ನಿಂತಿರುವುದರಿಂದ ಶೋಷಣೆಗೆ ಒಳಗಾದ ಕಾರ್ಮಿಕ ವರ್ಗ ಬಂಡವಾಳಶಾಹಿ ವರ್ಗದ ವಿರುದ್ಧ ಪ್ರತಿಭಟಿಸುತ್ತದೆ. ಆದರೆ ಕಾದಂಬರಿಯಲ್ಲಿ ಕಾರ್ಮಿಕರು ಸಂಬಳದ ಬಡ್ತಿ, ಬೋನಸ್, ಹೆರಿಗೆ ರಜೆ, ತುಟ್ಟಿಭತ್ಯೆ ಹೆಚ್ಚಳ ಇತ್ಯಾದಿಯಾಗಿ ಸಂಘರ್ಷಕ್ಕೆ ಇಳಿಯುತ್ತದೆ. ಆದರೆ ಕಾರ್ಮಿಕರ ಶ್ರಮಶೋಷಣೆಯ ಮೇಲೆಯೇ ಬದುಕಿರುವ ಬಂಡವಾಳಶಾಹಿ ವರ್ಗವು ಕಾರ್ಮಿಕರ ಕಲ್ಯಾಣ, ಯೋಗಕ್ಷೇಮ ಅವರ ಆರ್ಥಿಕ ಸುಭದ್ರತೆ ಹೆಸರಲ್ಲಿ ಅವರ ಹೋರಾಟವನ್ನು ದಿಕ್ಕು ತಪ್ಪಿಸುತ್ತದೆ. ವರ್ಗ ಸಂಘರ್ಷವು 'ಶರ್ಮಾ ಗ್ರೂಪ್ ಆಫ್ ಇಂಡಸ್ಟ್ರೀಸ್'ನ ಸುತ್ತ ಹೆಣದುಕೊಂಡಿದೆ. ನಾಗೇಶ ಶರ್ಮಾನ ಮಗ ಸತೀಶ ಶರ್ಮಾ ಬಂಡವಾಳಶಾಹಿ ಧೋರಣೆಗಳ ಪ್ರತಿನಿಧಿಯಾಗಿ, ದುಡಿಯುವ ವರ್ಗವನ್ನು ಶೋಷಣೆ ಮಾಡುವ ಶೋಷಕ ವರ್ಗವಾಗಿದ್ದಾನೆ. ರಾಜೀವ ಬಂಡವಾಳಶಾಹಿ ವ್ಯವಸ್ಥೆಯ ಬೇರುಗಳು ನಾಶ ಮಾಡಲು ಬಾಂಬ್ ಸ್ಫೋಟಗಳಿಂದ, ಬುಲ್‌ಡೋಜರ್‌ಗಳಿಂದ ಸಾಧ್ಯವೇ ಎಂದು ಯೋಚಿಸುತ್ತಾನೆ. ಹೀಗೆ ಆಳುವವರ್ಗದ ಶೋಷಣೆಯನ್ನು ಪ್ರತಿಭಟಿಸುವ ಕಾರ್ಮಿಕ ವರ್ಗವನ್ನು ದುಡಿಯುವ ವರ್ಗವೆಂದು ಗುರುತಿಸಬಹುದು.

'ಹೊಲಗೇರಿಯ ರಾಜಕುಮಾರ' ಕಾದಂಬರಿಯು ಮೇಲು-ಕೀಳು ಎಂಬ ಜಾತಿ ತಾರತಮ್ಯದ ವಿರುದ್ಧ ಕ್ರಿಯಾಶೀಲವಾಗಿ ನಿರೂಪಣೆಗೊಂಡಿದೆ. ಮಾದೇವ ಹುಟ್ಟಿನ ಮೂಲದಿಂದ ಕ್ಷತ್ರಿಯನಾದರೂ ಕೆಳಸಮುದಾಯದ ಕುಟುಂಬದಲ್ಲಿ ಬೆಳೆಯುತ್ತಾನೆ. ಆ ಸಂಸ್ಕೃತಿಯ ಸಕಲ ಲಕ್ಷಣಗಳನ್ನು ರೂಢಿಸಿಕೊಂಡು ಜಾತಿಯ ಶೋಷಣೆಯ ವಿರುದ್ಧ ಪ್ರತಿಭಟನೆ ಮಾಡುತ್ತಾನೆ. ಸವರ್ಣೀಯರ ಶೋಷಣೆ ವಿರುದ್ಧ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾನೆ. ಅಂಬೇಡ್ಕರ್ ಬಗ್ಗೆ ಮಾದೇವನಿಗೆ ತುಂಬಾ ಭಕ್ತಿಭಾವ ಇದೆ. ಆದರೆ ಮೇಲ್ಜಾತಿಯ ವಿರುದ್ಧ ಪ್ರತಿಭಟಿಸುವ ಮಾದೇವ ತಾನು ಹೊಲೆಯನಲ್ಲವೆಂಬ ಸತ್ಯ ಗೊತ್ತಾದಾಗ ಸವರ್ಣೀಯನಾಗಲು ಪ್ರಯತ್ನಿಸುತ್ತಾನೆ. ಇಲ್ಲಿ ಜಾತಿ, ಸಂಸ್ಕೃತಿಯ ಮೌಲ್ಯವನ್ನು ಮಾದೇವ ಮಾಡಿಕೊಳ್ಳುತ್ತಾನೆ. ಈ ಪರೀಕ್ಷೆಯಲ್ಲಿ ಮೇಲ್ವರ್ಗದ ಶೋಷಕ ಸಂಸ್ಕೃತಿಯ ವಿರುದ್ಧ ಅಸಮಾಧಾನಗೊಂಡು ಮೂಲಸಂಸ್ಕೃತಿಗೆ ವಾಪಸ್ಸು ಬರುವುದು. ಆಳುವವರ್ಗದ ವಿರುದ್ಧ ದಲಿತ ಹೋರಾಟದಲ್ಲಿ ಭಾಗವಹಿಸುವುದು ಕಾಣುತ್ತೇವೆ. ಮಾದೇವ ಬಂಡವಾಳಶಾಹಿ ಬೆಳವಣಿಗೆಯಿಂದ ಅವನು ಶಿಕ್ಷಣ ಕಲಿಯುವಂತಾಯ್ತು. ಅವನು ನೌಕರಿ ಪಡೆದು ಬದುಕುವ ಕಾರ್ಮಿಕನಾಗಿ ಗುರುತಿಸಿಕೊಳ್ಳುತ್ತಾನೆ. ಇಲ್ಲಿ ದಲಿತ ಮತ್ತು ಬಲಿತ ಸಂಸ್ಕೃತಿಗಳ ಸಂಘರ್ಷ ವರ್ಗ ಪ್ರಜ್ಞೆಯ ಭಾಗವಾಗಿ ಮೂಡಿಬಂದಿವೆ. ಹೊಲೆಯ ಮಾದೇವ, ಕ್ಷತ್ರಿಯ ಮಾದೇವನಾಗಲು ಹೋಗಿ ವಿಫಲನಾಗುತ್ತಾನೆ. ಇಲ್ಲಿ ಬಂಡವಾಳಶಾಹಿ ಪ್ರಭಾವದಿಂದ ದಲಿತರು ತಮ್ಮ ಸಂಸ್ಕೃತಿಯನ್ನು ಮೀರುವ ಪ್ರಯತ್ನ ಮಾಡಿದರೂ ಮೂಲಸಂಸ್ಕೃತಿ ಇವನಿಗೆ ಶ್ರೇಷ್ಠವಾಗಿ ಕಾಣಿಸುತ್ತದೆ. ಹೀಗೆ ಕಾದಂಬರಿಯು ಬಂಡವಾಳಶಾಹಿ ಸಮಾಜದಲ್ಲಿ ದಲಿತರ ಬದಲಾವಣೆ, ಅವರು ಮೇಲ್ವರ್ಗದ ಶೋಷಣೆಯ ವಿರುದ್ಧ ಸಂಘಟಿತರಾಗಿದ್ದು ಮತ್ತೊಂದು ಬಗೆಯ ಕ್ರಿಯಾಶೀಲವಾದ ಚೌಕಟ್ಟಿಗೆ ಕಾರಣವಾಗಿದೆ.

ಹೀಗೆ ಕನ್ನಡ ಕಾದಂಬರಿಗಳು ಬಂಡವಾಳಶಾಹಿ ಬೆಳವಣಿಗೆಯನ್ನು ಗುರುತಿಸುತ್ತವೆಯೇ ಹೊರತು ಅದರ ವಿರುದ್ಧ ಪ್ರತಿಭಟನೆಯನ್ನು ಹೆಚ್ಚಿನ ಭಾಗ ಮುಚ್ಚಿಟ್ಟಿರುವುದು ಕಾದಂಬರಿಯ ಮಿತಿಯಾಗಿದೆ.

## ೨.೫. ಜಾಗತೀಕರಣದ ಬೆಳವಣಿಗೆ ಮತ್ತು ದುಡಿಯುವ ವರ್ಗ

ಜಾಗತೀಕರಣದ ಅಭಿವೃದ್ಧಿಯನ್ನು ದೇಶದ ಅಭಿವೃದ್ಧಿ ಎನ್ನುತ್ತಿರುವ ಆಳುವ ವರ್ಗದ ರಾಜಕಾರಣವು ಜಾಗತೀಕರಣ ದೇಶದ ಅಭಿವೃದ್ಧಿಗೆ ಅನಿವಾರ್ಯ ಎಂದು ಸಾರುತ್ತಾ ಬೆಳೆಸುತ್ತಿದೆ. ಕಳೆದ ಎರಡು ದಶಕಗಳಿಂದ ಜಾಗತೀಕರಣದ ಬೆಳವಣಿಗೆ ಹಾಗೂ ಅದರ ಪರಿಣಾಮಗಳನ್ನು ವೈಚಾರಿಕ ಸಾಹಿತ್ಯವು ಚರ್ಚೆ ಮಾಡುತ್ತಲೇ ಬಂದಿದೆ. ಈ ಚರ್ಚೆಯನ್ನು ೧೯೯೨ರಿಂದ ಆರಂಭಿಸುವವರೇ ಹೆಚ್ಚು. ಆದರೆ ಭಾರತದಲ್ಲಿ ವಸಾಹತುಶಾಹಿಗಳ ಕಾಲದಿಂದಲೇ ಇದರ ಬೆಳವಣಿಗೆ ಪ್ರಾರಂಭವಾಗಿವೆ. ಅಂದರೆ ನವವಸಾಹತು ವ್ಯವಸ್ಥೆಯು ಪ್ರಕ್ರಿಯೆಯಾಗಿ ಬೆಳೆಯುತ್ತಾ ಬಂದಿದೆ. ೧೯೪೭ರಲ್ಲಿಯೇ ನೆಹರು ಸರಕಾರ ಪ್ರಕಟಿಸಿದ ಪ್ರಸಿದ್ಧStatus and Policyಯಿಂದ ವಿದೇಶಿ ಬಂಡವಾಳ ಹಾಗೂ Transe National Comparies (TNC) ಹಾಗೂ ಹೊಸ ಬಹುರಾಷ್ಟ್ರೀಯ ಕಂಪನಿಗಳು(MNCS) ಬಗ್ಗೆ ಹಸಿರು ನಿಶಾನೆ ತೋರಿಸಿದರು. ಈ ಮೂಲಕ ಬಹುರಾಷ್ಟ್ರೀಯ ಕಂಪನಿ ಹಾಗೂ ವಿದೇಶಿ ಬಂಡವಾಳ ಬೆಳವಣಿಗೆ ICICI ಮೂಲಕವೇ ಪ್ರಪಂಚ ಬ್ಯಾಂಕ್ ತನ್ನ ಹೂಡಿಕೆ ಹಾಗೂ ಶೋಷಣೆಯ ಜಾಲಕ್ಕೆ ಭದ್ರವಾದ ಬುನಾದಿಯನ್ನು ಹಾಕಿಕೊಂಡಿತು. ತದನಂತರ ಸರಕಾರ ಎಲ್ಲಾ ಯೋಜನೆಗಳು ಐಎಂಎಫ್ ಪ್ರಪಂಚ ಬ್ಯಾಂಕ್ ಹಾಗೂ ಬಹುರಾಷ್ಟ್ರೀಯ ಕಂಪನಿಗಳ ಹಣಕಾಸು ಹಾಗೂ ಮಾರುಕಟ್ಟೆಯ ಹಿತಕ್ಕೆ ಪೂರಕವಾಗಿ ಜಾರಿಗೊಳ್ಳತೊಡಗಿದವು. ಹೀಗೆ ಜಾಗತೀಕರಣದ ಬೆಳವಣಿಗೆ ಆಗಿದೆ.

೯೦ರ ದಶಕದ ನಂತರ ಕೃಷಿ, ಕೈಗಾರಿಕೆ, ಸೇವಾವಲಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳ ಮೂಲಕ ಈ ದೇಶದ ಶೋಷಣೆಯನ್ನು ಶುರುಮಾಡಿದೆ. ೧೯೯೨ರಲ್ಲಿ ಕಾಂಗ್ರೆಸ್ ಸರಕಾರ ಹೊಸ ಆರ್ಥಿಕ ನೀತಿಗಳ ಜಾರಿಗೆ ಮಾಡಿ ಇಡೀ ಭಾರತ ದೇಶವನ್ನು ಅಂತಾರಾಷ್ಟ್ರೀಯ ಹಣಕಾಸು ಸುಲಿಗೆಗೆ ತೆರೆಯಲಾರಂಭಿಸಿತು. ಮುಕ್ತ ಆರ್ಥಿಕ ನೀತಿಯಿಂದ ಭಾರತ ಭೂಕೈಲಾಸವಾಗಲಿದೆ ಎಂದು ಪ್ರಚಾರ ಮಾಡಲಾಯಿತು. ಇದಕ್ಕೆ ದೇಶೀಯ ಆಳುವ ಪಕ್ಷಗಳು ಸಮ್ಮತಿ ಸೂಚಿಸಿದವು. ಜಾಗತೀಕರಣಕ್ಕೆ ಮಾನವೀಯ ಮುಖವಾಡ ಇರಬೇಕೆಂಬ ಅಮರ್ತ್ಯಸೇನ್ ಸಿದ್ಧಾಂತವನ್ನು ಉಲ್ಲೇಖಿಸುತ್ತಲೇ ಇದರ ಆಸಲಿ ಮುಖವನ್ನು ಮರೆಮಾಚಲಾಯಿತು. ಹೀಗೆ ಜಾಗತೀಕರಣ ದೇಶದ ಸಂಪದ್ಭರಿತ, ನೈಸರ್ಗಿಕ ಸಂಪನ್ಮೂಲ ಮತ್ತು ಮಾನವ ಸಂಪನ್ಮೂಲಗಳ ಸುಲಿಗೆಗೆ ಬುನಾದಿಯನ್ನು ಹಾಕಿಕೊಂಡಿದೆ.

ಈ "ಸಾಮ್ರಾಜ್ಯಶಾಹಿ ಶೋಷಣೆಯನ್ನು "ಶೋಷಣೆಯಲ್ಲ; ಸುಧಾರಣೆ ಮತ್ತು ಅಭಿವೃದ್ಧಿ ಎಂಬ ಹೆಸರಿನಲ್ಲಿ ಜಾರಿ ಮಾಡಲಾಯಿತು. ಈ ಹಿನ್ನೆಲೆಯಲ್ಲಿ ಜಾಗತೀಕರಣ ಇವು ಸ್ವತಂತ್ರವಾದ

ಆರ್ಥಿಕ ಕಾರ್ಯಕ್ರಮವಲ್ಲ. ಬದಲಾಗಿ ಅದು ಸಾಮ್ರಾಜ್ಯಶಾಹಿಯ ಜಾಗತೀಕರಣ. ಹಾಗಾಗಿ ಜಾಗತೀಕರಣವನ್ನು ಒಂದು ಬಿಡಿಯಾದ ಆರ್ಥಿಕ ಕಾರ್ಯಕ್ರಮವೆಂದು ಪರಿಗಣಿಸಬಾರದು. ಅದು ಸಾಮ್ರಾಜ್ಯಶಾಹಿ ಶೋಷಣೆಯ ಮತ್ತು ದಬ್ಬಾಳಿಕೆಯ ಒಂದು ಭಾಗ. ಅದು ವಿಶಾಲವಾದ ಸಾಮಾಜಿಕ ಭಾವನೆಯಾಗಿ, ಮನೋಧರ್ಮಕ್ಕಾಗಿ, ಮಾರುಕಟ್ಟೆ ಜೀವನ ಶೈಲಿಯ ಪ್ರಜ್ಞೆಯಾಗಿ ಬರುತ್ತಿದೆ".[೮] ಅಂದರೆ ಇದು ಒಂದು ಆಳುವ ವರ್ಗದ ಆಲೋಚನಾಕ್ರಮವಾಗಿ ಜಾರಿಯಲ್ಲಿದೆ. ಆದ್ದರಿಂದ ಸಮಾಜದಲ್ಲಿ ಇದ್ದ ವರ್ಗ ಅಸಮಾನತೆ, ಸಂಪತ್ತಿನ ಅಸಮಾನತೆ, ಹಸಿವು ಅವಮಾನಗಳು ಮುಂದುವರಿಸಿಕೊಂಡು ಹೋಗುವುದಕ್ಕಾಗಿ ಇಲ್ಲಿ ಇದ್ದ ಊಳಿಗಮಾನ್ಯಶಾಹಿ ಭೂಮಾಲೀಕರು, ಈ ದೇಶದ ಬಂಡವಾಳಶಾಹಿಗಳು, ಜಾಗತೀಕರಣವನ್ನು ಜಾರಿಗೆ ಒತ್ತಾಯಿಸಿ, ಜಾರಿ ಮಾಡಿದ್ದರಿಂದ ದೇಶವನ್ನು ಹೊಸ ದಾರಿಯಲ್ಲಿ ನಡೆಯುವಂತೆ ಹಳೆಯ ಶೋಷಣೆಯ ಮೌಲ್ಯಗಳನ್ನು ಅಭಿವೃದ್ಧಿಗೊಳಿಸಿದರು. ಇದರ ವಿರುದ್ಧ ದುಡಿಯುವ ವರ್ಗದವರ ಆಲೋಚನೆ ಮತ್ತು ಪ್ರತಿಭಟನೆಯನ್ನು ಬೇರೆ ಕಡೆಗೆ ತಿರುಗಿಸಲು ಇಲ್ಲಿ ಹತ್ತಿಕ್ಕುವ ವಿಧಾನಗಳನ್ನು ಜಾರಿಗೊಳಿಸುತ್ತಿವೆ. ಆಳುವ ವರ್ಗದ ಶೋಷಣೆಯನ್ನು ಒಪ್ಪಿಕೊಂಡು, ಹೊಂದಿಕೊಂಡು ಹೋಗುವಂತಹ ವಿವಿಧ ಹುನ್ನಾರಗಳನ್ನು ಮಾಡುತ್ತಿದೆ.

ಜಾಗತೀಕರಣವನ್ನು ಕುರಿತು ಕನ್ನಡದ ವೈಚಾರಿಕ ಸಾಹಿತ್ಯ ಅನೇಕ ಚರ್ಚೆಗಳನ್ನು ಮಾಡಿದೆ ಮತ್ತು ಮಾಡುತ್ತಿದೆ. ಅದರಲ್ಲಿಯೂ ಇಂದು ಅದರ ವಸ್ತುವಿಷಯಗಳನ್ನು ಕುರಿತು ಅನಿವಾರ್ಯತೆ ಮತ್ತು ಅದರ ಅಭಿಪ್ರಾಯಗಳನ್ನು ಕುರಿತು ಗಂಭೀರವಾಗಿ ಯೋಚಿಸುವಂತಹ ಸ್ಥಿತಿ ಇದೆ. ಯಾಕೆಂದರೆ ಈ ಜಾಗತೀಕರಣ ಮತ್ತು ದೇಶೀಯ ಆಳುವ ವರ್ಗವು ದೇಶದ ನೈಸರ್ಗಿಕ ಸಂಪನ್ಮೂಲ ಮತ್ತು ಮಾನವ ಸಂಪನ್ಮೂಲಗಳನ್ನು ಲೂಟಿ ಮಾಡಲು ಹೊರಟಿವೆ. ಊಳಿಗಮಾನ್ಯ ವ್ಯವಸ್ಥೆಯಿಂದ ತನ್ನ ಹಕ್ಕುಗಳನ್ನು ಕಳೆದುಕೊಂಡಿರುವ ದುಡಿಯುವ ವರ್ಗವು ಇಂದು ನವವಸಾಹತು ಶೋಷಣೆಗೆ ನೇರವಾಗಿ ಬಲಿಯಾಗುತ್ತಿದ್ದಾರೆ. ಉತ್ಪಾದನೆ ವಲಯವನ್ನು ತನ್ನ ಹಿತಾಸಕ್ತಿಗೆ ಒಳಮಾಡಿಕೊಂಡಿರುವುದನ್ನು ಕಾಣುತ್ತೇವೆ. ಜಾಗತಿಕ ಬಂಡವಾಳವಾಗಲಿ, ದೇಶೀಯ ಬಂಡವಾಳವಾಗಲಿ ಇವೆರಡರ ಉದ್ದೇಶ ಲಾಭ ಗಳಿಸುವುದು. ಇವು ದುಡಿಯುವ ಜನರ ಬಗ್ಗೆ ಯೋಚನೆಯನ್ನು ಮಾಡಲಾರವು. ಇಲ್ಲಿ ದುಡಿಯುವ ವರ್ಗದ ವೈಚಾರಿಕತೆಗೆ ಮಾನ್ಯತೆ ಇರುವುದಿಲ್ಲ. ತನ್ನ ವರ್ಗದ ವಿರುದ್ಧ ಯಾವುದೇ ರಂಗ ಇರಬಾರದು ಎನ್ನುವ ಮನೋಧರ್ಮ ಇಲ್ಲಿ ಕಾರ್ಯ ಚಟುವಟಿಕೆಗೆ ಮಾಡುತ್ತಿರುತ್ತದೆ.

ಜಾಗತೀಕರಣದ ನೀತಿಗಳನ್ನು ಡಿ.ಆರ್. ನಾಗರಾಜ ಅವರು "ಜಾಗತೀಕರಣದ ಅಂತರ್ಗತ ಸರ್ವಾಧಿಕಾರಿ ಧೋರಣೆಯನ್ನು ಎದುರಿಸುವಲ್ಲಿ ವ್ಯಕ್ತಿ ಸಮುದಾಯಗಳು ತಮ್ಮ ಸ್ವಂತಿಕೆಯ ಕಥನಗಳನ್ನು ೧. ಆಸೆಯನ್ನಾಧರಿಸಿಕೊಂಡು, ೨. ಹಸಿವನ್ನು ಆಧರಿಸಿಕೊಂಡು, ೩. ಅರ್ಥವನ್ನಾಧರಿಸಿಕೊಂಡು ಸೃಜಿಸಿಕೊಳ್ಳುತ್ತವೆ"[೮] ಎಂದು ವರ್ಗೀಕರಿಸುತ್ತಾರೆ. ಅದೇ ರೀತಿಯಾಗಿ

ಡಾ. ಬಿ.ಎಂ. ಪುಟ್ಟಯ್ಯ ಅವರು ಆಯಾ ವಲಯದವರು ತಮ್ಮ ವಲಯ ನಿರ್ದಿಷ್ಟ ವರ್ಗಹಿತಾಸಕ್ತಿಗೆ ಪೂರಕವಾದ ಜಾಗತೀಕರಣವನ್ನು ವಿವರಿಸುತ್ತಿದ್ದಾರೆ, ನಿರೂಪಿಸುತ್ತಿದ್ದಾರೆ ಎಂದು ಮೂರು ಮಾದರಿಯಲ್ಲಿ ವರ್ಗೀಕರಿಸುತ್ತಾರೆ.

"೧. ಸಂಸದೀಯ ರಾಜಕಾರಣದಲ್ಲಿ: ದೇಶದ ಅಭಿವೃದ್ಧಿಗೆ ಜಾಗತೀಕರಣ ಅನಿವಾರ್ಯ.

೨. ಜಾತಿ ಸಂಘಟನೆಗಳಲ್ಲಿ: ಜಾಗತೀಕರಣದಿಂದ ಮೀಸಲಾತಿಗೆ ಧಕ್ಕೆ ಬರುತ್ತದೆ.

೩. ಸಾಹಿತ್ಯ ಸಂಸ್ಕೃತಿ ಚರ್ಚೆಗಳಲ್ಲಿ: ಪ್ರಾದೇಶಿಕತೆ, ದೇಶೀಯತೆ, ಸ್ಥಳೀಯತೆಗಳು ನಾಶವಾಗುತ್ತವೆ. ಬಹುರೂಪಿ ಸಂಸ್ಕೃತಿಗಳು ನಾಶವಾಗುತ್ತವೆ."

ಈ ಇಬ್ಬರು ಜನ ಲೇಖಕರು ಜಾಗತೀಕರಣ ಯಾವ ರೀತಿಯಲ್ಲಿ ವೈಚಾರಿಕ ರಾಜಕೀಯ ಚಿಂತನೆಗಳಲ್ಲಿ ಚರ್ಚೆಯಾಗುತ್ತಿವೆ ಎಂಬುದನ್ನು ಗುರುತಿಸಿದ್ದಾರೆ. ಈ ಎರಡು ಆಲೋಚನೆಗಳಿಗೆ ಭಿನ್ನವಾಗಿ ಮೊಗಳ್ಳಿ ಗಣೇಶ್. "ಮೂರನೇ ಜಗತ್ತಿನ ದೇಶಗಳಿಗೆ ಜಾಗತೀಕರಣವನ್ನು ಸುಲಭವಾಗಿ ನುಂಗುವಂತೆಯೂ ಇಲ್ಲ ಅಥವಾ ಹೊರಹಾಕುವುದಕ್ಕೂ ಆಗುವುದಿಲ್ಲ"[೨] ಎಂದು ಹೇಳುತ್ತಾರೆ. ಈ ಎಲ್ಲಾ ಅಭಿಪ್ರಾಯಗಳನ್ನು ಗಮನಿಸಿದ್ದರೆ ಜಾಗತೀಕರಣ ದೇಶದ ಪ್ರತಿಯೊಂದು ವಲಯದಲ್ಲಿ ತನ್ನ ವರ್ಗದ ಹಿತಾಸಕ್ತಿಗಾಗಿ ದುಡಿಯುತ್ತಿದೆ. ಈ ಚಿಂತನೆಗಳನ್ನು ಆಧಾರವಾಗಿಟ್ಟುಕೊಂಡು ನೋಡುವುದಾದರೆ, ವರ್ಗದ ಅಸಮಾನತೆಯನ್ನು ಒಪ್ಪಿಕೊಳ್ಳುವ ಅನೇಕ ಮೇಲ್ವರ್ಗದ ಜನಸಮುದಾಯಗಳು ಜಾಗತೀಕರಣವನ್ನು ಮುಂದುವರಿಸಿಕೊಂಡು ಹೋಗುವ ಆಲೋಚನೆಯಲ್ಲಿ ಮುಂದಾಗಿದ್ದಾರೆ. ಅದೇ ರೀತಿಯಲ್ಲಿ ಆಳುವ ವರ್ಗ ಅಭಿವೃದ್ಧಿಯನ್ನು ದೇಶದ ಅಭಿವೃದ್ಧಿ ಎಂದು ನಿರೂಪಿಸುವರು. ದೇಶದ ಸಂಸ್ಕೃತಿ ನಾಶವಾಗುತ್ತದೆ ಎಂದು ಹೇಳುತ್ತಲೇ ವರ್ಗಶೋಷಣೆ ಮಾಡುವ ಭೂಮಾಲೀಕ ವರ್ಗ, ಬಂಡವಾಳಶಾಹಿ ವರ್ಗದ ಆಲೋಚನೆಯನ್ನು ತನ್ನ ಆಲೋಚನೆಯಾಗಿ ಅಭಿವ್ಯಕ್ತಿಸುವ ಜನರು ಜಾಗತೀಕರಣ ಬೇಕು ಎಂದು ವಾದ ಮಾಡುತ್ತಿದ್ದಾರೆ. ಸಮಾಜದ ಅಸಮಾನತೆ, ಅನ್ಯಾಯ, ಶೋಷಣೆ, ದೌರ್ಜನ್ಯ, ಅಪಮಾನಗಳನ್ನು ಮಾಡುವ ಆಳುವ ವರ್ಗದ ರಾಜಕೀಯ ಧೋರಣೆಗಳನ್ನು ವಿರೋಧಿಸುವರು. ಜಾಗತೀಕರಣ ಬೇಕಾಗಿಲ್ಲ ಎಂದು ವಾದಿಸುತ್ತಿದ್ದಾರೆ. ಹೀಗೆ ಪರ-ವಿರೋಧಗಳ ನಡುವೆ ಜಾಗತೀಕರಣದ ವಸ್ತುಸ್ಥಿತಿಯನ್ನು ತಮ್ಮ ಆಲೋಚನಾ ವಿಧಾನದಲ್ಲಿ ಜಾರಿ ಮಾಡುತ್ತಿರುವುದನ್ನು ಕಾಣಬಹುದು. ಹೀಗೆ ಜಾಗತೀಕರಣದಿಂದ ಆಗುವ ಪರಿಣಾಮಕ್ಕೆ ಬಲಿಯಾಗುವವರು ಮೊದಲಿಗೆ ದುಡಿಯುವ ಜನರು. ನಂತರದಲ್ಲಿ ಮಧ್ಯಮ, ಶ್ರೀಮಂತ ವರ್ಗಗಳ ಮೇಲೂ ಇದರ ಪರಿಣಾಮ ಆಗುವುದು. ಏಕೆಂದರೆ ವರ್ಗವೈರುಧ್ಯತೆಯು ಏಕಸ್ವಾಮ್ಯ ಆಡಳಿತಕ್ಕೆ ಮುಂದಾಗುತ್ತದೆ. ಹೀಗೆ ಮಾನವನ ಶ್ರಮವನ್ನು ಸರಕಿನ ರೀತಿಯಲ್ಲಿ ಖರೀದಿಸಿ ತನ್ನ ಹಿತಾಸಕ್ತಿಗೆ ಅನುಗುಣವಾಗಿ ಬೆಳೆಸಿಕೊಳ್ಳುತ್ತಿದೆ. ಅಂದರೆ ನಿಸರ್ಗ ಮತ್ತು ಮಾನವ ಸಂಪನ್ಮೂಲಗಳು ಈ ಜಾಗತೀಕರಣದ ದಾಳಿಗೆ ಒಳಗಾಗುತ್ತಿವೆ.

ಸಾಮಾಜಿಕ ವ್ಯವಸ್ಥೆಯ ಮೇಲೆ ಇದರ ಪ್ರಭಾವವಿರುವುದರಿಂದ ಆರ್ಥಿಕ, ರಾಜಕೀಯ ಬದಲಾವಣೆಗಳ ಮೇಲೆ ಆಗಿರುವ ಅನೇಕ ಅಂಶಗಳನ್ನು ಕಾದಂಬರಿ ಸಾಹಿತ್ಯ ನಿರೂಪಿಸಿದೆ. ನಿರಂಜನ ಅವರ 'ಚಿರಸ್ಮರಣೆ' ಕಾದಂಬರಿಯಲ್ಲಿ ಸಾಮ್ರಾಜ್ಯಶಾಹಿಯ ವಿರುದ್ಧ ರೈತರ ಹೋರಾಟ ಇದೆ. ರೈತರ ಭೂಮಿಯ ಹಕ್ಕನ್ನು ಭೂಮಾಲೀಕರು ಮತ್ತು ಬಂಡವಾಳಶಾಹಿಗಳು ಅಕ್ರಮವಾಗಿ ಕಿತ್ತುಕೊಂಡಿದ್ದಾರೆ. ಇದರಿಂದ ರೈತರು ಈ ಆಳುವ ವರ್ಗದ ಶೋಷಣೆಯನ್ನು ಅನುಭವಿಸುವಂತೆ ವ್ಯವಸ್ಥೆ ನಿರ್ಮಾಣವಾಗಿದೆ. ಈ ವರ್ಗಶೋಷಣೆಯನ್ನು ವಿರೋಧಿಸಿ ಕಯ್ಯೂರಿನ ರೈತ ಕಾರ್ಮಿಕರು ಸಂಘರ್ಷ ಇಳಿದರು. ಆದರೆ ಪ್ರಭುತ್ವ ಹೋರಾಟಗಾರರನ್ನು ಬಂಧಿಸಿತು. ಚಿರುಕಂಡ ಹೇಳಿದ್ದು "ಸಾಮ್ರಾಜ್ಯಶಾಹಿ ಆಡಳಿತ ಅನ್ನೋದು ಇಡೀ ದೇಶವನ್ನೇ ಆವರಿಸಿದ ವಿಸ್ತಾರವಾದ ಬಲೆಯಿದ್ದ ಹಾಗೆ. ನಮ್ಮ ಊರಿನ ಮೇಲಿರುವ ಭಾಗವನ್ನು ನಾವು ಕತ್ತರಿಸ್ಬೇಕು. ಹಾಗೆಯೇ ಒಂದೊಂದು ಊರಿನವರು ಅವರವರ ಅಂಶಕ್ಕೆ ಕತ್ತರಿ ಹಾಕ್ಬೇಕು"[೬೩] ಎಂಬುದನ್ನು ಅಂದರೆ ಸಾಮ್ರಾಜ್ಯವಾದದ ಅಸ್ತಿತ್ವ ಮತ್ತು ಅದರ ಬೆಳವಣಿಗೆಯು ನಿರಂತರವಾಗಿ ನಡೆಯುತ್ತಿದೆ. ಅವರ ಅಸ್ತಿತ್ವಕ್ಕೆ ಇಲ್ಲಿ ಅವಕಾಶ ಕೊಡಬಾರದು ಎಂದು ತಿಳುವಳಿಕೆ ನೀಡುತ್ತಾನೆ. ಅಬೂಬಕರ್, ಚಿರಕುಂಡ, ಕುಂಞಂಬು ನಿಮ್ಮ ಕೊನೇ ಆಸೆಯೇನು ಎಂದು ಜೈಲರು ಕೇಳಿದ್ದಾಗ "ಸಾಮ್ರಾಜ್ಯಶಾಹಿ ನಾಶವಾಗೋದನ್ನ ನೋಡಿ ಸಾಯ್ಬೇಕೂಂತ ನಮ್ಮ ಆಸೆ. ನಡೆಸಿ ಕೊಡ್ತಾರಾ ಕೇಳು ಚಿರುಕಂಡ"[೬೪] ಎಂದು ಹೇಳುವ ಪ್ರತಿಭಟನಾಕಾರರ ಮಾತುಗಳು ಸಾಮ್ರಾಜ್ಯಶಾಹಿ ವಿರೋಧಿ ಸಂಘರ್ಷವನ್ನು ಸೂಚಿಸುತ್ತಿದೆ. ಹೀಗೆ 'ಚಿರಸ್ಮರಣೆ' ಕಾದಂಬರಿಯು ದುಡಿಯುವ ವರ್ಗದ ವರ್ಗಸಂಘರ್ಷವನ್ನು ಅಭಿವ್ಯಕ್ತಿಸುತ್ತಿದೆ. 'ದಲಿತ ಕೋಟಿಯ ಎಲುಬುಗೂಡಿನ ಮೇಲೆ ಕಟ್ಟಿದ ಈ ಸಾಮ್ರಾಜ್ಯ ಖಂಡಿತ ಪುಡಿಪುಡಿಯಾಗ್ತದೆ! ಲೋಕದೆಲ್ಲ ದುಡಿಯುವ ಜನ ವಿಜಯ ಪತಾಕೆ ಹಾರಿಸಿಯೇ ಹಾರಿಸ್ತಾರೆ"[೬೫] ಎನ್ನುವ ಕ್ರಾಂತಿಕಾರಿಗಳ ಹಾಡುಗಳು ಸಮಾಜವಾದದ ಸಮಾಜ, ದುಡಿಯುವ ವರ್ಗದ ಸಮಾಜದ ಅಸ್ತಿತ್ವದ ಮುನ್ಸೂಚನೆ ಆಗಿದೆ.

'ಬಂಡಾಯ' ಕಾದಂಬರಿಯು ಬಂಡವಾಳಶಾಹಿಗಳು ಮತ್ತು ಕಾರ್ಮಿಕ ವರ್ಗದ ಸಂಘರ್ಷಗಳನ್ನು ತೆರೆದಿಡುತ್ತದೆ. ಶ್ರೀಮಂತ ವರ್ಗವು ಸಂಪತ್ತು ಮತ್ತು ಅಧಿಕಾರದ ಮೂಲಕ ಇಡೀ ಕಾರ್ಮಿಕ ವರ್ಗವನ್ನು ಶೋಷಣೆ ಮಾಡುವ ಚಿತ್ರಣ ಇದೆ. ಕಾರ್ಮಿಕ ವರ್ಗ ಮತ್ತು ಮಾಲೀಕ ವರ್ಗ ನಡುವೆ ಸಂಘರ್ಷ ಶುರುವಾಗುವುದು ಆರ್ಥಿಕ ಅಸಮಾನತೆ, ಕಾರ್ಮಿಕ ಶ್ರಮದ ಶೋಷಣೆ, ಬೋನಸ್, ತುಟ್ಟಿಭತ್ಯೆ ಮುಂತಾದ ಸಮಸ್ಯೆಗಳು ಸಂಘರ್ಷಕ್ಕೆ ಕಾರಣವಾಗುತ್ತದೆ. ಆದರೆ ಜಾಗತೀಕರಣದ ಪ್ರಭಾವದಿಂದ ಈ ವರ್ಗ ಅಸಮಾನತೆಯು ಮತ್ತಷ್ಟು ಹೆಚ್ಚಳವಾಗುತ್ತದೆ. ವರ್ಗಗಳ ನಡುವೆ ಭಿನ್ನಾಭಿಪ್ರಾಯಗಳನ್ನು ಸೃಷ್ಟಿಸಿ ಅವರುಗಳು ಆಳುವ ವರ್ಗದ ವಿರುದ್ಧ ಪ್ರತಿಭಟಿಸಿದ ಹಾಗೆ ನೋಡಿಕೊಳ್ಳುತ್ತದೆ. ಕಾದಂಬರಿಯಲ್ಲಿ ಕಾರ್ಮಿಕರ ನಾಯಕರ ನಡುವೆ ಈ ವರ್ಗ ವೈರುಧ್ಯತೆಗಳನ್ನು ಸೃಷ್ಟಿಸಿ ತನ್ನ ಹಿತಾಸಕ್ತಿಗೆ ಧಕ್ಕೆ ಬರದ ಹಾಗೆ ನೋಡಿಕೊಳ್ಳುತ್ತದೆ.

ಜಾಗತೀಕರಣದ ಮತ್ತೊಂದು ಮುಖ ಕ್ರೂರವಾದ ಶೋಷಣೆ, ಕ್ರೌರ್ಯ, ತನ್ನ ನೀತಿಗಳನ್ನು ಬಲಾತ್ಕಾರವಾಗಿ ಏರುವುದು ಮಾಡುತ್ತಿರುತ್ತದೆ. ಕಾರ್ಮಿಕ ಕಲ್ಯಾಣ, ಯೋಗಕ್ಷೇಮಗಳಿಗೆ ಇಲ್ಲಿ ಅವಕಾಶಗಳು ಇರುವುದಿಲ್ಲ. ಶ್ರೀಮಂತ ವರ್ಗದ ಸ್ವಾರ್ಥಕ್ಕಾಗಿ ಕಾರ್ಮಿಕರ ರಕ್ತ ಹೀರುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. 'ಬಂಡಾಯ' ಕಾದಂಬರಿ ಗಂಡ-ಹೆಂಡತಿ ನಡುವೆ ಕಾರ್ಮಿಕ-ಕಾರ್ಮಿಕರ ನಡುವೆ, ಕಾರ್ಮಿಕ-ಮಾಲೀಕರ ನಡುವೆ ಸಂಬಂಧಗಳನ್ನು ಕಳೆದುಕೊಳ್ಳುತ್ತಿರುವ ಆಲೋಚನಾ ಕ್ರಮವನ್ನು ಗುರುತಿಸುತ್ತದೆ. ಜಾಗತೀಕರಣದ ಸಂದರ್ಭದಲ್ಲಿ ಉತ್ತಮ ಜಗತ್ತಿನ ವರ್ಗ, ದುಡಿಯುವ ವರ್ಗದ ವಿರುದ್ಧ ಹಿಂಸೆ, ದೌರ್ಜನ್ಯ, ದಬ್ಬಾಳಿಕೆ, ಕ್ರೌರ್ಯ ಎಸಗುತ್ತದೆ. ಆದರೆ ಕಾರ್ಮಿಕ ಈ ವರ್ಗಶೋಷಣೆ ವಿರುದ್ಧ ಸಂಘರ್ಷ ಮಾಡುವುದರ ಮೂಲಕ ಸಮಾನವಾದ, ಶೋಷಣ ರಹಿತವಾದ ಸಮಾಜಕ್ಕಾಗಿ ರಾಜೀವ ಹೋರಾಡುತ್ತಾನೆ. ಆದರೆ ಕಾದಂಬರಿಯು ಕೊನೆಗೆ ಈ ಹೋರಾಟವನ್ನು ನಿಷ್ಕ್ರಿಯಗೊಳಿಸುತ್ತದೆ.

'ಸೂರ್ಯ' ಕಾದಂಬರಿಯಲ್ಲಿ ಊಳಿಗಮಾನ್ಯಶಾಹಿ ಭೂಮಾಲೀಕರ ದೌರ್ಜನ್ಯಕ್ಕೆ ಒಳಗಾದ ದಲಿತ ಸಮುದಾಯಗಳು ಅವರ ಭೂಮಿಯಲ್ಲಿ ಜೀತ ಮಾಡುವಂತವರು. ಕರಿಯ ಊಡ ಗೌಡನ ಮನೆಯ ಜೀತದ ಆಳು ಆದರೆ ಜಾಗತೀಕರಣದ ಪರಿಣಾಮದಿಂದ ಈ ಕೆಳವರ್ಗವೇ. ವರ್ಗ ಹೋರಾಟದ ವೈರಿಯಾಗಿ ಆಳುವ ವರ್ಗಕ್ಕೆ ಕಾಣಿಸುತ್ತದೆ. ಕರಿಯನ ಪರವಾಗಿ ನಿಲ್ಲುವ ಸೀತಕ್ಕ "ಹೇಳಿದ್ದು" ಹೆಣ್ಣಂಗ್ಸಿಗೆ ಬಾಯಿ ಬಂದಿದ್ಕೆ ಹಿಂಗಾತು ಇನ್ನು ಊರಾಗಿರೊ ಗಂಡಸಿಗೆಲ್ಲ ಬಾಯಿ ಬಂದ್ರಿ ನಿಮ್ಮ ಗತ್ಯೇನ". ಇಲ್ಲಿ ಭೂಮಾಲೀಕ ವರ್ಗದ ವಿರುದ್ಧ ಅಥವಾ ಗೌಡನ ವಿರುದ್ಧ ಮಹಿಳೆಯಾಗಿ ವಿರೋಧಿಸುವುದನ್ನು ಕಾಣುತ್ತೇವೆ. ಹಾಗೆಯೇ ರಾಮಣ್ಣ ಗೌಡನ ಅಂತ್ಯವನ್ನೇ ಲೆಕ್ಕ ಹಾಕುತ್ತಿರುತ್ತಾನೆ. ಸಮಾಜದಲ್ಲಿ ಹೊಸ ಶಕ್ತಿಯ ಉದ್ಭವಕ್ಕೆ ಚಾಲನೆಯನ್ನೊದಗಿಸಿದ. ಬಂಡವಾಳಶಾಹಿ ಪ್ರಜಾಪ್ರಭುತ್ವ ರಾಮಣ್ಣನಲ್ಲಿ ಹೊಸ ಪುಢಾರಿತನವನ್ನು ಹುಟ್ಟು ಹಾಕಿದೆ. "ಮನೆಯೊಳಗೆ ಮಾತ್ರವಲ್ಲ. ಮನೆ ಹೊರಗೂ ಮೊದಲಿನಷ್ಟು ಹಿಡಿತ ಇಲ್ಲ ಅನ್ನೋದು ಅವನಿಗೆ ಅರಿವಾಗಿತು. ಈಗ ಮೊದಲಿನಂತೆ ಇಲ್ಲ. ರಾಮಣ್ಣನ ರಾಜಕೀಯ ಶುರುವಾಗಿದೆ. ಅವನದೇ ಗುಂಪು. ಹಿಂದೆ ಮುಂದೆ ಸುತ್ತಾಡ್ತಾ ಇದೆ. ಬಡವಾರ ಉದ್ಧಾರ, ಹರಿಜನ ಉದ್ಧಾರ, ಗಿರಿಜನ ಉದ್ಧಾರ ಅದೂ ಇದೂ ಹೇಳ್ಕೊಂಡು ಬಡವರ ಬಂಧು ಬೇರೆ ಆಗ್ತಾ ಇದ್ದಾನೆ, ಇಂಥಾದ್ರಲ್ಲೆ ತನ್ನ ದರ್ಪವೆಲ್ಲ ಸತ್ತ ಸರ್ಪವಾಗಿವೆಯೇನೋ ಅನ್ನಿಸಿ ಆಘಾತಗೊಂಡು, ಊರೊಳಗಿನ ಈ ಶಕ್ತಿಗಳೆಲ್ಲ ಸೀತಕ್ಕನ ರೂಪದಲ್ಲಿ ಒಳಬಂದು ಸೇರಿಕೊಂಡಂತೆ ಕಾಣಿಸ್ತಿದೆಯೆಲ್ಲ ಅಂತ ಹಿಂಸೆಯ ಉಸುಕಿನಲ್ಲಿ ಬಿದ್ದು ಒದ್ದಾಡಿದ"[೬] ಎನ್ನುವ ಗೌಡನ ಅನಿಸಿಕೆ. ಇಲ್ಲಿ ಹಳೆಯ ವ್ಯವಸ್ಥೆಯ ಮೌಲ್ಯಗಳು ನಾಶವಾಗುತ್ತ ಹೊಸ ವ್ಯವಸ್ಥೆಯ ಉದಯವನ್ನು ತಿಳಿಸುತ್ತಿದೆ. ಅಂದರೆ ಜಮೀನ್ದಾರಿ ಶಕ್ತಿ ಕ್ಷೀಣಿಸುತ್ತಿದೆ. ಹೊಸ ಬಂಡವಾಳಶಾಹಿಯ ಅಸ್ತಿತ್ವನ್ನು ಕಟ್ಟಿಕೊಡುತ್ತದೆ.

**ಕೊನೆ ಟಿಪ್ಪಣಿಗಳು**

೧. ಮಾರ್ಕ್ಸ್, ಎಂಗೆಲ್ಸ್, ೧೯೭೮, **ಕಮ್ಯೂನಿಸ್ಟ್ ಪಾರ್ಟಿಯ ಪ್ರಣಾಳಿಕೆ,** ಪ್ರಗತಿ ಪ್ರಕಾಶನ, ಮಾಸ್ಕೊ, ಪು. ೪೦.

೨. ಜಿ. ರಾಮಕೃಷ್ಣ, ೨೦೦೪, **ಯುಗದರಿವು,** ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ಪು. ೮೯.

೩. ಬಿ.ಎಂ. ಪುಟ್ಟಯ್ಯ, ೨೦೦೮, **ದಲಿತರು ಮತ್ತು ಭೂಮಿಯ ಪ್ರಶ್ನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೫.

೪. ಚಂದ್ರಶೇಖರ ಪಾಟೀಲ(ಸಂ), ೨೦೦೭, **ಮಾರ್ಚ್, ಏಪ್ರಿಲ್, ಸಂಕ್ರಮಣ ಸಂಪುಟ-೪೨, ಸಂಚಿಕೆ-೨,** ಪು. ೩೩.

೫. ಬಿ.ಎಂ. ಪುಟ್ಟಯ್ಯ, ೨೦೦೮, **ದಲಿತರು ಮತ್ತು ಭೂಮಿಯ ಪ್ರಶ್ನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೩.

೬. ಭಂಡಾರಿ ಆರ್.ವಿ., ೧೯೯೩, **ಕನ್ನಡ ಕಾದಂಬರಿಗಳಲ್ಲಿ ವರ್ಣ ಮತ್ತು ವರ್ಗಸಂಘರ್ಷ,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು, ಪು. ೧೦.

೭. ಬರಗೂರು ರಾಮಚಂದ್ರಪ್ಪ, ೧೯೯೮, (ದ್ವಿತೀಯ ಮುದ್ರಣ), **ಸಾಹಿತ್ಯ ಮತ್ತು ರಾಜಕಾರಣ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು. ೧೭೨.

೮. ಬರಗೂರು ರಾಮಚಂದ್ರಪ್ಪ, ೧೯೯೮, (ದ್ವಿತೀಯ ಮುದ್ರಣ), **ಸಾಹಿತ್ಯ ಮತ್ತು ರಾಜಕಾರಣ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು. ೧೮೩.

೯. ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೪೮ (೧೯೬೩ ದ್ವಿತೀಯ ಮುದ್ರಣ), **ಹೇಮಾವತಿ,** ಶಾರದಾಮಂದಿರ, ಮೈಸೂರು, ಪು. ೧೭೮.

೧೦. ನಿರಂಜನ, ೨೦೧೧, **ಚಿರಸ್ಮರಣೆ** (೧೧ನೇ ಮುದ್ರಣ), ಡಿ.ವಿ.ಕೆ. ಮೂರ್ತಿ ಪ್ರಕಾಶನ, ಪು. ೨೭೬

೧೧. ದೇವನೂರ ಮಹಾದೇವ, **ಒಡಲಾಳ,** ನವ್ವಾಲೆ ಪ್ರಕಾಶನ, ಮೈಸೂರು, ಪು. ೧೪.

೧೨. ದೇವನೂರ ಮಹಾದೇವ, **ಒಡಲಾಳ,** ನವ್ವಾಲೆ ಪ್ರಕಾಶನ, ಮೈಸೂರು, ಪು. ೨೬

೧೩. ಬಿ.ಎಂ. ಪುಟ್ಟಯ್ಯ, ೨೦೦೮, **ಮುಖಾಮುಖಿ,** ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪು. ೭೪.

೧೪. ಆರ್.ವಿ. ಭಂಡಾರಿ, ೧೯೮೪, **ಬೆಂಕಿಯ ಮಧ್ಯ,** ಬಂಡಾಯ ಪ್ರಕಾಶನ, ಹೊನ್ನಾವರ, ಪು. ೧೪.

೧೫. ಭಂಡಾರಿ ಆರ್.ವಿ., ೧೯೮೪, **ಬೆಂಕಿಯ ಮಧ್ಯ,** ಬಂಡಾಯ ಪ್ರಕಾಶನ, ಪು. ೧೫.

೧೬. ಬಿ.ಎಂ. ಪುಟ್ಟಯ್ಯ, ೨೦೦೮, **ಮುಖಾಮುಖಿ,** ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪು. ೪೭

೧೭. ಬಿ.ಎಂ. ಪುಟ್ಟಯ್ಯ, ೨೦೦೮, **ಮುಖಾಮುಖಿ,** ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪು. ೪.

೧೮. ನಿರಂಜನ, ೨೦೧೧, **ಚಿರಸ್ಮರಣೆ** (೧೧ನೇ ಮುದ್ರಣ), ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪು. ೨೭೬

೧೯. ಶಿವರುದ್ರ ಕಲ್ಲೋಳಿಕರ, ೧೯೯೪, **ಹೊಲಗೇರಿಯ ರಾಜಕುಮಾರ**, ಅನಾರ್ಯ ಪ್ರಕಾಶನ, ಧಾರವಾಡ.

೨೦. ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೮೮೪, **ಹೇಮಾವತಿ**, ಶಾರದಾ ಮಂದಿರ ಮೈಸೂರು ಪು. ೨೬

೨೧. ನಿರಂಜನ, ೨೦೧೧, **ಚಿರಸ್ಮರಣೆ** (೧೧ನೇ ಮುದ್ರಣ), ಡಿ.ವಿ.ಕೆ. ಮೂರ್ತಿ ಪ್ರಕಾಶನ, ಪು. ೨೭೬

೨೨. ಅದೇ, ಪು. ೫೦.

೨೩. ಅದೇ, ಪು. ೨೭೩.

೨೪. ಚೆನ್ನಣ್ಣ ವಾಲೀಕಾರ, ೨೦೦೪, ಒಂದು ಹೆಣ್ಣಿನ ಒಳ ಜಗತ್ತು, ಸಪ್ನ ಬುಕ್‌ಹೌಸ್ ಬೆಂಗಳೂರು. ಪು. ೧೨

೨೫. ದೇವನೂರ ಮಹಾದೇವ, **ಒಡಲಾಳ**, ನವ್ವಾಲೆ ಪ್ರಕಾಶನ, ಮೈಸೂರು, ಪು. ೧೪.

೨೬. ಕುವೆಂಪು, ೧೯೯೭, **ಮಲೆಗಳಲಿ ಮದುಮಗಳು**, ಉದಯರವಿ ಪ್ರಕಾಶನ, ಮೈಸೂರು, ಪು. ೫೯೯.

೨೭. ಅದೇ, ಪು. ೬೮೬

೨೮. ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೪೮, (ದ್ವಿಮು.) **ಹೇಮಾವತಿ** ಶಾರದಾ ಮಂದಿರ, ಮೈಸೂರು, ಪು. ೨೬

೨೯. ರಾವ್‌ಬಹದ್ದೂರ್ ೨೦೦೬, **ಗ್ರಾಮಾಯಣ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು. ೫.

೩೦. ಅದೇ, ಪು. ೧೫.

೩೧. ಅನಂತಮೂರ್ತಿ ಯು.ಆರ್., ೧೯೭೭, (ದ್ವಿಮು.), **ಭಾರತೀಪುರ**, ಅಕ್ಷರ ಪ್ರಕಾಶನ, ಹೆಗ್ಗೋಡು, ಪು. ೧೩೨.

೩೨. ದೇವನೂರ ಮಹಾದೇವ, **ಒಡಲಾಳ**, ನವ್ವಾಲೆ ಪ್ರಕಾಶನ, ಮೈಸೂರು, ಪು. ೩.

೩೩. ಅದೇ, ಪು. ೨೯.

೩೪. ಅದೇ, ಪು. ೪೫.

೩೫. ಅದೇ, ಪು. ೩೯.

೩೬. ದೇವನೂರ ಮಹಾದೇವ, ೧೯೮೮, **ಕುಸುಮಬಾಲೆ**, ಸಂಗಾತಿ ಸಹಕಾರಿ ಪ್ರಕಾಶನ, ಬೆಂಗಳೂರು, ಪು. ೫೧.

೩೭. ಅದೇ, ಪು. ೯೮.

೩೮. ಅರವಿಂದ ಮಾಲಗತ್ತಿ, ೧೯೮೮, **ಕಾರ್ಯ**, ಶೈಲ ಪ್ರಕಾಶನ, ಮುದ್ದೇಬಿಹಾಳ, ಪು. ೧೩.

೩೯. ಕುಂ. ವೀರಭದ್ರಪ್ಪ, ೧೯೯೩, **ಕೊಟ್ರ ಹೈಸ್ಕೂಲಿಗೆ ಸೇರಿದ್ದು**, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು. ಬೆಂಗಳೂರು, ಪು. ೨೪.

೪೦. ಅದೇ, ಪು. ೨೫.

೪೧. ಶಿವರುದ್ರ ಕಲ್ಲೋಳಿಕರ, ೧೯೯೪, **ಹೊಲಗೇರಿಯ ರಾಜಕುಮಾರ**, ಅನಾರ್ಯ ಪ್ರಕಾಶನ, ಧಾರವಾಡ.

೪೨. ಅದೇ, ಪು. ೧೦

೪೩. ಬಿ.ಎಂ. ಪುಟ್ಟಯ್ಯ, ೨೦೦೮. **ಮುಖಾಮುಖಿ**, ಸಿದ್ಧಾರ್ಥ ಪ್ರಕಾಶನ ಹೊಸಪೇಟೆ, ಪು. ೧೦

೪೪. ಶಿವರಾಮ ಕಾರಂತ, ೨೦೦೩(ಮರುಮುದ್ರಣ), **'ಚೋಮನ ದುಡಿ'**, ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ಪು. ೨.

೪೫. ರಾವ್‌ಬಹದ್ದೂರ್, ೨೦೦೬, **ಗ್ರಾಮಾಯಣ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು. ೨೮.

೪೬. ದೇವನೂರ ಮಹಾದೇವ, **ಒಡಲಾಳ**, ನವ್ವಾಲೆ ಪ್ರಕಾಶನ, ಮೈಸೂರು, ಪು. ೧೪.

೪೭. ಅದೇ, ಪುಟ. ೨೪.

೪೮. ಅದೇ, ಪುಟ. ೨೯.

೪೯. ಬಿ.ಎಂ. ಪುಟ್ಟಯ್ಯ, ೨೦೦೮, **ಮುಖಾಮುಖಿ**, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪು. ೨೨.

೫೦. ಮಾರ್ಕ್ಸ್, ಎಂಗೆಲ್ಸ್, ೧೯೭೪, **ಕಮ್ಯೂನಿಸ್ಟ್ ಪಾರ್ಟಿಯ ಪ್ರಣಾಳಿಕೆ**, ಪ್ರಗತಿ ಪ್ರಕಾಶನ, ಮಾಸ್ಕೊ, ಪು. ೪೦.

೫೧. ರಾವ್‌ಬಹದ್ದೂರ್ ೨೦೦೬, **ಗ್ರಾಮಾಯಣ**. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಪು. ೮.

೫೨. ನಿರಂಜನ, ೨೦೧೧,(೧೧ನೇ ಮುದ್ರಣ), **ಚಿರಸ್ಮರಣೆ**. ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು, ಪು. ೮೯.

೫೩. ಅದೇ, ಪು. ೨೭೩.

೫೪. ಅದೇ, ಪು. ೨೭೯.

೫೫. ಬರಗೂರು ರಾಮಚಂದ್ರಪ್ಪ, ೧೯೯೦, **ಸೂರ್ಯ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು. ೧೯.

೫೬. ಶಿವರಾಮ ಕಾರಂತ. ೧೯೩೩. (೧೯೪೮ ದ್ವಿಮು), **ಕುಡಿಯೂರ ಕೂಸು**, ಹರ್ಷ ಮುದ್ರಣ ಪ್ರಕಟಣಾಲಯ, ಪುತ್ತೂರು. ಪು. ೮೬

೫೭. ನಿರಂಜನ, ೨೦೧೧,(೧೧ನೇ ಮುದ್ರಣ) **ಚಿರಸ್ಮರಣೆ**, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು, ಪು. ೨೭೩.

೫೮. ಅದೇ, ಪು. ೨೭೬

೫೯. ಭಂಡಾರಿ ಆರ್.ವಿ., ೧೯೮೪, **ಬೆಂಕಿಯ ಮಧ್ಯ**, ಬಂಡಾಯ ಪ್ರಕಾಶನ, ಹೊನ್ನಾವರ, ಪು. ೨೦.

೬೦. ದೇವನೂರ ಮಹಾದೇವ, ೧೯೮೮, **ಕುಸುಮಬಾಲೆ**, ಸಂಗಾತಿ ಸಹಕಾರಿ ಪ್ರಕಾಶನ, ಬೆಂಗಳೂರು ಪು. ೨೧.

೬೧. ಪ್ರಭಾಕರ ಎ.ಎಸ್. ೨೦೦೧, **ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೩೭.

೬೨. ಬಿ.ಎಂ. ಪುಟ್ಟಯ್ಯ, **ಕಾಲ್ನಡಿಗೆ**, ೧೯೯೯ ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಕುವೆಂಪುನಗರ, ಬೆಂಗಳೂರು, ಪು. ೧೬

೬೩. ನಿರಂಜನ, ೨೦೧೧ (೧೧ನೇ ಮುದ್ರಣ), **ಚಿರಸ್ಮರಣೆ**, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು, ಪು. ೧೮೩.

೬೪. ಅದೇ, ಪು. ೨೭೩.

೬೫. ಅದೇ, ಪು. ೨೭೭.

೬೬. ಬರಗೂರು ರಾಮಚಂದ್ರಪ್ಪ, ೧೯೯೦, ಸೂರ್ಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು. ೪.

***

ಅಧ್ಯಾಯ : ಎರಡು

# ದುಡಿಯುವ ವರ್ಗ : ಪರಿಕಲ್ಪನೆಯ ಚರ್ಚೆ

---

**೨.೧. ದುಡಿಯುವ ವರ್ಗದ ಸಾಹಿತ್ಯೇತರ ನೆಲೆಗಳು**

೨.೧.೧. ದಲ್ಲಾಳಿ ಅಧಿಕಾರಾರೂಢ ಬಂಡವಾಳಶಾಹಿ ವರ್ಗ

೨.೧.೨. ದೊಡ್ಡ ಭೂಮಾಲೀಕ ವರ್ಗ

೨.೧.೩. ರಾಷ್ಟ್ರೀಯ ಬಂಡವಾಳಶಾಹಿ ವರ್ಗ

೨.೧.೪. ಚಿಲ್ಲರೆ ಬಂಡವಾಳಶಾಹಿ ವರ್ಗ

೨.೧.೫. ಭೂಹೀನ ವರ್ಗ

೨.೧.೬. ಬಡ ರೈತವರ್ಗ

೨.೧.೭. ಕೃಷಿ ಕಾರ್ಮಿಕ ವರ್ಗ

**೨.೨. ದುಡಿಯುವ ವರ್ಗದ ಸಾಹಿತ್ಯಕ ನೆಲೆಗಳು**

**೨.೨.೧. ದುಡಿಯುವ ವರ್ಗದ ಸಾಹಿತ್ಯಕ ನೆಲೆಯ ಕಾದಂಬರಿಗಳ ವಿಶ್ಲೇಷಣೆ**

೨.೨.೧.೧. ಭೂಮಾಲೀಕ ವರ್ಗ

೨.೨.೧.೨. ಬಂಡವಾಳಶಾಹಿ ವರ್ಗ

೨.೨.೧.೩. ಅಧಿಕಾರಶಾಹಿ ವರ್ಗ

೨.೨.೧.೪. ದಲಿತ ವರ್ಗ

೨.೨.೧.೫. ಕಾರ್ಮಿಕ ವರ್ಗ

೨.೨.೧.೬. ಮಹಿಳಾ ವರ್ಗ

**೨.೩. ಊಳಿಗಮಾನ್ಯಶಾಹಿ ಸಾಮಾಜಿಕ ಸಂಬಂಧಗಳು ಮತ್ತು ದುಡಿಯುವ ವರ್ಗ**

೨.೩.೧. ಭೂಮಿಯ ಅಸಮಾನತೆಯ ನೆಲೆ

೨.೩.೨. ಜಾತಿಯ ಅಸಮಾನತೆಯ ನೆಲೆ

೨.೩.೩. ಬಡತನ ಮತ್ತು ಹಸಿವಿನ ನೆಲೆ

೨.೩.೪. ವೃತ್ತಿಯ ಅಸಮಾನತೆಯ ನೆಲೆ

೨.೩.೫. ಪ್ರತಿಭಟನೆಯ ನೆಲೆ

**೨.೪. ಬಂಡವಾಳಶಾಹಿ ಸಾಮಾಜಿಕ ಸಂಬಂಧಗಳು ಮತ್ತು ದುಡಿಯುವ ವರ್ಗ**

**೨.೫. ಜಾಗತೀಕರಣದ ಬೆಳವಣಿಗೆ ಮತ್ತು ದುಡಿಯುವ ವರ್ಗ**

## ಅಧ್ಯಾಯ : ಮೂರು

# ಕಾದಂಬರಿಗಳಲ್ಲಿ ದುಡಿಯುವ ವರ್ಗ

ಕನ್ನಡ ಕಾದಂಬರಿ ಸಾಹಿತ್ಯ ದುಡಿಯುವ ವರ್ಗವನ್ನು ಕುರಿತು ಅನೇಕ ನೆಲೆಗಳಲ್ಲಿ ಗ್ರಹಿಸಿವೆ. ಆದರೆ ದುಡಿಯುವ ವರ್ಗದ ಚಿತ್ರಣವನ್ನು ಗುರುತಿಸುವಾಗ ಪಾತ್ರಗಳ ವರ್ತನೆ, ಸ್ವಭಾವ, ಸಂಕೇತಗಳ ಮೂಲಕ ಅವುಗಳನ್ನು ಕಟ್ಟಿಕೊಡಲಾಗಿದೆ. ದುಡಿಯುವ ವರ್ಗವು ನಿರಂತರವಾಗಿ ಬದಲಾವಣೆಯಾಗುತ್ತಾ ಬಂದಿದೆ. ಈ ಬದಲಾವಣೆಯ ಪ್ರಕ್ರಿಯೆಯನ್ನು ಆಳುವ ವರ್ಗದ ನೆಲೆಯಿಂದಲೂ ಮತ್ತು ದುಡಿಯುವ ವರ್ಗದ ನೆಲೆಯಿಂದಲೂ ಗ್ರಹಿಸಬಹುದಾಗಿದೆ. ಇಲ್ಲಿ ದುಡಿಯುವ ವರ್ಗದ ಮೇಲೆ ಆಳುವ ವರ್ಗ ಯಾಜಮಾನಿಕೆಯ ನೆಲೆಯ ಮೇಲೆ ನಿಂತಿದೆ. ಅದೇ ಸಂದರ್ಭದಲ್ಲಿ ಆಳುವ ವರ್ಗವು ದುಡಿಯುವ ವರ್ಗವನ್ನು ಶೋಷಣೆ ಮಾಡುವುದರ ಮೂಲಕ ತನ್ನ ಅಸ್ತಿತ್ವವನ್ನು ನಿರಂತರವಾಗಿ ಉಳಿಸಿಕೊಂಡು ಬಂದಿದೆ. ಈ ಹಿನ್ನೆಲೆಯಲ್ಲಿ ದುಡಿಯುವ ವರ್ಗದ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಮಾನಸಿಕವಾದ ಅಂಶಗಳನ್ನು ಕನ್ನಡದ ಕಾದಂಬರಿಗಳು ಹೇಗೆ ಗ್ರಹಿಸಿವೆ ಎಂಬುವುದರ ಮೂಲಕ ದುಡಿಯುವ ವರ್ಗದ ಪ್ರಜ್ಞೆಯನ್ನು ನಿರೂಪಿಸಲು ಪ್ರಯತ್ನಿಸಲಾಗಿದೆ.

### ೩.೧. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಆರ್ಥಿಕ ಸ್ಥಿತಿಗತಿ

ಕಾದಂಬರಿಗಳು ದುಡಿಯುವ ವರ್ಗವನ್ನು ಇಡಿಯಾಗಿ ಗ್ರಹಿಸಿರುತ್ತವೆ. ಆದರೆ ಅದನ್ನು ಕುರಿತು ಅಧ್ಯಯನ ಮಾಡುವಾಗ ಅದರ ಬಿಡಿ ಆಯಾಮಗಳನ್ನು ಕುರಿತು ಚರ್ಚೆ ಮಾಡುವುದು ಅಧ್ಯಯನದ ಅನುಕೂಲದ ದೃಷ್ಟಿಯಿಂದ ಅನಿವಾರ್ಯ. ಈ ಹಿನ್ನೆಲೆಯಲ್ಲಿ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಆರ್ಥಿಕ ಸ್ಥಿತಿಗತಿಗಳನ್ನು ಹೇಗೆ ಚಿತ್ರಿಸಲಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ಕಟ್ಟಿಕೊಡಲಾಗುವುದು. ಸಮಾಜದಲ್ಲಿ ಆರ್ಥಿಕ ಅಸಮಾನತೆಯ ವ್ಯವಸ್ಥೆ ಇರುವುದರಿಂದ ಶ್ರೀಮಂತರು ಬಡಜನರನ್ನು ಹೀನಾಯವಾಗಿ ಕ್ರೂರವಾಗಿ ನಡೆಸಿಕೊಳ್ಳುತ್ತಾರೆ. ಈ ಶೋಷಣೆಯ ಮೂಲ ಆರ್ಥಿಕ ಅಸಮಾನತೆ. ಮೇಲುವರ್ಗದವರು ದುಡಿಯುವ ವರ್ಗದವರ

ಹಕ್ಕುಗಳನ್ನು ಅಕ್ರಮವಾಗಿ ಕಿತ್ತುಕೊಂಡಿದ್ದರಿಂದ ಅವರು ಶ್ರೀಮಂತವರ್ಗವಾಗಿ ಆರ್ಥಿಕ ಶ್ರೇಣೀಕರಣ ಮತ್ತು ಆರ್ಥಿಕ ಅಸಮಾನತೆ, ಆರ್ಥಿಕ ಸಮಸ್ಯೆಗಳನ್ನು ಸಮಾಜದಲ್ಲಿ ಸೃಷ್ಟಿಸಿ, ಸಮಾಜವನ್ನು ಆರ್ಥಿಕ ಸಮಸ್ಯೆಗಳಿಗೆ ದೂಡುತ್ತಿರುತ್ತದೆ. ಆದರೆ ಈ ಮೇಲುವರ್ಗಗಳ ಆರ್ಥಿಕ ಶೋಷಣೆಗೆ ಒಳಗಾಗಿರುವ ದುಡಿಯುವ ವರ್ಗವು ತಮ್ಮ ಶ್ರಮಶಕ್ತಿಗಳ ಮೂಲಕ ಉತ್ಪತ್ತಿಯಾದ ಎಲ್ಲ ವಸ್ತು ಪದಾರ್ಥಗಳು ಶ್ರೀಮಂತವರ್ಗದ ಪಾಲಾಗುತ್ತದೆ. ಆದರೆ ದುಡಿದ ಶ್ರಮಿಕರಿಗೆ ಕನಿಷ್ಠ ಕೂಲಿ ಕೊಟ್ಟು ಉಳಿದ ಲಾಭವನ್ನು ಶ್ರೀಮಂತವರ್ಗ ಇಟ್ಟುಕೊಳ್ಳುತ್ತದೆ. ಈ ವರ್ಗ ಅಸಮಾನತೆ ಹಿಂದಿನಿಂದಲೂ ಯಥಾಸ್ಥಿತಿ ಕಾಪಾಡಿಕೊಳ್ಳಲು ಆಳುವ ವರ್ಗ ಪ್ರಯತ್ನ ಪಡುತ್ತಿರುತ್ತದೆ. ಯಾಕೆಂದರೆ ಈ ಅಸಮಾನತೆಯ ಆರ್ಥಿಕ ವ್ಯವಸ್ಥೆ ಶ್ರೀಮಂತರ ಪರವಾಗಿದೆ. ಅದರಿಂದ ಆ ಸ್ಥಿತಿಯನ್ನು ಕಾಪಾಡಿಕೊಳ್ಳುವ ಉದ್ದೇಶ ಹೊಂದಿರುತ್ತದೆ. ಆದರೆ ದುಡಿಯುವ ವರ್ಗವು ತನ್ನ ಶೋಷಣೆಗೆ ಕಾರಣ ಈ ಆರ್ಥಿಕ ಅಸಮಾನತೆ, ಆರ್ಥಿಕ ಶೋಷಣೆ ಎಂದು ಈ ಸ್ಥಿತಿಯನ್ನು ಬದಲಾಯಿಸಲು ಪ್ರತಿಭಟನೆ ಮಾಡುತ್ತಿರುತ್ತದೆ.

ಅದರಲ್ಲೂ ಇಂದು ಬಂಡವಾಳಶಾಹಿ ವ್ಯವಸ್ಥೆಯ ಕಾಲದಲ್ಲಿ ಈ ಆರ್ಥಿಕ ಅಸಮಾನತೆ ಮತ್ತಷ್ಟು ಹೆಚ್ಚಾಗುತ್ತಿದೆ. ಯಾಕೆಂದರೆ ಹಿಂದೆ ಊಳಿಗಮಾನ್ಯಶಾಹಿ ವ್ಯವಸ್ಥೆ ದುಡಿಯುವ ಜನರ ಭೂಮಿಯ ಹಕ್ಕನ್ನು ಕಿತ್ತುಕೊಂಡು ಅವರನ್ನು ಭೂಹೀನರಾಗಿ ಮಾಡಿದೆ. ಅದೇ ರೀತಿಯಲ್ಲಿ ದುಡಿದ ಶ್ರಮಕ್ಕೆ ತಕ್ಕ ಪ್ರತಿಫಲ ಕೊಡದೆ ವಂಚಿಸಿದೆ. ಈ ವರ್ಗ ಅಸಮಾನತೆಯು ಎಲ್ಲ ಬಗೆಯ ಶೋಷಣೆಗೆ ಮೂಲಕಾರಣವಾಗುತ್ತದೆ. ಅಂದರೆ ಭೂಮಿಯು ಕೆಲವೇ ಜನರಲ್ಲಿ ಶೇಖರಣೆಯಾಗಿ ಬಹುಜನರು ಈ ಆರ್ಥಿಕ ಅಸಮಾನತೆಗೆ ಕಾರಣವಾಗಿದೆ. ಅದಕ್ಕೆ ಅಂಬೇಡ್ಕರ್ ಭೂಮಿ ಮತ್ತು ಕೈಗಾರಿಕೆಗಳು ರಾಷ್ಟ್ರೀಕರಣಗೊಳ್ಳಬೇಕೆಂದು ವಾದಿಸಿರುವುದನ್ನು ಕಾಣುತ್ತೇವೆ. ವರ್ಗ ಸಮಾಜದಲ್ಲಿ ಮುಖ್ಯವಾಗಿ ಗುರುತಿಸಬೇಕಾಗಿರುವುದು ಆರ್ಥಿಕ ಅಸಮಾನತೆ. ಆರ್ಥಿಕ ಶ್ರೇಣೀಕರಣ, ಆರ್ಥಿಕ ಸಮಸ್ಯೆಗಳು ವರ್ಗಸಮಾಜದಲ್ಲಿ ಕಾಣಿಸಿಕೊಳ್ಳುತ್ತವೆ. ವರ್ಗವೈರುಧ್ಯತೆಗಳು ಯಾವಾಗಲೂ ಘರ್ಷಣೆಗಳಿಂದ ಕೂಡಿರುತ್ತದೆ. ಆಳುವ ವರ್ಗ ಮತ್ತು ಆಳಿಸಿಕೊಳ್ಳುವ ವರ್ಗಗಳ ನಡುವೆ ಹೊಂದಾಣಿಕೆ ಸಾಧ್ಯವಿಲ್ಲ. ಆಳುವ ವರ್ಗ, ದುಡಿಯುವ ವರ್ಗವನ್ನು ಎಲ್ಲ ರೀತಿಯಲ್ಲಿ ಶೋಷಣೆ ಮಾಡುತ್ತಿರುತ್ತದೆ. ಈ ಶೋಷಣೆಗೆ ಒಳಗಾದ ದುಡಿಯುವ ವರ್ಗವು ಶೋಷಕ ವ್ಯವಸ್ಥೆಯ ವಿರುದ್ಧ ಹೋರಾಡುತ್ತಿರುತ್ತದೆ. ಯಾಕೆಂದರೆ ಆಳುವ ವರ್ಗದ ಆರ್ಥಿಕ ಶೋಷಣೆಯ ಪರಿಣಾಮ ಹಸಿವು, ಬಡತನ, ನಿರುದ್ಯೋಗದ ಸಮಸ್ಯೆಗಳನ್ನು ದುಡಿಯುವ ವರ್ಗ ಎದುರಿಸುತ್ತಿರುತ್ತದೆ.

“ಈ ಜಮೀನ್ದಾರಿ, ಬಂಡವಾಳಶಾಹಿ ಶೋಷಣೆಯ ಭಾಗವಾಗಿ ದುಡಿಯುವ ಜನರ ಮೇಲೆ ಅನ್ಯಾಯ, ಅಸಮಾನತೆ, ಹಿಂಸೆ, ಕ್ರೌರ್ಯ, ಅವಮಾನ, ಅತ್ಯಾಚಾರ ಇತ್ಯಾದಿ ಶೋಷಣೆಗಳು ನಡೆಯುತ್ತಿವೆ. ಭೂಮಿಯ ಒಡೆತನ ಅಥವಾ ಸಂಪತ್ತಿನ ಒಡೆತನ ಯಾರಿಗೆ ಇದೆಯೋ ಅವರು ಆರ್ಥಿಕವಾಗಿ ಸಬಲರಾಗಿದ್ದಾರೆ. ಸಂಪತ್ತಿನ ಒಡೆತನ ಯಾರಿಗೆ ಇಲ್ಲವೋ

ಅವರು ಆರ್ಥಿಕವಾಗಿ ಹಿಂದುಳಿದ ವರ್ಗವಾಗಿದೆ. ಈ ಎರಡು ವರ್ಗಗಳ ನಡುವೆ ಉತ್ಪಾದನಾ ಸಂಬಂಧ ಇದೆ. ಆರ್ಥಿಕವಾಗಿ ಬಲಿಷ್ಠವಾದ ವರ್ಗವು ಕೆಳವರ್ಗಗಳನ್ನು ಶೋಷಣೆ ಮಾಡುವುದು. ಇವರ ನಡುವೆ ಮಾಲೀಕ-ಆಳುವಿನ ಸಂಬಂಧ, ಶೋಷಕ-ಶೋಷಿತರ ಸಂಬಂಧ ಇರುತ್ತದೆ. ಈ ಸಂಬಂಧಗಳು ನಡುವೆ ಭಾವನಾತ್ಮಕವಾದ ಹೊಂದಾಣಿಕೆ ಇರುತ್ತದೆ. ಆದರೆ ಈ ಹೊಂದಾಣಿಕೆಯ ಆಳದಲ್ಲಿ ಆರ್ಥಿಕ ಶೋಷಣೆಯ ತಳಹದಿ ಇರುತ್ತದೆ. ಆದ್ದರಿಂದ ಆರ್ಥಿಕ ತಳಹದಿಯೇ ವರ್ಗಹೋರಾಟದ ಮೂಲನೆಲೆಯಾಗಿದೆ. ಈ ಆರ್ಥಿಕ ಸಂಬಂಧದ(ಉತ್ಪಾದನಾ ಸಂಬಂಧದ) ಮೇಲೆಯೇ ಜನಜೀವನದ ರೀತಿ ನೀತಿ, ಕಾಯ್ದೆ-ಕಾನೂನು, ಸಂಸ್ಕೃತಿ, ಕಾವ್ಯ, ಕಲೆ, ರಾಜಕೀಯ ಇತ್ಯಾದಿಗಳು ಪ್ರಭಾವಿತವಾಗಿ ರೂಪುಗೊಳ್ಳುತ್ತವೆ. ಆದ್ದರಿಂದ ಆರ್ಥಿಕತೆ ಮೂಲರಚನೆಯಾದರೆ ಉಳಿದವು ಮೇಲೆ ರಚನೆ ಎನ್ನಿಸಿಕೊಳ್ಳುತ್ತವೆ".[೧] ಹಾಗಾಗಿ ಶಿಕ್ಷಣ, ಜಾತಿ, ಧರ್ಮ, ವರ್ಣ, ವರ್ಗವು ಕೂಡ ಆರ್ಥಿಕ ರಚನೆಗೆ ಸಂಬಂಧಿಸಿದ್ದು, ವರ್ಗವನ್ನು ವಿಭಾಗಿಸುವಾಗ ನಾವು ಆರ್ಥಿಕ ಹಿನ್ನೆಲೆಯನ್ನು ಗಮನಿಸುತ್ತೇವೆ. ಆಳುವ ವರ್ಗ ಮತ್ತು ದುಡಿಯುವ ವರ್ಗವನ್ನು ಅವರ ಆರ್ಥಿಕ ನೆಲೆಯಿಂದ ಗುರುತಿಸುತ್ತೇವೆ. ಆರ್ಥಿಕವಾಗಿ ಪ್ರಬಲವಾದ ವರ್ಗ ಆರ್ಥಿಕವಾಗಿ ಹಿಂದುಳಿದ ವರ್ಗಗಳನ್ನು ಶೋಷಣೆ ಮಾಡುತ್ತಿರುತ್ತದೆ. ಈ ಶೋಷಣೆಯನ್ನು ದುಡಿಯುವ ವರ್ಗ ಪ್ರತಿಭಟಿಸಿದ್ದಾಗ ಸಂಘರ್ಷಗಳು ಉಂಟಾಗುತ್ತವೆ. ಹೀಗೆ ಪರಸ್ಪರ ವರ್ಗಗಳು ತಮ್ಮ ತಮ್ಮ ಹಿತಾಸಕ್ತಿಗಾಗಿ ಮುಂದಾದಾಗ ಸಂಘರ್ಷ ಉಂಟಾಗುತ್ತದೆ. ಆದರೆ ಇದು ಅಂತಿಮವಾಗಿ ರಾಜಕೀಯ ಸಂಘರ್ಷವೇ ಆಗುತ್ತದೆ. ಈ ಪ್ರತಿಭಟನೆಯ ಸ್ವರೂಪವು ಆರ್ಥಿಕ ಮೂಲವಾದ ತಾತ್ವಿಕತೆಯಾಗಿದೆ. ಹೀಗೆ ಆರ್ಥಿಕ ಪದ್ಧತಿಯಲ್ಲಾದ ಬದಲಾವಣೆಗಳು ಮನುಷ್ಯ ಸಂಬಂಧಗಳ ಮೇಲೂ ಪ್ರಭಾವ ಬೀರುತ್ತವೆ. ಹಿಂದಿನಿಂದ, ಇಲ್ಲಿಯವರೆಗೆ ಸಮಾಜ ಮೂಲಭೂತವಾಗಿ ಆರ್ಥಿಕ ಅಸಮಾನತೆಯ ಮೇಲೆ ನಿಂತಿದೆ. ಈ ಆರ್ಥಿಕ ಅಸಮಾನತೆಯು ಉಳಿದೆಲ್ಲ ಸಮಸ್ಯೆಗಳಿಗೆ ಮೂಲಕಾರಣವಾಗಿದೆ. ಈ ಆರ್ಥಿಕತೆ ಮತ್ತು ದುಡಿಯುವ ವರ್ಗದ ಸಂಬಂಧಗಳನ್ನು ಕನ್ನಡ ಕಾದಂಬರಿಗಳು ಹೇಗೆ ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ ಎಂಬುದನ್ನು ಈ ಕೆಳಕಂಡಂತೆ ಚರ್ಚಿಸಲಾಗುವುದು.

ನವೋದಯದ ಸಂದರ್ಭದಲ್ಲಿ ರಚನೆಯಾದ ಅನೇಕ ಕಾದಂಬರಿಗಳಲ್ಲಿ ರಾಷ್ಟ್ರೀಯತೆಯ ಪ್ರಭಾವಗಳು ಕಾಣುತ್ತವೆ. ಈ ರಾಷ್ಟ್ರೀಯತೆಯ ಹಿಂದೆ ಆರ್ಥಿಕ ಒತ್ತಡಗಳು ಇವೆ. ಆದರೆ ವರ್ಗ ಅಸಮಾನತೆಯ ವಿರೋಧಿ ಹೋರಾಟವಾಗಿ ರಾಷ್ಟ್ರೀಯ ಹೋರಾಟ ನಡೆದಿಲ್ಲ. ಇಲ್ಲಿ ವರ್ಣ ಹಿತಾಸಕ್ತಿಯೂ ಕ್ರಿಯಾಶೀಲವಾಗಿರುವುದು ಕಾಣಿಸುತ್ತದೆ. ಈ ವರ್ಣ ಹಿತಾಸಕ್ತಿಯು ಆಳುವ ವರ್ಗದ ಆರ್ಥಿಕ ಒತ್ತಡವಾಗಿ ಕಾಣಿಸುತ್ತದೆ. ಆದ್ದರಿಂದ ಕಾದಂಬರಿಗಳು ಗ್ರಹಿಸುತ್ತಿರುವ ಆ ಕಾಲದ ವಸ್ತುವಿಷಯಗಳು ಆರ್ಥಿಕ ಅಸಮಾನತೆ, ಆರ್ಥಿಕ ಶೋಷಣೆಗಳನ್ನು ಮರೆಮಾಚಿರುವುದನ್ನು ಈ ಸಂದರ್ಭದ ಬರಹಗಳಲ್ಲಿ ಗುರುತಿಸಬಹುದು. ಯಾಕೆಂದರೆ ಸಾಮಾಜಿಕ ಚಳುವಳಿಯು ದೇಶದ ಊಳಿಗಮಾನ್ಯಶಾಹಿ ಮತ್ತು ಬಂಡವಾಳಶಾಹಿಗಳ ಆರ್ಥಿಕ ಶೋಷಣೆಗಳಿಗೆ

ಒತ್ತುಕೊಡದೇ ವಸಾಹತುಶಾಹಿ ವ್ಯವಸ್ಥೆ ದೇಶದ ಶತ್ರು ಎಂದು ಹೇಳುವುದರ ಹಿಂದೆ ಊಳಿಗಮಾನ್ಯಶಾಹಿ ಮತ್ತು ಬಂಡವಾಳಶಾಹಿ ವ್ಯವಸ್ಥೆಯ ವರ್ಗ ಶೋಷಣೆಯನ್ನು ಮುಚ್ಚಿಡುವ ಆಳುವ ವರ್ಗದ ರಾಜಕೀಯ ತಂತ್ರ ಅಡಗಿದೆ. ಈ ಕಾಲದಲ್ಲಿ ರಚನೆಯಾದ ಅನೇಕ ಕಾದಂಬರಿ ಸಾಹಿತ್ಯವು ವರ್ಗದೃಷ್ಟಿಕೋನವನ್ನು ವಸ್ತುವಾಗಿ ಸ್ವೀಕರಿಸಲಿಲ್ಲ. ಆಳುವ ವರ್ಗದ ಶೋಷಣೆಯ ಪರಿಣಾಮದಿಂದ ಆದಂತಹ ಸಮಸ್ಯೆಗಳನ್ನು ಬಿಡಿ ಬಿಡಿಯಾಗಿ ಗುರುತಿಸುವ ಕಾರ್ಯ ಮಾಡಿರುವುದನ್ನು ಗುರುತಿಸಬಹುದು. ಆದರೆ ವರ್ಗಪ್ರಜ್ಞೆಯ ಭಾಗವಾಗಿ ನಿರೂಪಣೆ ಕಾಣುವುದಿಲ್ಲ. ಹೀಗಾಗಿ "ಆರ್ಥಿಕ ಅಸಮಾನತೆಯೊಂದನ್ನು ಬಿಟ್ಟು ಉಳಿದೆಲ್ಲ ವಿಷಯಗಳ ಬಗ್ಗೆ ಏನೇ ಮಾತಾಡಿದರೂ ಅದು ಮೇಲುಸ್ತರದ ಸಂಗತಿಯಾಗುತ್ತದೆ. ಆ ಮೇಲುಸ್ತರದ ಸಂಗತಿಗಳು ಭೂಮಾಲೀಕ ವರ್ಗ ಹಾಗೂ ಬಂಡವಾಳಶಾಹಿ ವರ್ಗದ ಹಿತಾಸಕ್ತಿಗಳನ್ನು ನಯವಾಗಿ ಪೋಷಿಸುತ್ತವೆ"[೨] ಎಂದು ಬಿ.ಎಂ. ಪುಟ್ಟಯ್ಯನವರ ಅಭಿಪ್ರಾಯವು ಸತ್ಯವಾಗಿದೆ. ಯಾಕೆಂದರೆ ಸಮಾಜದಲ್ಲಿನ ವರ್ಗಶೋಷಣೆಗೆ ಕಾರಣವಾದ ಆರ್ಥಿಕ ಅಸಮಾನತೆ, ಸಮಾಜವನ್ನು ಸಮಸ್ಯೆಯಾಗಿ ಬಾಧಿಸುತ್ತಿರುವಾಗ ಈ ವರ್ಗ ಸಂಬಂಧಗಳನ್ನು ಸಾಹಿತ್ಯ ಬರಹವು ವಸ್ತುವಾಗಿ ಸ್ವೀಕರಿಸದೆ, ಅದನ್ನು ಮೇಲುಸ್ತರದಲ್ಲಿ ಗ್ರಹಿಸಿರುವುದು. ನವೋದಯದ ಮತ್ತು ನವ್ಯದ ಸಂದರ್ಭದ ಬರಹಗಾರರಲ್ಲಿ ಕಾಣುವುದು. ಆದ್ದರಿಂದ ವರ್ಗಶೋಷಣೆ, ವರ್ಗ ಅಸಮಾನತೆ ಇದೆ ಎಂದಾಗ ವರ್ಗ ಶೋಷಕ ವ್ಯವಸ್ಥೆ ಇದೆ ಎಂದು ಭಾವಿಸಬೇಕಾಗುತ್ತದೆ.

ಶಿವರಾಮ ಕಾರಂತರ 'ಚೋಮನ ದುಡಿ' ಕಾದಂಬರಿಯಲ್ಲಿ ಊಳಿಗಮಾನ್ಯಶಾಹಿ ವ್ಯವಸ್ಥೆಯಲ್ಲಿ ಉತ್ಪಾದನಾ ಸಂಬಂಧಗಳ ಕುರಿತು ಅಭಿವ್ಯಕ್ತಿ ಇದೆ. ಚೋಮನನ್ನು ಆರ್ಥಿಕವಾಗಿ ಹಿಂದುಳಿದ ದಲಿತ ಸಮುದಾಯದ ವ್ಯಕ್ತಿಯಾಗಿ ಚಿತ್ರಿಸಲಾಗಿದೆ. ಸಂಕಪ್ಪಯ್ಯ ಭೂಮಿಯ ಒಡೆಯನನ್ನಾಗಿ ಊಳಿಗಮಾನ್ಯಶಾಹಿ ವ್ಯವಸ್ಥೆಯ ಪ್ರತಿನಿಧಿಯಾಗಿ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಈ ಎರಡು ವರ್ಗಗಳ ನಡುವೆ ಆರ್ಥಿಕ ಶ್ರೇಣೀಕರಣ ಇದೆ. ಭೂಮಿಯ ಹಕ್ಕನ್ನು ಹೊಂದಿರುವ ಮೇಲುವರ್ಗದ ಸಂಕಪ್ಪಯ್ಯ ಚೋಮನ ಭೂಮಿಯನ್ನು ಅಕ್ರಮವಾಗಿ ಕಿತ್ತುಕೊಂಡ ಪರಿಣಾಮ ಚೋಮನ ಕುಟುಂಬವು ಹಸಿವು, ಬಡತನದ ಸಮಸ್ಯೆಯನ್ನು ಎದುರಿಸುತ್ತಿದೆ. ಈ ಸಮಸ್ಯೆಯಿಂದ ಬಿಡುಗಡೆಗೆ ಚೋಮನ ಪ್ರಯತ್ನವಿರುವುದು ಗೇಣಿಗಾಗಿ ಭೂಮಿಯ ಉಳುಮೆ ಮಾಡುವುದು. ಆದರೆ ಚೋಮನನ್ನು ಶೋಷಣೆ ಮಾಡುತ್ತಿರುವ ವರ್ಗವ್ಯವಸ್ಥೆಯಲ್ಲಿ ಗೇಣಿಗಾಗಿ ಭೂಮಿ ಕೇಳುವ ಚೋಮನ ಸ್ಥಿತಿಯು ಅವನ ಮುಗ್ಧತೆಯನ್ನು ಸೂಚಿಸುತ್ತಿಲ್ಲ. ಅದು ಅವನ ಆರ್ಥಿಕ ಸಮಸ್ಯೆಯ ಸಂಕೇತವಾಗಿದೆ. ಕಾದಂಬರಿಯಲ್ಲಿ ಬರುವ ಸಾಲದ ಪ್ರಶ್ನೆ, "ನನ್ನಲ್ಲಿ ಇಲ್ಲದುದಕ್ಕೆ ಅವರ ದಾನವನ್ನು ಕೊಳ್ಳುವುದೆ?" 'ನನ್ನದು ಆಗಿದೆ' ಎನ್ನುವ ಸ್ವಾಭಿಮಾನದ ಪ್ರಶ್ನೆ, ಸಾಲ ತೀರಿಸಲು ಹೋಗುವ ಅವನ ಮಕ್ಕಳ ಸ್ಥಿತಿ, ಕ್ರಿಶ್ಚಿಯನ್‌ನಾಗಿ ಗೇಣಿಗಾಗಿ ಭೂಮಿ ಪಡೆಯುವ ಹಂಬಲ(ಮತಾಂತರ), ನೀರಿನಲ್ಲಿ ಮುಳುಗಿ ಸಾವು ತಂದುಕೊಂಡ ಅವನ ಮಗನ ಸ್ಥಿತಿ, ಈ ಎಲ್ಲಾ ಸನ್ನಿವೇಶಗಳು ಚೋಮನ ಆರ್ಥಿಕ ಶ್ರೇಣೀಕರಣ ಅಥವಾ ಆರ್ಥಿಕ ಅಸಮಾನತೆಯನ್ನು

ಸೂಚಿಸುತ್ತವೆ. ಇವನ ಈ ಸ್ಥಿತಿಗೆ ಕಾರಣವಾದ ಆಳುವ ವರ್ಗವು ಅವನ ಬದಲಾವಣೆಯನ್ನು ಸಹಿಸದೆ ಅವನಿಗೆ ಗೇಣಿಗಾಗಿ ಭೂಮಿ ಕೊಡದೆ ವಂಚಿಸಿದ್ದು, ದುಡಿದ ಶ್ರಮಕ್ಕೆ ತಕ್ಕ ಪ್ರತಿಫಲ ಕೊಡದೆ ವಂಚಿಸಿದ್ದು, ಆರ್ಥಿಕ ಅಸಮಾನತೆಯ ಕಾರಣಕ್ಕಾಗಿ. ಒಟ್ಟಾರೆ ಕಾದಂಬರಿಯಲ್ಲಿ ಚೋಮನು ಎದುರಿಸುತ್ತಿರುವ ಆರ್ಥಿಕ ಶೋಷಣೆಗಳನ್ನು ಗುರುತಿಸಬಹುದು. ಆದರೆ ಈ ಆರ್ಥಿಕ ಶೋಷಣೆಯನ್ನು ಅನುಭವಿಸಿ ಹೋಗುವ ದುಡಿಯುವ ಪಾತ್ರಗಳಿವೆಯೇ ಹೊರತು ಆ ಶೋಷಣೆಯನ್ನು ವಿರೋಧಿಸುವ ದೃಷ್ಟಿಕೋನ ಕಾದಂಬರಿಯಲ್ಲಿ ಕಾಣುವುದಿಲ್ಲ. ಈ ವರ್ಗಶೋಷಣೆಯ ಹಿಂದೆ ಆಳುವ ವರ್ಗದ ರಾಜಕೀಯ ತಂತ್ರ ಅಡಗಿದೆ.

ಶಿವರಾಮ ಕಾರಂತರ 'ಕುಡಿಯರ ಕೂಸು' ಕಾದಂಬರಿಯಲ್ಲಿ ಮಲೆಕುಡಿಯ ಸಮುದಾಯದ ಸ್ಥಿತಿಯನ್ನು ಕಾಣುತ್ತೇವೆ. ಮಲೆಕುಡಿಯ ಸಮುದಾಯ ಅರಣ್ಯದಲ್ಲಿ ಸಾಮೂಹಿಕ ವ್ಯವಸಾಯ ಮಾಡಿಕೊಂಡು ಬದುಕುತ್ತಿದ್ದ ದುಡಿಯುವ ಜನರನ್ನು ಊಳಿಗಮಾನ್ಯಶಾಹಿ ವ್ಯವಸ್ಥೆ ಮತ್ತು ಬಂಡವಾಳಶಾಹಿ ವ್ಯವಸ್ಥೆ ಇವರು ವಾಸಿಸುತ್ತಿದ್ದ ಪರಿಸರವನ್ನು ಅಕ್ರಮವಾಗಿ ಕಿತ್ತುಕೊಂಡು ಅವರನ್ನು ಜೀತದ ಆಳುಗಳಾಗಿ ದುಡಿಸಿಕೊಂಡಿದೆ. ತಮ್ಮ ಹಕ್ಕುಗಳನ್ನು ಕಳೆದುಕೊಂಡ ಕುಡಿಯರು ಬದುಕನ್ನು ನಿರ್ವಹಿಸಲು ಈ ಭೂಮಾಲೀಕ ವರ್ಗದ ಶೋಷಣೆಗೆ ಒಳಗಾದರು. ಇದನ್ನೇ ಮುಖ್ಯವಾಗಿ ಇಟ್ಟುಕೊಂಡ ಆಳುವ ವರ್ಗ ಅವರನ್ನು ಮೂಲ ಕಸುಬಿನಿಂದ ಬಿಡಿಸಿ ಗದ್ದೆ ಮತ್ತು ಏಲಕ್ಕಿ ತೋಟದಲ್ಲಿ ಜೀತಗಾರರಾಗಿ ದುಡಿಸಿಕೊಂಡಿತು. ನಾಲ್ಕು ತಿಂಗಳ ಕಾಲ ದುಡಿದರೂ ಅವರ ಶ್ರಮದ ಪ್ರತಿಫಲ ವರ್ಷಕ್ಕೊಂದು ಬಟ್ಟೆ, ಉಪ್ಪು, ಎಲೆ, ಅಡಿಕೆ, ಮೆಣಸು ಹಾಗೂ ಹೆಂಡ ತೆಗೆಯುತ್ತಿದ್ದುದಕ್ಕಾಗಿ ಧಣಿ ಕೊಡುತ್ತಿದ್ದ ಸುಂಕ. ಇಲ್ಲಿ ಭೂಮಾಲೀಕ ವ್ಯವಸ್ಥೆಯ ಶ್ರಮಮೌಲ್ಯ ಶೋಷಣೆಯು ಅವರ ಆರ್ಥಿಕವಾಗಿ ಶೋಷಣೆಗೆ ಒಳಗಾಗಲು ಕಾರಣವಾಗಿದೆ. ಆದರೆ ಶ್ರೀಮಂತವರ್ಗವು ಭೂಮಿಯ ಒಡೆತನ ಹೊಂದಿರುವುದರಿಂದ ಅವರು ಈ ಭೂಮಿಯ ಅಸಮಾನತೆಯನ್ನು ಮುಂದುವರಿಸಲು ಮತ್ತು ಭೂಮಿಯ ಹಕ್ಕು ಪಲ್ಲಟವಾಗದ ಹಾಗೆ ನೋಡಿಕೊಳ್ಳಲು ಈ ಕೆಳವರ್ಗದ ಕುಡಿಯರನ್ನು ಆರ್ಥಿಕವಾಗಿ ಶೋಷಣೆ ಮಾಡುವ ಕ್ರೂರ ಸ್ಥಿತಿ ಇದೆ. ಇಲ್ಲಿ ಭೂಮಿ ಮತ್ತು ಶ್ರಮಮೌಲ್ಯ ಶೋಷಣೆಯು ಆರ್ಥಿಕ ಅಸಮಾನತೆಯ ಸಂಕೇತವಾಗಿ ಗುರುತಿಸುತ್ತೇವೆ. ಆದರೆ ಕಾದಂಬರಿಯ ನಿರೂಪಣೆಯಲ್ಲಿ ಆರ್ಥಿಕ ಸಮಸ್ಯೆಗಳನ್ನು ಗುರುತಿಸಬಹುದು. ಈ ಆರ್ಥಿಕ ಸಮಸ್ಯೆಗಳಿಗೆ ಒಳಗಾದ ದುಡಿಯುವ ವರ್ಗ ಕುಡಿಯರ ಈ ವರ್ಗದೃಷ್ಟಿಕೋನವನ್ನು ಕಾದಂಬರಿಯು ತನ್ನ ಧೋರಣೆಯಲ್ಲಿ ತರದೆ ಅದನ್ನು ಆಳುವ ವರ್ಗದ ವಿವರಣೆಯ ಮೂಲಕ ಈ ಅಸಮಾನತೆಯ ಚಿತ್ರಣ ತಂದಿದೆ. ಇದರಿಂದ ಈ ಕಾದಂಬರಿಯು ದುಡಿಯುವ ವರ್ಗದ ವರ್ಗಪ್ರಜ್ಞೆಯನ್ನು ಆರೋಪಿಸುತ್ತಿದೆ ಎಂದು ಗ್ರಹಿಸಬಹುದು.

ಕುವೆಂಪು ಅವರ 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ವರ್ಗಶೋಷಣೆಯ ಚಿತ್ರಣ ಇದೆ. ಕಾದಂಬರಿಗಳಲ್ಲಿ ಹೊಲೆಯ ಸಮುದಾಯವು ಉತ್ಪಾದಕ ವರ್ಗ. ಈ ವರ್ಗವು ಭೂಮಾಲೀಕ ವರ್ಗದ ಶೋಷಣೆಗೆ ಒಳಗಾಗಿರುವುದರಿಂದ ಈ ವರ್ಗ

ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗೆ ಒಳಗಾಗಿದೆ. ಭೂಮಿಯ ಒಡೆತನ ಹೊಂದಿರುವ ವರ್ಗವು ಇವರನ್ನು ದುಡಿಮೆ ಮೂಲಕ ಮತ್ತು ಹಕ್ಕನ್ನು ವಂಚಿಸುವುದರ ಮೂಲಕ ಈ ಶ್ರಮಜೀವಿಗಳನ್ನು ಶೋಷಣೆಯ ಮಾಡುತ್ತಿರುವ ಸನ್ನಿವೇಶಗಳನ್ನು ಕಾದಂಬರಿಯಲ್ಲಿ ಗುರುತಿಸಬಹುದು. ದುಡಿಮೆ ಮಾಡುವ ಹೊಲೆಯ ಸಮುದಾಯ ಮತ್ತು ದುಡಿಸಿಕೊಳ್ಳುವ ಭೂಮಾಲೀಕ ವ್ಯವಸ್ಥೆ ವರ್ಗಶೋಷಣೆಯ ಸಂಕೇತವಾಗಿದೆ. ಇಲ್ಲಿ ದುಡಿಯುವ ಆಳುಗಳ ಗುಲಾಮರಾಗಿ ಚಿತ್ರಿಸಲಾಗಿದೆ. ಜಮೀನ್ದಾರರು ಭೂಮಿಯ ಪಾಲು ಮಾಡಿಕೊಳ್ಳುವಾಗ ಅವರ ಭೂಮಿಯಲ್ಲಿ ದುಡಿಯುತ್ತಿರುವ ಆಳುಗಳನ್ನು ಪಾಲು ಮಾಡುವುದು, ಅವರನ್ನೇ ಹಿಂಸೆ ಕೊಡುವುದು, ವರ್ಗಶೋಷಣೆಯ ಮುಖಗಳೇ ಆಗಿವೆ. ದುಡಿಯುವ ಜನರಿಗೆ ವರ್ಗಶೋಷಣೆ ಯನ್ನು ಅನುಭವಿಸುತ್ತಿರುವ ವರ್ಗಭೇದ ಸ್ಥಿತಿಯ ಅರಿವಿದೆ. ಆದರೆ ಈ ವರ್ಗ ವೈರುಧ್ಯತೆ ಎಲ್ಲಿ ಭೂಮಿಯ ಒಡೆತನವನ್ನು ಪಲ್ಲಟವಾಗಿಸಿ ದುಡಿಯುವ ಜನರಿಗೆ ದಕ್ಕುತ್ತದೆ ಎನ್ನುವ ಆತಂಕವು ವರ್ಗಪ್ರಜ್ಞೆಯನ್ನು ಮುಚ್ಚಿಡುವುದಕ್ಕಾಗಿ ಕಾರಣವಾಗಿದೆ. ಯಾಕೆಂದರೆ ಸಮಾನತೆಯ ಬಯಸುತ್ತ ಅಸಮಾನತೆ ಅಳಿಯಬೇಕು ಎನ್ನುವಾಗ, ವರ್ಗಪ್ರಜ್ಞೆ, ಆರ್ಥಿಕ ಅಸಮಾನತೆ ಬಿಟ್ಟು ಮಾತನಾಡುವುದು, ಆಳುವ ವರ್ಗದ ರಾಜಕೀಯ ಪ್ರಜ್ಞೆಯಾಗುತ್ತದೆ.

ಕಾದಂಬರಿಗಳಲ್ಲಿ ಒಕ್ಕಲಿಗರು ಅಥವಾ ಗೌಡರು ಭೂಮಿಯ ಒಡೆಯರು. ಇವರು ತಮ್ಮ ಭೂಮಿಯಲ್ಲಿ ಇತರೆ ಶ್ರಮಜೀವಿಗಳು ದುಡಿಯಬೇಕೇ ಹೊರತು ಅವರು ಭೂಮಿಯ ಒಡೆಯರಾಗಬಾರದೆಂಬ ವರ್ಗಪ್ರಜ್ಞೆ ಇದೆ. ಭೂ ಸಾಗುವಳಿ ಮಾಡ ಹೊರಟ ಹಳೆಪೈಕದ ಸೇನಾನಾಯ್ಕರ ಮೇಲೆ ಅವರಿಗೆ ಜಿದ್ದು. ಈ ಕಾರಣದಿಂದ ಬಿಲ್ಲವರು, ಹಸಲರರು, ಕುಂಬಾರರು, ಹಳೆಪೈಕದವರು ಅಸ್ಪೃಶ್ಯರು ಇವರ ಹೊಲಗದ್ದೆಗಳಲ್ಲಿ ದುಡಿಯುವ ಶ್ರಮಜೀವಿಗಳು. ಈ ದುಡಿಯುವ ವರ್ಗವು ತಮ್ಮ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡು ಆರ್ಥಿಕವಾಗಿ ಹಿಂದುಳಿದಿದ್ದಾರೆ. ಆದರೆ ಭೂಮಾಲೀಕರು ಭೂಮಿಯ ಒಡೆತ ಇರುವುದರಿಂದ ಇವರು ಆರ್ಥಿಕವಾಗಿ ಸಬಲರಾಗಿದ್ದಾರೆ. ಆದ್ದರಿಂದ ಇವರು ಕೆಳವರ್ಗವನ್ನು 'ಹೊನ್ನಾಳಿ ಹೊಡೆತ'ದ ದೌರ್ಜನ್ಯ ಮಾಡುವುದರ ಮೂಲಕ ಅವರನ್ನು ನಿರಂತರವಾಗಿ ಶೋಷಣೆ ಮಾಡುವ ಆಳುವ ವರ್ಗವನ್ನು ಕಾಣುತ್ತೇವೆ. ಆದರೆ ದೌರ್ಜನ್ಯಕ್ಕೆ ಒಳಗಾದ ದುಡಿಯುವ ಶ್ರಮಜೀವಿಗಳು ಈ ಶೋಷಣೆಯನ್ನು ಒಪ್ಪಿಕೊಂಡು ಹೋಗುವ ಪಾತ್ರಗಳಿವೆ. ಆದರೆ ಈ ಆರ್ಥಿಕ ಶೋಷಣೆಯ ವಿರುದ್ಧ ಪ್ರತಿಭಟನೆ ಇಲ್ಲ. ಹಾಗೆಯೇ ಇವರ ಹಕ್ಕುಗಳ ಬಗ್ಗೆ ವಿವರಗಳಿಲ್ಲ. ಆದ್ದರಿಂದ ಕಾದಂಬರಿಗಳು ದುಡಿಯುವ ಜನರ ವರ್ಗಪ್ರಜ್ಞೆಯನ್ನು ಕಾದಂಬರಿಯು ಆಳದಲ್ಲಿ ವಿರೋಧಿಸುತ್ತದೆ.

ರಾವ್‌ಬಹದ್ದೂರ್‌ರ 'ಗ್ರಾಮಾಯಣ' ಕಾದಂಬರಿಯಲ್ಲಿ ಭೂಮಿಯ ಅಸಮಾನತೆಯ ಪ್ರಶ್ನೆಯು ಆರ್ಥಿಕ ಶ್ರೇಣೀಕರಣವನ್ನು ಸೂಚಿಸುತ್ತದೆ. ಆಸ್ತಿಯ ಒಡೆತನ ಮತ್ತು ಅಧಿಕಾರವು ಮೇಲುವರ್ಗಗಳ ಮಧ್ಯದಲ್ಲಿಯೇ ಪಲ್ಲಟವಾಗಬೇಕು ಎನ್ನುವ ಆಳುವ ವರ್ಗದ ಆಲೋಚನೆ ಕಾದಂಬರಿಯಲ್ಲಿ ಇರುವುದರಿಂದ ದುಡಿಯುವ ವರ್ಗದ ವರ್ಗಪ್ರಜ್ಞೆಯ ಖಚಿತತೆ ಕಾಣುವುದಿಲ್ಲ.

ಆಸ್ತಿ ಮತ್ತು ಅಧಿಕಾರಕ್ಕೆ ಹಂಬಲಿಸುವ ದುಡಿಯುವ ವರ್ಗದವರನ್ನು ದುರಂತಕ್ಕೆ ತಳ್ಳುವ ಆಳುವ ವರ್ಗದ ಮನಸ್ಥಿತಿಯು ಕಾದಂಬರಿಯ ವಸ್ತುವಿಷಯವಾಗಿದೆ. ಪಾದಳ್ಳಿಯ ಭೂಮಿಯಲ್ಲಿ ಹೊಲಗಳನ್ನು ನಿರ್ಮಾಣ ಮಾಡಿದವರು. ವಾಡೆಯನ್ನು, ಮಠವನ್ನು, ಗೌಡರ ಮನೆಯನ್ನು ಹೊಲಗಳನ್ನು ನಿರ್ಮಾಣ ಮಾಡಿದವರು ಭೂಹೀನರಾದ ಕುರುಬರು, ಉಪ್ಪಾರರು, ಹೊಲೆಯರು, ಮಾದಿಗರು. ಆದರೆ ಇವರಿಗೆ ಭೂ ಒಡೆತನ ಹಕ್ಕುಗಳಿಲ್ಲ. ಭೂಮಿಯ ಒಡೆತನವನ್ನು ಜಾಗೀರದಾರರು ಗೌಡರು, ಶ್ಯಾನುಭೋಗ ಮತ್ತು ರೈತರು ಹೊಂದಿದ್ದಾರೆ. ಇದರಿಂದ ಈ ದುಡಿಯುವ ವರ್ಗವು ಇವರ ಭೂಮಿಯನ್ನು ನಿರ್ಮಾಣ ಮಾಡಿದವರು. ಆದರೆ ಅವರಿಗೆ ಇದರ ಹಕ್ಕು ಇಲ್ಲದೇ ಇರುವುದು ವರ್ಗಶೋಷಣೆಯನ್ನು ಗುರುತಿಸುತ್ತದೆ.

ಇಲ್ಲಿ ಬರುವ ದುಡಿಯುವ ವರ್ಗದ ಪಾತ್ರಗಳು ಆಳುವ ವರ್ಗದ ಅಧೀನದಲ್ಲಿವೆ. ಜೊತೆಗೆ ಆಳುವ ವರ್ಗವು ಇವರನ್ನು ತನ್ನ ಹಿತಾಸಕ್ತಿಗಾಗಿ ಬಳಸಿಕೊಂಡಿದೆ. ರಾಣೋಜಿರಾಯನ ಮರಣದ ನಂತರ ಅವನ ಎರಡು ಜನ ಹೆಂಡತಿಯರ ನಡುವೆ ಆಸ್ತಿಯ ಒಡೆತನಕ್ಕಾಗಿ ನಡೆದ ಕಲಹವು ಇಡೀ ಪಾದಳ್ಳಿಯನ್ನು ವಿನಾಶದ ಅಂಚಿಗೆ ತಳ್ಳುತ್ತದೆ. ಹೊಲಗದ್ದೆಗಳಲ್ಲಿ ದುಡಿಯುತ್ತಿದ್ದ ಶ್ರಮಿಕರನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡಿದ್ದು, ಪಾದಳ್ಳಿಯ ದುಡಿಯುವ ಜನರು ಹಸಿವಿನ ಸಮಸ್ಯೆ ಎದುರಿಸಿದ್ದು ಮತ್ತು ದುಡಿಯುವ ಜನರ ಮೇಲೆ ದೌರ್ಜನ್ಯ, ನಾನಾನ ಕೊಲೆ, ಚಿಮಣಾಳ ಪ್ರಕರಣ, ಚಂದ್ರಿ ಮತ್ತು ಮಲ್ಲಿಯ ಮೇಲಿನ ದೌರ್ಜನ್ಯ, ಆರ್ಥಿಕ ಸಮಸ್ಯೆಗಳಿಂದ ನಡೆದವು. ಈ ಕೆಳವರ್ಗದ ಜನರು ಆರ್ಥಿಕವಾಗಿ ಅಸಮಾನತೆಯನ್ನು ಅನುಭವಿಸುವಂತೆ ಮಾಡಿದ ಆಳುವ ವರ್ಗ. ಅವರ ಮೇಲೆ ನಿರಂತರವಾಗಿ ದೌರ್ಜನ್ಯ, ಶೋಷಣೆ ಮಾಡುವುದರ ಮೂಲಕ ಶ್ರೇಣೀಕರಣ ವ್ಯವಸ್ಥೆ, ಆರ್ಥಿಕ ಅಸಮಾನತೆ, ಆರ್ಥಿಕ ಸಮಸ್ಯೆಗಳನ್ನು ಸಮಾಜದಲ್ಲಿ ಮುಂದುವರಿಸಲು ಕೆಳವರ್ಗದ ಜನರ ಮೇಲೆ ದೌರ್ಜನ್ಯ ಮಾಡುತ್ತಿದೆ. ಇಲ್ಲಿ ಮುಖ್ಯವಾಗಿ ಭೂಮಿಯ ಒಡೆತನ ಆಳುವ ವರ್ಗದಿಂದ ದುಡಿಯುವ ವರ್ಗಕ್ಕೆ ಪಲ್ಲಟವಾಗುವುದನ್ನು ತಡೆಯಲು ಮಾಡಿದ ರಾಜಕೀಯ ತಂತ್ರ ಇಲ್ಲಿ ನಿರೂಪಣೆಗೊಂಡಿದೆ.

ಪ್ರಗತಿಶೀಲ ಸಾಹಿತ್ಯದ ಸಂದರ್ಭದಲ್ಲಿ ರಚನೆಯಾದ ನಿರಂಜನರ 'ಚಿರಸ್ಮರಣೆ' ಕಾದಂಬರಿಯು ದುಡಿಯುವ ವರ್ಗದ ರಾಜಕೀಯ ದೃಷ್ಟಿಕೋನವನ್ನು ಕುರಿತು ಅಭಿವ್ಯಕ್ತಿಸುತ್ತದೆ. ದುಡಿಯುವ ವರ್ಗವು ತನ್ನ ಕಳೆದುಕೊಂಡ ಹಕ್ಕುಗಳನ್ನು ಪಡೆದುಕೊಳ್ಳುವ ಹೋರಾಟವು ಈ ಕೃತಿಯ ಉಸಿರಾಗಿರುವುದನ್ನು ಕಾಣುತ್ತೇವೆ. ಆಸ್ತಿಯ ಬಗೆಗಿನ ಪ್ರಜ್ಞೆ ಮತ್ತು ಆಸ್ತಿಯ ಹಕ್ಕಿನ ಪ್ರತಿಪಾದನೆ ಕುರಿತ ನಿರೂಪಣೆಯನ್ನು ಗಮನಿಸಬಹುದು. ನಂಬೂದರಿ ಮತ್ತು ನಂಬಿಯಾರ ಶ್ರೀಮಂತ ವರ್ಗದ ಪ್ರತಿನಿಧಿಗಳು. ಇವರು ರೈತರ ಭೂಮಿಯನ್ನು ಆಕ್ರಮವಾಗಿ ಕಿತ್ತುಕೊಂಡು ಬಲಿಷ್ಠರಾಗಿದ್ದಾರೆ. ಇವರು ತಮಗಿಂತ ಕೆಳಗಿನ ಆರ್ಥಿಕ ಸ್ಥಿತಿಯನ್ನು ಹೊಂದಿರುವ ವರ್ಗವನ್ನು ಶೋಷಣೆ ಮಾಡುವುದೇ ಇವರ ಪ್ರಕ್ರಿಯೆಯಾಗಿದೆ. "ಈ ಹಳ್ಳಿಯ ಇಬ್ಬರು ಜಮೀನ್ದಾರ್ರು ಆಳೋ ಪಾಳೆಯಗಾರರಾಗಿ ಹೋದ್ರು, ಅವರು ರಾಜರು ನಾವು ಪ್ರಜೆಗಳು"[೩] ಎಂದು ಅಪ್ಪು

ಚಿರುಕಂಡನೊಡನೆ ಹೇಳುವ ಮಾತು ಆರ್ಥಿಕ ಶ್ರೇಣೀಕರಣವನ್ನು ಸೂಚಿಸುತ್ತದೆ. "ಇವತ್ತಿನಿಂದ ನಾವು ಜಮೀನ್ದಾರರ ಒಕ್ಕಲು", "ಜಮೀನ್ದಾರ ಇಷ್ಟು ಕ್ರೂರಿಯಾಗ್ಬಹುದೂಂತ ನಾನು ಭಾವಿಸಿರಿಲ್ಲ ಕಲ್ಯಾಣಿ", "ನಿನ್ನೆ ನಾವು ಸ್ವಂತ ಆಸ್ತಿ ಇದ್ದ ರೈತರು ಊರಲ್ಲಿ ನಮಗೆ ಮಾನ ಮರ್ಯಾದೆ ಸಿಗಿತ್ತು ಇವತ್ತು ನಾವು ಧನಿಗಳ ಒಕ್ಕಲು ಗುಲಾಮರು"[9] ಎಂದು ಚಿರಕುಂಡನ ತಂದೆಯ ಮಾತು. ಮೇಲುವರ್ಗದ ಆಕ್ರಮಣ, ದೌರ್ಜನ್ಯವನ್ನು ಸೂಚಿಸುತ್ತದೆ. ಇದು ಬರೀ ದೌರ್ಜನ್ಯ ಮಾತ್ರವಲ್ಲ. ಇದರ ಹಿಂದೆ ಆರ್ಥಿಕ ಶೋಷಣೆ ಇದೆ. ನಂಬೂದರಿ ಮತ್ತು ನಂಬಿಯಾರ, ಜಾತಿ ಚೌಕಟ್ಟಿನೊಳಗೆ ಬ್ರಾಹ್ಮಣ ಮತ್ತು ಶೂದ್ರ, ಆದರೆ ವರ್ಗದ ಪ್ರಶ್ನೆ ಬಂದಾಗ ಈ ಎರಡು ವರ್ಗಗಳು ಒಂದಾಗಿ ದುಡಿಯುವ ವರ್ಗದ ರಾಜಕೀಯ ಹೋರಾಟವನ್ನು ದಮನ ಮಾಡಲು ಪ್ರಯತ್ನಿಸುವುದು ವರ್ಗ ಸ್ವಭಾವ. ಆದರೆ ಹೀಗೆ ಕಾದಂಬರಿಯು ಆರ್ಥಿಕವಾಗಿ ಪ್ರಬಲವಿರುವ ಭೂಮಾಲೀಕ ವರ್ಗದ ಶೋಷಣೆಯ ವಿರುದ್ಧ, ಆಸ್ತಿಯ ಹಕ್ಕಿಗಾಗಿ ಮತ್ತು ಆರ್ಥಿಕ ಶೋಷಣೆಯ ವಿರುದ್ಧ ವರ್ಗಸಂಘರ್ಷಕ್ಕೆ ಮುಂದಾಗುವುದು ಕಾದಂಬರಿಯ ಕೇಂದ್ರಪ್ರಜ್ಞೆಯಾಗಿ ನಿರೂಪಣೆ ಗೊಂಡಿದೆ.

ಈ ಕಾದಂಬರಿಗಳ ಮೂಲಕ ಅಧಿಕಾರ ಹಸ್ತಾಂತರ ನಂತರದ ಆಳು ವರ್ಗದ ಶೋಷಣೆಯನ್ನು ವಿರೋಧಿಸುವ ದುಡಿಯುವ ವರ್ಗದ ರಾಜಕೀಯ ಮತ್ತು ಆರ್ಥಿಕ ಒತ್ತಡವನ್ನು ಕಾದಂಬರಿ ಸಾಹಿತ್ಯ ತಂದಿದೆ. ಇದು ಭೂಮಾಲೀಕ ವ್ಯವಸ್ಥೆ ಮತ್ತು ಬಂಡವಾಳಶಾಹಿ ಬೆಳವಣಿಗೆ(ಶೋಷಣೆ)ಯನ್ನು ವಿರೋಧಿಸಿ, ಸಾಮಾಜಿಕ ಸಮಾನತೆಗಾಗಿ ವೈಚಾರಿಕ ಸಂಘರ್ಷಗಳಿಗೆ ಇಳಿದಿರುವುದನ್ನು ಕಾಣುತ್ತೇವೆ. ನವೋದಯದ ಸಾಹಿತ್ಯ ಆಳುವ ವರ್ಗದ ಆರ್ಥಿಕ ಚಿಂತನೆಗೆ ಒತ್ತುಕೊಟ್ಟಿದೆ. ಇದು ಸಾಮಾಜಿಕ ಮತ್ತು ದುಡಿಯುವ ವರ್ಗದ ರಾಜಕೀಯ ಚಿಂತನೆಗೆ ಸ್ಪಂದಿಸಿದೆ. ಆದರೆ ನವ್ಯ ಪಂಥವು ಈ ವರ್ಗಪ್ರಜ್ಞೆಯನ್ನು ಯಾಂತ್ರಿಕವಾಗಿ ಗ್ರಹಿಸಿರುವುದನ್ನು ಕಾಣಬಹುದು. ಅನಂತಮೂರ್ತಿಯವರ ಬರಹಗಳು, ತೇಜಸ್ವಿಯವರ ಬರಹಗಳು, ಎಸ್.ಎಲ್. ಭೈರಪ್ಪನವರ ಸಾಹಿತ್ಯ ಬರವಣಿಗೆಗಳು ವರ್ಗಪ್ರಜ್ಞೆಯನ್ನು ವ್ಯಕ್ತಿನಿಷ್ಠವಾಗಿ ನಿರೂಪಿಸುವ ಪ್ರಯತ್ನ ಮಾಡಿವೆ. ಉತ್ಪಾದನಾ ಸಂಬಂಧಗಳ ನಡುವೆ ಇರುವ ವರ್ಗಶ್ರೇಣೀಕರಣ, ವರ್ಗ ಶೋಷಣೆ, ಈ ವರ್ಗ ತಾರತಮ್ಯದ ಪರಿಣಾಮವಾಗಿ ಆರ್ಥಿಕ ಸಂಬಂಧದ ಪರಿಣಾಮದ ಸಮಸ್ಯೆ, ಖಾಸಗಿ ಆಸ್ತಿ, ಬಂಡವಾಳಶಾಹಿ ಬೆಳವಣಿಗೆಗಳು, ಸಾಮಾಜಿಕ, ಆರ್ಥಿಕ ಶೋಷಣೆಗೆ ಕಾರಣವಾದ ಆರ್ಥಿಕ ಅಜೆಂಡವನ್ನು ಗ್ರಹಿಸಿರುವ ಮಾದರಿಗಳು ವರ್ಗಪ್ರಜ್ಞೆಯನ್ನು ಗೌಣಗೊಳಿಸುವ ಮಾದರಿಯಲ್ಲಿ ಕಾಣಿಸುತ್ತವೆ.

ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಮತ್ತು 'ಭಾರತೀಪುರ' ಕಾದಂಬರಿಗಳಲ್ಲಿ ಸಮಾಜದ ಸೂಕ್ಷ್ಮವಾದ ಆರ್ಥಿಕ ಶ್ರೇಣೀಕರಣವನ್ನು ಗುರುತಿಸಬಹುದು. 'ಸಂಸ್ಕಾರ' ಕಾದಂಬರಿ ಯಲ್ಲಿ ಶೋಷಿತ ವರ್ಗದ ಪಾತ್ರಗಳ ವೃತ್ತಿ, ಕಸುಬುಗಳ ಬಗೆಗೆ ವಿವರಣೆಗಳು ಇಲ್ಲ. ಚಿನ್ನಿ ಸಗಣಿ ಎತ್ತುವ ಕೆಲಸವನ್ನು ಕೆಳವರ್ಗದ ಹೆಣ್ಣುಮಕ್ಕಳು ಮಾಡುವ ಕೆಲಸವಾಗಿ ಕಾದಂಬರಿ

ಭಾವಿಸಿದೆ. ಚಿನ್ನಿ ದೂರದಲ್ಲಿ ನಿಂತು "ಅವ್ವಾ ಅವ್ವಾ, ಬಾಯಿಗಷ್ಟು ಕವಳಾ ಎಸೀರವ್ವಾ" ಎಂದು ಬೇಡಿಕೊಂಡಿದ್ದು ಮತ್ತು ಬೆಳ್ಳಿಯ ಉಡುಪಿನ ಚಿತ್ರಣ ಆರ್ಥಿಕ ಶ್ರೇಣೀಕರಣದ ಸಮಾಜದ ಚಿತ್ರಣವನ್ನು ಸೂಚಿಸುತ್ತದೆ. ನಾರಣಪ್ಪನ ಮತ್ತು ಚಂದ್ರಿಯ ನಡುವಿನ ಸಂಬಂಧ ಸಹಜವಾದ ಕ್ರಿಯೆ ಆದರೂ ಇದು ಬ್ರಾಹ್ಮಣ ಮತ್ತು ಶೂದ್ರರ ನಡುವಿನ ಸಂಬಂಧವಾಗಿ ಪರಿವರ್ತನೆಯಾಗಿದೆ. ಈ ವಸ್ತುವಿಷಯವು ಇಡೀ ಬ್ರಾಹ್ಮಣ ಸಮುದಾಯದ ವಿರೋಧಕ್ಕೆ ಕಾರಣವಾಗಿರುವುದನ್ನು ಗುರುತಿಸಬಹುದು. ಯಾಕೆಂದರೆ ವರ್ಣ ಮತ್ತು ಜಾತಿ ಚೌಕಟ್ಟಿನ ಒಳಗೆ ಆರ್ಥಿಕ ಅಸಮಾನತೆಯ ಬೇರುಗಳು ಈ ವರ್ಗಸಮಸ್ಯೆಗಳಿಗೆ ಕಾರಣವಾಗುತ್ತಿರುವುದನ್ನು ಗುರುತಿಸಬಹುದು.

ಊಳಿಗಮಾನ್ಯಶಾಹಿ ಸಂಸ್ಕೃತಿಯ ಆರಾಧಕರಾದ ಬ್ರಾಹ್ಮಣ ಸಮುದಾಯ ನಂಬಿರುವ ಅಸಮಾನತೆಯ ಮೌಲ್ಯಗಳು ಈ ಸಂಬಂಧದಿಂದ ಮುರಿದು ಹೋಗುವ ಆತಂಕವು ಮೇಲ್ವರ್ಗದವರ ನಂಬಿಕೆಯಲ್ಲಿ ಆಳವಾಗಿ ಬೇರೂರಿದೆ. ಆದರೆ ಕಾದಂಬರಿಯಲ್ಲಿ ನಾರಣಪ್ಪ ಮತ್ತು ಪ್ರಾಣೇಶಾಚಾರ್ಯರು ಈ ಮೌಲ್ಯಗಳಿಂದ ಹೊರಬರುವ ಪ್ರಯತ್ನ ಇದೆ. ಶ್ರೀಪತಿಯು ಬೆಳ್ಳಿಯನ್ನು ಬಳಸಿಕೊಂಡಿದ್ದು ಹೆಣ್ಣನ್ನು ತನ್ನ ಅಧೀನವಾದ ವಸ್ತುಸ್ಥಿತಿಯಲ್ಲಿ ಮತ್ತು ಕೆಳವರ್ಗದ ಮಹಿಳೆಯಾದ ಕಾರಣಕ್ಕಾಗಿ ಮೇಲುವರ್ಗದ ಪುರುಷರು ಕೆಳವರ್ಗದ ಮಹಿಳೆಯರನ್ನು ಖಾಸಗಿ ಸ್ವತ್ತೆಂಬ ರೀತಿಯಲ್ಲಿ ಅವರನ್ನು ದೌರ್ಜನ್ಯದಿಂದ ಬಳಸಿಕೊಳ್ಳುವ ರೀತಿಯಲ್ಲಿ, ಶ್ರೀಪತಿ ಬೆಳ್ಳಿಯನ್ನು ಉಪಯೋಗಿಸಿಕೊಂಡಿರುವುದನ್ನು ಕಾಣುತ್ತೇವೆ. ಕಾದಂಬರಿಯಲ್ಲಿ ವರ್ಗಶೋಷಣೆ, ಜಾತಿ ಶೋಷಣೆ, ಆರ್ಥಿಕ ಅಸಮಾನತೆಯ ಕಾರಣದಿಂದ ನಡೆದರು. ಈ ಆರ್ಥಿಕ ಶೋಷಣೆಯ ಬಗೆಯನ್ನು ವಿವರಿಸುವಾಗ ವರ್ಗಪ್ರಜ್ಞೆಯನ್ನು ಮುಚ್ಚಿಟ್ಟು, ವ್ಯಕ್ತಿನಿಷ್ಠೆಯನ್ನು ಮುಂದೆ ತರುತ್ತಿದೆ. ಮೇಲುವರ್ಗದವರ ಪರವಾದ ವ್ಯವಸ್ಥೆಯ ಚಿತ್ರಣ, ಪುರುಷರು ಮಹಿಳೆಯರನ್ನು ಹೀನಾಯವಾಗಿ ನಡೆಸಿಕೊಳ್ಳುವುದು ಮತ್ತು ಲಿಂಗಾಧಾರಿತ ಶೋಷಣೆ ಮಾಡುವುದು, ಧಾರ್ಮಿಕ ಆಚರಣೆ, ಕಟ್ಟುಪಾಡುಗಳು ವರ್ಗಶೋಷಣೆಯನ್ನು ಚಿತ್ರಿಸುತ್ತವೆ. ಆದರೆ ಈ ವರ್ಗ ಅಸಮಾನತೆ ಅಥವಾ ಆರ್ಥಿಕ ಶೋಷಣೆ ನಡೆದರೂ ಕಾದಂಬರಿಯ ನಿರೂಪಣೆಯು ವರ್ಗಪ್ರಜ್ಞೆಯನ್ನು ತರುವುದಿಲ್ಲ. ಇದರಿಂದ ವರ್ಗಪ್ರಜ್ಞೆಯನ್ನು ಉತ್ಪಾದನಾ ಸಂಬಂಧಗಳಿಂದ ಬೇರ್ಪಡಿಸಿ ನಿರೂಪಿಸುವ ಆಳುವ ವರ್ಗದ ರಾಜಕೀಯ ತಿಳುವಳಿಕೆಯನ್ನು ಇಲ್ಲಿ ಗುರುತಿಸಬಹುದು.

'ಭಾರತೀಪುರ' ಕಾದಂಬರಿಯಲ್ಲಿ ಜಗನ್ನಾಥ ಆರ್ಥಿಕವಾಗಿ ಬಲಿಷ್ಠವಾದ ಮೇಲುವರ್ಗದ ಪ್ರತಿನಿಧಿ. ಇವನು ಚಿಕ್ಕವನಾಗಿದ್ದಾಗ ಹೊಲೆಯರ ಭರ್ಮ ದಾರಿಯಲ್ಲಿ ಇವನಿಗೆ ಸಿಕ್ಕಿದರೆ ಭರ್ಮನು ಪಟ್ಟನೆ ಸರಿದು ಮರದ ಹಿಂದೆ ಅವಿತು ತೊಟ್ಟಿದ್ದ ಅಂಗಿಯನ್ನು ಬಿಚ್ಚಿ ಕಣ್ಣಿಗೆ ಬೀಳುವುದೇ ತಪ್ಪೇನೋ ಎನ್ನುವಂತೆ ದಾರಿಯಂಚಿನಲ್ಲಿ ನಿಲ್ಲುವುದು ಅವನ ಅಸಹಾಯಕತೆಯನ್ನು ಮಾತ್ರ ತೋರಿಸುತ್ತಿಲ್ಲ. ಇದು ಆರ್ಥಿಕ ಶ್ರೇಣೀಕರಣ, ಆರ್ಥಿಕ ಶೋಷಣೆಯನ್ನು ಪ್ರತಿಬಿಂಬಿಸುತ್ತಿದೆ. ಸ್ಲೇಟಿನಲ್ಲಿ ಅಕ್ಷರ ತಿದ್ದಿ ಜಗನ್ನಾಥ ಪಿಳ್ಳನಿಗೆ ತಗೋ ಎಂದಾಗ ಪಿಳ್ಳನ ವರ್ತನೆಯನ್ನು

ಗಮನಿಸಿದರೆ ಅಸ್ಪೃಶ್ಯತೆಯ ವಸ್ತುಸ್ಥಿತಿ ಅಭಿವ್ಯಕ್ತವಾಗುತ್ತದೆ. ಜೊತೆಗೆ ಜಗನ್ನಾಥ ಮೇಲುವರ್ಗದ ಪ್ರತಿನಿಧಿಯಾಗಿ ಮಾಲೀಕನಾಗಿರುವುದರಿಂದ ಇವರಿಗಿಂತ ಆರ್ಥಿಕವಾಗಿ ಶೋಷಣೆಗೆ ಒಳಗಾದ ದಲಿತ ಸಮುದಾಯದ ಜನರ ಈ ಬಗೆಯ ವರ್ತನೆಯಲ್ಲಿ ಆರ್ಥಿಕ ಶ್ರೇಣೀಕರಣ ವ್ಯವಸ್ಥೆಯ ಸೂಚನೆ ಇದೆ. ದಲಿತ ವರ್ಗವು ಶ್ರೀಮಂತರ ಮನೆಯ ಕೂಲಿ ಆಳುಗಳಾಗಿ ದುಡಿಯುತ್ತಿರುವುದ ರಿಂದ ಜಗನ್ನಾಥನು ಬಯಸುವ ಸುಧಾರಣೆಯು ಆ ವರ್ಗದ ಜನರಿಗೆ ಅಗತ್ಯವಾಗುವುದಿಲ್ಲ. ಇರುವ ಸಾಮಾಜಿಕ ಅಸಮಾನತೆಯ ಬೇರುಗಳು ದೇವಾಲಯಗಳ ಪ್ರವೇಶದಿಂದ ಅಥವಾ ಅಕ್ಷರ ಜ್ಞಾನದಿಂದ ದೂರ ಮಾಡುವ ವರ್ಗ ಆಲೋಚನೆಯು ಶೋಷಣೆಯನ್ನು ತಡೆಗಟ್ಟುವಲ್ಲಿ ವಿಫಲವಾಗುತ್ತದೆ. ವರ್ಗ ಅಸಮಾನತೆಯಿಂದ ವರ್ಗಶೋಷಣೆಯಿಂದ ಬಳಲುವ ಶೋಷಿತ ವರ್ಗಕ್ಕೆ ತನ್ನ ವರ್ಗದ ಹಕ್ಕುಗಳು ಅಥವಾ ಆರ್ಥಿಕ ಶೋಷಣೆಯ ವಿರುದ್ಧ ಪ್ರತಿಭಟನೆಯನ್ನು ಬಯಸುತ್ತದೆ. ಆದರೆ ಕಾದಂಬರಿಯಲ್ಲಿ ಈ ದುಡಿಯುವ ವರ್ಗದ ಪ್ರಜ್ಞೆಯನ್ನು ದೂರ ಇಟ್ಟಿರುವುದು ಆಳುವ ವರ್ಗದ ರಾಜಕೀಯ ತಂತ್ರವಾಗಿದೆ.

ದೇವನೂರ ಮಹಾದೇವ ಅವರ 'ಒಡಲಾಳ' ಮತ್ತು 'ಕುಸುಮಬಾಲೆ' ಕಾದಂಬರಿಯಲ್ಲಿ ಅಸಮಾನತೆ ಮತ್ತು ಶೋಷಣೆಗಳಿಂದ ಕೂಡಿರುವ ಸಮಾಜದ ಚಿತ್ರಣ ಇದೆ. ಕುಸುಮಬಾಲೆಯಲ್ಲಿ ೧೬ ಎಳನೀರನ್ನು ಕುಡಿಯುವ ಗಾರಸಿದ್ದಾವ ಉತ್ಪಾದಕ ವರ್ಗದ ಪ್ರತಿನಿಧಿಯಾಗಿದ್ದಾನೆ. ಹಸಿವು ಇಲ್ಲಿ ಆರ್ಥಿಕ ಶ್ರೇಣೀಕರಣದ ಅಥವಾ ಶೋಷಣೆಗಳ ಪರಿಣಾಮದಿಂದ ಹುಟ್ಟಿಕೊಂಡ ವಸ್ತುಸ್ಥಿತಿ. ಹಸಿವಿನ ತೀವ್ರತೆ ಅವನನ್ನು ಎಳನೀರು ಕುಡಿಯುವ ಅಗತ್ಯಕ್ಕೆ ತಳ್ಳಿದೆ. ಆದರೆ ಈ ಸಂದರ್ಭವನ್ನು ಆಳುವ ವರ್ಗ ಅನ್ಯಾಯ ಎಂದು ಭಾವಿಸಿ ಅವನಿಗೆ ಶಿಕ್ಷೆ ಕೊಡುವುದು ಆರ್ಥಿಕ ಅಸಮಾನತೆ ಸ್ಥಿತಿಯನ್ನು ಬಿಂಬಿಸುತ್ತಿದೆ. ದುಡಿಯುವ ವರ್ಗವು ತನ್ನ ಒಡೆತನದಲ್ಲಿ ಇಲ್ಲದ ಭೂಮಿಯಲ್ಲಿ ದುಡಿದು ಜೀವನ ಸಾಗಿಸುವಾಗ ಅವನು ಬೆಳೆದ ಬೆಳೆಯ ಫಲವನ್ನು ಉಪಯೋಗಿಸುವ ಹಾಗಿಲ್ಲ. ಇವನ ಶ್ರಮದ ಪ್ರತಿಫಲ ಮಾಲೀಕನಿಗೆ ಸೇರಿದ್ದು. ಈ ವರ್ಗ ವೈರುಧ್ಯತೆ ಕುಸುಮಬಾಲೆಯಲ್ಲಿ ಜಾತಿ, ವಿವಾಹ, ಹಸಿವಿನ ಸಮಸ್ಯೆಯಲ್ಲಿ ಪ್ರತಿಧ್ವನಿಸುತ್ತದೆ. ಉತ್ಪಾದಕ ವರ್ಗಕ್ಕೆ ಸಿಗಬೇಕಾದ ಪಾಲು ದಕ್ಕಿಲ್ಲ ಎಂಬ ಮಾನವೀಯ ಕೊರಗು ಆರ್ಥಿಕ ಶೋಷಣೆಯನ್ನು ನಿರೂಪಿಸುತ್ತದೆ. 'ಒಡಲಾಳ'ದಲ್ಲಿ ಸಾಕವ್ವನ ಕುಟುಂಬದ ಬಿಕ್ಕಟ್ಟು ಆರ್ಥಿಕ ಸಮಸ್ಯೆಗಳಿಂದ ಹುಟ್ಟಿಕೊಂಡಿದ್ದು, ಒಳ್ಳೆಯ ಆರ್ಥಿಕ ಸ್ಥಿತಿಯಲ್ಲಿ ಬದುಕನ್ನು ನಿರ್ವಹಿಸಿದ್ದ ಕುಟುಂಬವು ಮೇಲ್ವರ್ಗದ ಶೋಷಣೆಯಿಂದ ತನ್ನ ಹಕ್ಕುಗಳನ್ನು ಕಳೆದುಕೊಂಡು ಹಸಿವಿನ ಸಮಸ್ಯೆಯನ್ನು ಎದುರಿಸುತ್ತಿದೆ. ಕಡ್ಲೆಕಾಯಿ ತಿನ್ನುವಾಗ ಸಾಮೂಹಿಕವಾಗಿ ಪಾಲುಗೊಳ್ಳುವುದು, ಸಾಕವ್ವ ಹುಡುಕಲು ಹೊರಟ ಹುಂಜದ ಚಿತ್ರಣ ಪುಟ್ಟಗೌರಿ, ಗೌರಮ್ಮನ ದುಡಿಮೆಯ ಚಿತ್ರಣ, ದುಡಿಯುವ ವರ್ಗದ ಆರ್ಥಿಕ ಸ್ಥಿತಿಗತಿಯನ್ನು ಅಭಿವ್ಯಕ್ತಿಸುತ್ತದೆ. ಈ ದುಡಿಯುವ ವರ್ಗವನ್ನು ನಿರಂತರವಾಗಿ ಶೋಷಣೆ ಮಾಡುವ ಮೇಲುವರ್ಗದ ದೌರ್ಜನ್ಯ ಮುಂದುವರೆದಿದೆ. ಜೊತೆಗೆ ಜಾತಿ ಶೋಷಣೆ ವಿರುದ್ಧ ದಲಿತವರ್ಗದ ಜಾಗೃತಿಯನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಕಡ್ಲೆಕಾಯಿ ಆರೋಪದಲ್ಲಿ "ಸಾಹುಕಾರರಿಗೆ ಏನೂ ತೋಚದಾಗಿ ಹೊಟ್ಟೆ ಒಳಗೆ ಬೆಂಕಿ ಇಟ್ಕೊಂಡ ರಾಕ್ಷಸರು ಈ ಜನ ತಿಂದಿರಲೂಬಹುದಾ ಅನಿಸಿತು".[೬] ಹೀಗೆ ದುಡಿಯುವ ವರ್ಗವನ್ನು ಶೋಷಣೆ ಮಾಡುವ ಆಳುವ ವರ್ಗವು ಈ ರೀತಿಯಲ್ಲಿ ಮಾತನಾಡಲು ಅವರು ಪ್ರತಿನಿಧಿಸುವ ಆರ್ಥಿಕ ಅಸಮಾನತೆ ಕಾರಣವಾಗಿದೆ. ವರ್ಗ ಅಸಮಾನತೆಯನ್ನು ಮುಂದುವರಿಸಲು ತನಗಿಂತ ಕೆಳಗಿನ ವರ್ಗವನ್ನು ತುಳಿಯುತ್ತ ಅವರನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುವ ಪ್ರಯತ್ನವಿದು. 'ಒಡಲಾಳ' ಮತ್ತು 'ಕುಸುಮಬಾಲೆ'ಯಲ್ಲಿ ಆರ್ಥಿಕ ಬಡತನವು ಹೊಟ್ಟೆ ಹಸಿವನ್ನು ಉಂಟುಮಾಡಿದೆ. ಭೂಸಂಬಂಧ, ಹಸಿವು, ನಿರುದ್ಯೋಗ, ಊಳಿಗಮಾನ್ಯಶಾಹಿ ವ್ಯವಸ್ಥೆಯ ಶೋಷಣೆಯ ಪರಿಣಾಮದಿಂದ ಉದ್ಭವಿಸಿರುವ ಆರ್ಥಿಕ ಸಮಸ್ಯೆಯಾಗಿ ಕಾದಂಬರಿಗಳು ಗುರುತಿಸುತ್ತಿವೆ.

ಆರ್.ವಿ. ಭಂಡಾರಿಯವರ 'ಬೆಂಕಿಯ ಮಧ್ಯ' ಕಾದಂಬರಿಯಲ್ಲಿ ಮುನಿಯಪ್ಪ ಶೋಷಿತ ವರ್ಗದವನಾಗಿ ಶಿಕ್ಷಣ ಕಲಿತು ನೌಕರಿ ಪಡೆದುಕೊಂಡ ವ್ಯಕ್ತಿ. ಆದರೆ ಇವನು ಪ್ರತಿನಿಧಿಸುವ ವರ್ಗದ ಜನರು ಇನ್ನೂ ಮೇಲುವರ್ಗಗಳ ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಆದರೆ ಈ ದಲಿತ ವರ್ಗಗಳ ಬದಲಾವಣೆಯನ್ನು ಸಹಿಸದ ಆಳುವ ವರ್ಗವು ಇವರನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುವ ಪ್ರಯತ್ನ ಮಾಡುವುದನ್ನು ಕಾದಂಬರಿ ಗುರುತಿಸುವುದರ ಜೊತೆಗೆ ಈ ಆಳುವ ವರ್ಗದ ಶೋಷಣೆಯ ವಿರುದ್ಧ ದಲಿತ ವರ್ಗದ ಜಾಗೃತಿಯನ್ನು ಗುರುತಿಸುತ್ತಿದೆ. "ರಾಕ್ಷಸ್ರು ತಮ್ಮ ಜೀತದಲ್ಲಿ ಜೀವನ ಕಳೀ ಬೇಕು ತಮ್ಮ ತಲ್ಬಿಗೆ ನಮ್ಮ ಹೆಣ್ಣುಗಳಾಗಬೇಕು, ನ್ಯಾಯ ಕೇಳಿದ್ರೆ ಬೋಳಿಮಕ್ಕು ಉರ್ದ ಬಿಳ್ತಾವೆ. ನಮ್ಮ ಜನಾ ಎಚ್ಚೆತ್ತಿದ್ದಾರೆ ನೋಡಿ. ಈ ಎಚ್ಚೆತ್ತವರ ಪ್ರತಿಭಟನೆ ಅಡಗಿಸಲು ಎಂತ ನೀಚ ಕೃತ್ಯ ಮಾಡ್ತಾರೆ. ಎಲ್ಲಿ ನೋಡಿದ್ರೂ ಹರಿಜನರ ಕೊಲೆ".[೭] "ಈಗ ದಲಿತರನ್ನು ಬೆಂಕಿಯಲ್ಲಿ ಹಾಕ್ತಿರೋ ಜನ ತಾವು ಬೆಂಕಿ ಮಧ್ಯದಲ್ಲಿದೇವೆ ಎಂದು ತಿಳಿದಿಲ್ಲ. ಈ ಬೆಂಕಿ ಯಾವಾಗ ಬುಗಿಲ್ ಎನ್ನುತ್ತೋ ಈ ಇವರನ್ನೆಲ್ಲ ಬೂದಿ ಮಾಡುತ್ತೋ ತಿಳೀದು."[೮] ಈ ವಿವರಣೆಗಳು ಸಮಾಜದ ಆರ್ಥಿಕ ಶೋಷಣೆಯ ಜೀವಂತ ಸ್ಥಿತಿಯನ್ನು ಚಿತ್ರಿಸುತ್ತದೆ ಮತ್ತು ದುಡಿಯುವ ವರ್ಗದ ಶ್ರಮದ ಮೇಲೆ ಕಟ್ಟಿಕೊಂಡಿರುವ ಆಳುವ ವರ್ಗದ ವ್ಯವಸ್ಥೆಯನ್ನು ನಾಶದ ಸುಳಿವನ್ನು ಪ್ರತಿನಿಧಿಸುತ್ತಿದೆ. ದುಡಿಯುವ ವರ್ಗವು ತನ್ನ ಆರ್ಥಿಕ ಶೋಷಣೆಯನ್ನು ಹಿಮ್ಮೆಟ್ಟಿಸುವ ಅಥವಾ ಬದಲಾಯಿಸುವ ಆಶಯವನ್ನು ಕಾದಂಬರಿಯ ನಿರೂಪಣೆಯಲ್ಲಿ ಕಾಣುತ್ತೇವೆ.

ಮ.ನ. ಜವರಯ್ಯನವರ 'ಮಾಗಿ' ಕಾದಂಬರಿಯಲ್ಲಿ ಮೇಲುವರ್ಗದ ಕ್ರೌರ್ಯ ಕೆಳವರ್ಗವನ್ನು ಜೀತಪದ್ಧತಿಯ ಅಡಿಯಲ್ಲಿ ದುಡಿಸಿಕೊಳ್ಳುವ ಭೂಮಾಲೀಕ ವ್ಯವಸ್ಥೆಯನ್ನು ಕಾಣುತ್ತೇವೆ. ಸ್ವಾಮೇಗೌಡ ಮತ್ತು ರಾಜೇಗೌಡರ ಮೇಲುವರ್ಗವನ್ನು ಪ್ರತಿನಿಧಿಸುತ್ತಾರೆ. ಮಲ್ಲಪ್ಪ ಇವರುಗಳ ಭೂಮಿಯಲ್ಲಿ ಜೀತದಾಳಾಗಿ ದುಡಿಯುತ್ತಾನೆ. ಇಲ್ಲಿ ದಲಿತ ಸಮುದಾಯದವರು ಪರಂಪರಾಗತ ವಾಗಿ ಅನುಸರಿಸುವಂತೆ ಜೀತಪದ್ಧತಿಯ ಅಸ್ತಿತ್ವವನ್ನು ಇವರ ಮೇಲೆ ಹೇರುತ್ತಿದೆ. ಇದಿಯಮ್ಮಳ

ಹೊಲವನ್ನು ಆಕ್ರಮವಾಗಿ ವಶಪಡಿಸಿಕೊಳ್ಳುವುದು ಆರ್ಥಿಕ ಅಸಮಾನತೆಯ ಸಂಕೇತವಾಗಿದೆ. ಆದರೆ ಚಾಮ-ಗಿರಿಯಪ್ಪ, ಮಾಗಿ, ಕರಿಯ ಮುಂತಾದವರು ಆಸ್ತಿಗಾಗಿ ಹೊಡೆದಾಡುವ ಆರ್ಥಿಕ ಸಮಸ್ಯೆಗಳಿಂದಲೇ ಎಂದು ನಿರೂಪಿಸುತ್ತದೆ.

ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಸಮಾಜದ ಸಂಪತ್ತಿನ ಅಸಮಾನತೆ ಮತ್ತು ಜಾತಿಯ ಸಮಸ್ಯೆಗಳು ಹೇಗೆ ಸಮಾಜದಲ್ಲಿ ಕ್ರಿಯಾಶೀಲವಾಗಿ ಕಾರ್ಯ ನಿರ್ವಹಿಸುತ್ತಿವೆ ಎಂಬುದನ್ನು ಚಿತ್ರಿಸುತ್ತದೆ. ಇಲ್ಲಿ ಭೂಮಿಯ ಹಕ್ಕನ್ನು ಹೊಂದಿರುವ ಆಳುವ ವರ್ಗ ದುಡಿಯುವ ಜನರನ್ನು ತಮ್ಮ ಭೂಮಿಯಲ್ಲಿ ದುಡಿಸಿಕೊಂಡು ಅವರ ಶ್ರಮಮೌಲ್ಯ ಶೋಷಣೆಯನ್ನು ಮಾಡುವುದರ ಮೂಲಕ ಆರ್ಥಿಕ ಶ್ರೇಣೀಕರಣ ವ್ಯವಸ್ಥೆಯನ್ನು ಮುಂದುವರಿಸಿಕೊಂಡು ಹೋಗುತ್ತಿದೆ. ಇದರಿಂದ ಅವರು ಮಾಲೀಕರ ಭೂಮಿಯಲ್ಲಿ ದುಡಿಯುವ ಆಳುಗಳಾಗಿದ್ದಾರೆ. ಈ ವರ್ಗ ಅಸಮಾನತೆಯ ಸಮಾಜದಲ್ಲಿ ಆರ್ಥಿಕ ಸಮಸ್ಯೆಗಳನ್ನು ದುಡಿಯುವ ವರ್ಗ ಎದುರಿಸಿದ ಬಗೆಯನ್ನು ಕಾದಂಬರಿ ಕಟ್ಟಿಕೊಡುತ್ತದೆ. ಇಲ್ಲಿ ಭೂಮಿಯ ಹಕ್ಕನ್ನು ಹೊಂದಿರುವ ಪಾಟೀಲರು, ಒಣಮುಕಳ್ಳಾರು, ಹೊಲೆಮಾದಿಗ ಸಮುದಾಯವನ್ನು, ಸಮಗಾರರನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ದುಡಿಸಿಕೊಳ್ಳುತ್ತಿರುವುದನ್ನು ಕಾಣುತ್ತೇವೆ. ಈ ವರ್ಗದ ದುಡಿಮೆಯ ಪ್ರತಿಫಲ ಅವರು ಪ್ರತಿನಿಧಿಸುತ್ತಿರುವ ಭೂಮಾಲೀಕ ವ್ಯವಸ್ಥೆ, ಈ ಭೂಮಾಲೀಕ ವ್ಯವಸ್ಥೆಯು ತನ್ನ ವರ್ಗ ಹಿತಾಸಕ್ತಿಯನ್ನು ಈಡೇರಿಸಿಕೊಳ್ಳಲು ಅಥವಾ ಅವರು ಅಕ್ರಮವಾಗಿ ಸಂಪಾದಿಸಿರುವ ಹಕ್ಕುಗಳು ಕೆಳವರ್ಗದವರಿಗೆ ಪಲ್ಲಟವಾಗದ ಹಾಗೆ ತಡೆಗಟ್ಟಲು ಸಮಾಜವನ್ನು ತಾರತಮ್ಯದಲ್ಲಿ ಮುಂದುವರಿಸಿಕೊಂಡು ಬರುತ್ತಿರುತ್ತದೆ. ಈ ವಸ್ತುಸ್ಥಿತಿಯನ್ನು ಕಾದಂಬರಿಯಲ್ಲಿ ಗುರುತಿಸಬಹುದು.

ಮಾದೇವನ ಜನನ ಕ್ಷತ್ರಿಯ ವರ್ಗದಲ್ಲಿ ಅವನ ಬೆಳವಣಿಗೆ ದುಡಿಯುವ ವರ್ಗದಲ್ಲಿ ಕಾಣಬಹುದು. ಇಲ್ಲಿ ಊಳಿಗಮಾನ್ಯಶಾಹಿ ವ್ಯವಸ್ಥೆಯ ಮೌಲ್ಯಗಳಾದ ಜಾತಿ ಚೌಕಟ್ಟು ಇಡೀ ಸಮಾಜದ ಆರ್ಥಿಕ ಶೋಷಣೆಯನ್ನು ಮುಂದುವರೆಸಲು ಬಳಸಿರುವ ಆಳುವ ವರ್ಗದ ರಾಜಕೀಯ ಸ್ಥಿತಿಯನ್ನು ಕಾದಂಬರಿಯಲ್ಲಿ ಮಾದೇವನ ಪಾತ್ರದ ಮೂಲಕ ಪರೀಕ್ಷಿಸಬಹುದು. ಮಾದೇವ ದುಡಿಯುವ ವರ್ಗದ ಆರ್ಥಿಕ ಶೋಷಣೆಗಳನ್ನು ಎದುರಿಸಿಕೊಂಡು ವಿದ್ಯಾಭ್ಯಾಸ ಮಾಡಿ, ನೌಕರಿ ಪಡೆದುಕೊಂಡು, ಆರ್ಥಿಕ ಶೋಷಣೆಯ ವಿರುದ್ಧ ಪ್ರತಿಭಟಿಸುತ್ತಾನೆ. ಆದರೆ ಇವನ ಪ್ರತಿಭಟನೆಯನ್ನು ಆಳುವ ವರ್ಗ ಜಾತಿ ಚೌಕಟ್ಟಿನ ಒಳಗೆ ಅವನನ್ನು ಬಂಧಿಸುವಲ್ಲಿ ಯಶಸ್ವಿಯಾಗುತ್ತದೆ. ಆ ಜಾತಿಯ ಶ್ರೇಷ್ಠ-ಕನಿಷ್ಠದ ವಸ್ತುಸ್ಥಿತಿಯನ್ನು ಬದಲಿಸುವ ನಾಯಕನಾಗಿ ತನ್ನ ಮೂಲಸಂಸ್ಕೃತಿಯ ಮೂಲ ಜಾತಿಯಲ್ಲಿ ಗುರುತಿಸಿಕೊಳ್ಳುವುದು ಮತ್ತು ಜಾತಿಶೋಷಣೆ, ದೌರ್ಜನ್ಯ, ಅಸಮಾನತೆಯ ವಿರುದ್ಧ ಹೋರಾಟಕ್ಕೆ ಮುಂದಾಗುವುದು, ಆರ್ಥಿಕ ಶ್ರೇಣೀಕರಣ ವ್ಯವಸ್ಥೆಯ ಬದಲಿಸುವ ದುಡಿಯುವ ವರ್ಗದ ಪ್ರತಿನಿಧಿಯಾಗಿದ್ದಾನೆ.

ಹಾಗೆಯೇ ಖಂಡೋಬಾ, ರಾಮಕ್ಕ, ಸುಮತಿಯವರನ್ನು ಉತ್ಪಾದಕ ವರ್ಗವಾಗಿ ಗುರುತಿಸಬಹುದು. ಮಾದೇವನಲ್ಲಿ ದುಡಿಯುವ ವರ್ಗದ ಪ್ರತಿನಿಧಿಯಾಗಿ ಈ ವ್ಯವಸ್ಥೆಯ ಶೋಷಣೆಯನ್ನು ಪ್ರತಿಭಟಿಸುತ್ತಿರುವ ಆರ್ಥಿಕ ಅಸಮಾನತೆಯನ್ನು ಹೋಗಲಾಡಿಸಿ, ಅದರ ಬೇರುಗಳನ್ನು ನಾಶ ಮಾಡುವ ದುಡಿಯುವ ವರ್ಗದ ಪ್ರಜ್ಞೆ ಕ್ರಿಯಾಶೀಲವಾಗಿದೆ. ಬಡತನ, ಹಸಿವು, ಜಾತಿಶೋಷಣೆ, ಆಳುವ ವರ್ಗ, ಶೋಷಣೆಯ ಪರಿಣಾಮದಿಂದ ಉದ್ಭವಿಸುವಂಥವು. ಈ ವಸ್ತುವಿಷಯಗಳ ವಿರುದ್ಧ ಕಾದಂಬರಿಯ ನಿಲುವನ್ನು ದುಡಿಯುವ ವರ್ಗದ ಬಿಡುಗಡೆಯ ನೆಲೆಯಾಗಿ ಕಾದಂಬರಿ ಗುರುತಿಸಿದೆ.

ಹೀಗೆ ಶಿವರಾಮ ಕಾರಂತರ 'ಚೋಮನ ದುಡಿ' ಮತ್ತು ನಿರಂಜನರ 'ಚಿರಸ್ಮರಣೆ' ಕಾದಂಬರಿಗಳು ಸಮಾಜದ ಆರ್ಥಿಕ ವೈರುಧ್ಯತೆಗಳನ್ನು ಗುರುತಿಸುತ್ತಲೇ ದುಡಿಯುವ ವರ್ಗದ ಜನರು ಭೂಮಿಯ ಹಕ್ಕನ್ನು ಹೊಂದುವ ಆಲೋಚನೆಯನ್ನು ಕಾದಂಬರಿಯಲ್ಲಿ ಕಟ್ಟಿಕೊಟ್ಟಿದೆ. ಉಳಿದಂತೆ ದಲಿತ-ಬಂಡಾಯದ ಬರಹಗಳು ದುಡಿಯುವ ವರ್ಗವು ಎದುರಿಸುತ್ತಿರುವ ಆರ್ಥಿಕ ಸಮಸ್ಯೆಗಳಾದ ಹಸಿವು, ಬಡತನ, ದೌರ್ಜನ್ಯ, ಅಸ್ಪೃಶ್ಯತೆ, ಶೋಷಣೆ, ಅಪಮಾನ ಮುಂತಾದ ಆಳುವ ವರ್ಗವು ಹುಟ್ಟಿಹಾಕಿರುವ ಆರ್ಥಿಕ ಶೋಷಣೆಗಳನ್ನು ವಿವರಿಸುತ್ತಲೇ ಅದರ ವಿರುದ್ಧ ದುಡಿಯುವ ವರ್ಗವು ಜಾಗೃತಿಯಾಗುತ್ತಿರುವುದು ಅಥವಾ ಶೋಷಕ ವ್ಯವಸ್ಥೆಯ ವಿರುದ್ಧ ಸಂಘರ್ಷಕ್ಕೆ ಇಳಿಯುವ ವರ್ಗ ಜಾಗೃತಿಯನ್ನು ಕಟ್ಟಿಕೊಡುತ್ತಿವೆ. ಆದರೆ ನವೋದಯದ ಮತ್ತು ನವ್ಯ ಸಾಹಿತ್ಯ ಘಟ್ಟದ ಅನೇಕ ಕಾದಂಬರಿಗಳು ವ್ಯಕ್ತಿನಿಷ್ಠ, ಸಮುದಾಯನಿಷ್ಠ ಬರಹಗಳನ್ನು ಮಾಡಿವೆ. ಇದರಿಂದ ದುಡಿಯುವ ವರ್ಗದ ಅಸಲಿ ಸಮಸ್ಯೆಗಳನ್ನು ಮುಚ್ಚಿಟ್ಟು ನಿರೂಪಿಸುವ ಆಲೋಚನೆ ಇದರ ಹಿಂದೆ ವ್ಯಕ್ತವಾಗಿವೆ.

ಒಟ್ಟಾರೆ ಊಳಿಗಮಾನ್ಯಶಾಹಿ ವ್ಯವಸ್ಥೆಯ ಶ್ರಮವಿಭಜನೆಯ ಮೂಲಕ ಬೆಳವಣಿಗೆಯಾದ ಆರ್ಥಿಕ ಸಮಸ್ಯೆಗಳನ್ನು ಅಭಿವೃದ್ಧಿಗೊಳಿಸಿರುವ ನವವಸಾಹತುಶಾಹಿ ವ್ಯವಸ್ಥೆಯು ಜಾತಿಸಮಸ್ಯೆ, ಅಸ್ಪೃಶ್ಯತೆಯ ಸಮಸ್ಯೆಯನ್ನು ಮತ್ತಷ್ಟು ಹರಡಿ ಸಮಾಜದಲ್ಲಿನ ವರ್ಗಜಾಗೃತಿಯ ಬೆಳವಣಿಗೆಯನ್ನು ನಿಯಂತ್ರಿಸುವ ಆಳುವ ವರ್ಗದ ರಾಜಕೀಯ ತಂತ್ರ ಇಲ್ಲಿ ಅಡಗಿದೆ. ವರ್ಗಶೋಷಣೆಯ ಸಮಾಜದ ಚಿತ್ರಣ ತಂದರೂ ಅದರ ವಿರುದ್ಧ ಧ್ವನಿಯನ್ನು ಇಲ್ಲಿ ಮುಚ್ಚಿಡಲಾಗಿದೆ. ಆದ್ದರಿಂದ ಈ ಸಮಸ್ಯೆಗಳು ಆರ್ಥಿಕವಾದ ವಸ್ತುಸ್ಥಿತಿಯ ಮೂಲಕ ಸಮಾಜವನ್ನು ನೋಡುವ ದೃಷ್ಟಿಕೋನ ವನ್ನು ಬೆಳೆಸುತ್ತಿವೆ. ಅಂದರೆ ಉತ್ಪಾದನಾ ಶಕ್ತಿಯಾದ ದುಡಿಯುವ ವರ್ಗವು ಆರ್ಥಿಕವಾಗಿ ಶೋಷಣೆಯನ್ನು ಎದುರಿಸುತ್ತಿರುವಾಗ ಅದರ ವಿರುದ್ಧ ಪ್ರತಿಭಟನೆಯನ್ನು ಎದುರಿಸಬೇಕಾಗಿದೆ. ಆದರೆ ಸಾಹಿತ್ಯ ಕೃತಿಗಳು ಈ ಬಗೆಯ ಪ್ರತಿಭಟನೆಯನ್ನು ಆರ್ಥಿಕವಾದ ಸಮಸ್ಯೆಗಳಿಗೆ ಮುಖಾಮುಖಿ ಮಾಡುವುದರ ಮೂಲಕ ದುಡಿಯುವ ವರ್ಗದ ಆರ್ಥಿಕ ಸ್ಥಿತಿಗತಿಗಳನ್ನು ಗುರುತಿಸಿವೆ.

## ೩.೨. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಸಾಮಾಜಿಕ ಸ್ಥಿತಿಗತಿ

ಕಾದಂಬರಿಗಳಲ್ಲಿ ಸಾಮಾಜಿಕ ಸ್ಥಿತಿಗತಿಯನ್ನು ಆರ್ಥಿಕ ಸ್ಥಿತಿಗತಿಗಳ ಮುಂದುವರೆದ ಭಾಗವಾಗಿ ಗ್ರಹಿಸಬೇಕಾಗಿದೆ. ಯಾಕೆಂದರೆ ಅರ್ಥಿಕ ಶ್ರೇಣೀಕರಣವು ಆರ್ಥಿಕ ಅಸಮಾನತೆ, ಆರ್ಥಿಕ ಸಮಸ್ಯೆಗಳು, ಸಾಮಾಜಿಕ ತಾರತಮ್ಯಕ್ಕೆ ಮೂಲಕಾರಣವಾಗಿರುವುದರಿಂದ ಆರ್ಥಿಕ ಸ್ಥಿತಿಯನ್ನು ಹೊರತುಪಡಿಸಿ ಸಾಮಾಜಿಕ ಸಮಸ್ಯೆಗಳನ್ನು ಕುರಿತು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಹಾಗಾಗಿ ಸಾಮಾಜಿಕ ವ್ಯವಸ್ಥೆಯ ಅಸಮಾನತೆ, ಅನ್ಯಾಯ, ಶೋಷಣೆಗಳನ್ನು ಒಳಗೊಂಡ ವ್ಯವಸ್ಥೆಯಾಗಿರುವುದನ್ನು ಕಾಣುತ್ತೇವೆ. ಈ ಅಸಮಾನತೆಗಳ ವ್ಯವಸ್ಥೆಯಲ್ಲಿ ಸಂಪತ್ತಿನ ಒಡೆತನ ಹೊಂದಿರುವ ವರ್ಗ ಶ್ರೀಮಂತ ಶ್ರೀಮಂತವರ್ಗವಾಗಿ, ಆಳುವ ವರ್ಗವಾಗಿ ಶೋಷಕವರ್ಗವಾಗಿದೆ. ಆದರೆ ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾದ ವರ್ಗವು ದುಡಿಯುವ ವರ್ಗವಾಗಿ, ಶೋಷಿತವರ್ಗವಾಗಿ ನಿರ್ಮಾಣವಾಗಿರುವುದನ್ನು ಕಾಣಬಹುದು. ಈ ಅಳುವ ವರ್ಗ ಮತ್ತು ದುಡಿಯುವ ವರ್ಗಗಳ ನಡುವೆ ಮಾಲೀಕ ಮತ್ತು ಆಳುಗಳ ಸಂಬಂಧ, ಶೋಷಕ ಶೋಷಿತ ಸಂಬಂಧಗಳು ಏರ್ಪಟ್ಟಿವೆ. ಈ ವರ್ಗಗಳ ನಡುವೆ ಹೊಂದಾಣಿಕೆ ಇರುವುದಿಲ್ಲ. ಬದಲಿಗೆ ಇಲ್ಲಿ ಸಂಘರ್ಷ, ಹೋರಾಟಗಳು ತುಂಬಿರುತ್ತವೆ. ತಮ್ಮ ಹಕ್ಕುಗಳನ್ನು ಕಳೆದುಕೊಂಡಿರುವ ದುಡಿಯುವ ವರ್ಗ ಶ್ರೀಮಂತವರ್ಗದ ಒಡೆತನ ಹೊಂದಿರುವ ಕ್ಷೇತ್ರದಲ್ಲಿ ದುಡಿಯುವ ಶ್ರಮಜೀವಿಗಳು. ಆದರೆ ಇವರು ದುಡಿದ ಶ್ರಮವನ್ನು ಅಕ್ರಮವಾಗಿ ವಂಚಿಸಿ ಅವರ ದುಡಿಮೆಗೆ ತಕ್ಕ ಪ್ರತಿಫಲ ಕೊಡದೆ ಅವರನ್ನು ಶ್ರಮಮೌಲ್ಯ ಶೋಷಣೆಗೆ ಒಳಪಡಿಸಿ ತಮ್ಮ ಅಧೀನದಲ್ಲಿ ಇಟ್ಟುಕೊಳ್ಳುವ ಆಳುವ ವರ್ಗದ ವ್ಯವಸ್ಥೆಯು ಮುಂದಾಗಿರುತ್ತದೆ.

ಈ ವರ್ಗಶೋಷಣೆಯಿಂದ ದುಡಿಯುವ ಶ್ರಮಜೀವಿಗಳು ಅನೇಕ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಒಳಗಾಗಿದ್ದಾರೆ. ಮೂಲಭೂತವಾಗಿ ಹಸಿವು, ಬಡತನದ್ದಾರೆ, ಅವಮಾನ, ಅತ್ಯಾಚಾರ, ದೌರ್ಜನ್ಯ, ದಬ್ಬಾಳಿಕೆ, ಶೋಷಣೆಗಳನ್ನು ಕಾಣುವುದು, ಈ ಸಮಸ್ಯೆಗಳು ಆಳುವ ವರ್ಗದ ಶೋಷಣೆಯ ಪರಿಣಾಮದಿಂದ ಹುಟ್ಟಿರುವಂತಹ ಸಾಮಾಜಿಕ ಸಮಸ್ಯೆಗಳಾಗಿವೆ. ಈ ಮೇಲಿನ ಎಲ್ಲಾ ಸಮಸ್ಯೆಗಳು ಹುಟ್ಟಿದ್ದು ಊಳಿಗಮಾನ್ಯಶಾಹಿ ಮತ್ತು ಬಂಡವಾಳಶಾಹಿ ವ್ಯವಸ್ಥೆಯ ಗರ್ಭದಿಂದಲೇ ಹೊರತು ದುಡಿಯುವ ಜನರ ಸಾಮಾಜಿಕ ಹಿತಾಸಕ್ತಿಯಿಂದ ಹುಟ್ಟಿದವುಗಳಲ್ಲ. ಹೀಗೆ ದುಡಿಯುವ ವರ್ಗವನ್ನು ಶೋಷಣೆ ಮಾಡುತ್ತಿರುವ ವ್ಯವಸ್ಥೆಯ ವಿರುದ್ಧ ಅಸಹನೆ, ಆಕ್ರೋಶ, ಪ್ರತಿಭಟನೆ, ಹೋರಾಟ ಮತ್ತು ಚಳುವಳಿಗಳು ನಡೆದಿವೆ, ನಡೆಯುತ್ತಿವೆ. ಸಮಾಜದಲ್ಲಿ ಎಲ್ಲಿಯವರೆಗೆ ಅಸಮಾನತೆ, ಶೋಷಣೆ ಹಾಗೂ ಅನ್ಯಾಯಗಳು ಇರುತ್ತವೆಯೋ ಅಲ್ಲಿಯವರೆಗೆ ಹೋರಾಟ ಮತ್ತು ಚಳುವಳಿಗಳು ನಡೆಯುತ್ತಿರುತ್ತವೆ. ಹೀಗೆ ಈ ವರ್ಗಹೋರಾಟವು ತನ್ನ ಹಿತಾಸಕ್ತಿಗೆ ಧಕ್ಕೆ ತರುತ್ತದೆ ಎನ್ನುವ ಆಳುವ ವರ್ಗದ ಆಲೋಚನಾ ಕ್ರಮದಿಂದ ಸಮಾಜದಲ್ಲಿ ಹೀಗಾಗಲೇ ಇರುವ ಅನೇಕ ಸಮಸ್ಯೆಗಳಾದ ವರ್ಗತಾರತಮ್ಯ, ಜಾತೀಯತೆ, ಅಸ್ಪೃಶ್ಯತೆ, ಬಡತನ, ನಿರುದ್ಯೋಗ, ಲಿಂಗತಾರತಮ್ಯ, ಅತ್ಯಾಚಾರ, ಕೋಮುವಾದ, ಭ್ರಷ್ಟಾಚಾರ ಮುಂತಾದ

ಸಾಮಾಜಿಕ ಸಮಸ್ಯೆಗಳನ್ನು ಮತ್ತಷ್ಟು ಅಭಿವೃದ್ಧಿಗೊಳಿಸಿ ತನ್ನ ವರ್ಗದ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ನಿತ್ಯ ದುಡಿಯುತ್ತಿರುತ್ತದೆ. ಇವರು ಈ ಶೋಷಣೆಯ ಮೌಲ್ಯಗಳನ್ನು ಹರಡುವುದನ್ನು ಬಿಟ್ಟರೆ ದೈಹಿಕವಾಗಿ ದುಡಿಮೆ ಮಾಡುವುದಿಲ್ಲ. ಇವರು ದುಡಿಯು ವರ್ಗದ ಮೇಲೆ ನಿಂತಿರುವ ವರ್ಗ.

ಈ ವರ್ಗವು ಶೋಷಣೆಗೆ ಬೇಕಾಗಿರುವ ಬೌದ್ಧಿಕ ಅಲೋಚನೆಗಳನ್ನು ಹರಡಿದೆ ಇದು ನಶಿಸಲು ಸಾಧ್ಯವಿಲ್ಲವೇನೋ ಎನ್ನುವಷ್ಟರಮಟ್ಟಿಗೆ ಅದು ಬೇರೂರಿದೆ. ಈ "ಆಳುವ ವರ್ಗದ ಅಭಿಪ್ರಾಯ, ತೀರ್ಮಾನ, ನಿಲುವು, ದೃಷ್ಟಿಕೋನ ಮುಂತಾದುವನ್ನು ಸಮಾಜ ನಮ್ಮದೆಂದೇ ತಿಳಿದಿದೆ. ನಮ್ಮದೆಂದು ತಿಳಿದು ಅದರಲ್ಲದ ದೃಷ್ಟಿಕೋನಗಳನ್ನು ನಂಬಲಾಗಿದೆ. ಇಂತಹ ನಂಬಿಕೆ ಮತ್ತು ಇಂತಹ ಸತ್ಯಗಳು ಅವು ಸುಳ್ಳು ಎಂದು ಸೂಚಿಸುವುದು ತೋರಿಸುವುದು. ಸಾಹಿತ್ಯದ ಸಾಮಾಜಿಕ ಜವಾಬ್ದಾರಿಯ ಮೊದಲ ಮೆಟ್ಟಲು"[೯] ಎಂದು ಡಾ. ಬಿ.ಎಂ. ಪುಟ್ಟಯ್ಯ ಅವರ ಅಭಿಪ್ರಾಯ ಸತ್ಯವಾದುದು. ಈ ರೀತಿಯಾಗಿ ಅಳುವ ವರ್ಗವು ಶೋಷಣೆಯ ಮೌಲ್ಯಗಳನ್ನು ಅಭಿವೃದ್ಧಿಪಡಿಸಿ ಸಾಮಾಜಿಕ ಪ್ರಕ್ರಿಯೆಯನ್ನು ದಿಕ್ಕು ತಪ್ಪಿಸುತ್ತಿವೆ. ಜೊತೆಗೆ ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಯನ್ನು ಗಟ್ಟಿಗೊಳಿಸುತ್ತಿರುವುದನ್ನು ಕಾಣಬಹುದು. ಈ ವರ್ಗದ ರಾಜಕೀಯವು ಸಾಮಾಜಿಕ ಸಮಸ್ಯೆಗೆ ಮೂಲ ಕಾರಣವಾಗಿದೆ. ಆದರೆ ಸಾಹಿತ್ಯದ ಬರಹಗಳು ಈ ವಸ್ತುವಿಷಯಗಳನ್ನು ಚಿತ್ರಿಸಿದರೂ ಅದು ದುಡಿಯುವ ವರ್ಗದ ಪ್ರಜ್ಞೆಯ ಭಾಗವಾಗಿ ಗ್ರಹಿಸದೆ ಇರುವುದನ್ನು ಅನೇಕ ಕಾದಂಬರಿಗಳಲ್ಲಿ ಕಾಣಬಹುದು. ಕೆ.ವಿ.ನಾರಾಯಣ ಅವರು "ವಸ್ತುಸಮಸ್ಯೆಗಳು ಸಾಮಾಜಿಕವಾದರೂ ಅದನ್ನು ಗ್ರಹಿಸುವ ಬಗೆ ಸಾಮಾಜಿಕವಾಗಿರುತ್ತದೆ ಎಂದೇನಲ್ಲ"[೧೦] ಎನ್ನುವ ಮಾತುಗಳು ವರ್ಗವೈರುಧ್ಯತೆಯ ಸಂಕೇತವಾಗಿ ಬಳಸಿದ್ದಾರೆ. ಇದನ್ನು ಮಾರ್ಕ್ಸ್ ಅವರು "ನಮ್ಮ ಸಾಮಾಜಿಕ ಅಸ್ತಿತ್ವವು ನಮ್ಮ ತಿಳುವಳಿಕೆಯನ್ನು ನಿರ್ಧರಿಸುತ್ತದೆ"[೧೧] ಎಂದು ಹೇಳಿದ್ದಾರೆ. ಹಾಗೆ ಸಮಾಜದ ಸಾಮಾಜಿಕ ಸ್ಥಿತಿಗತಿಯನ್ನು ಆರ್ಥಿಕ ಅಸಮಾನತೆಯ ಭಾಗವಾಗಿ ಗ್ರಹಿಸುವ ಅಗತ್ಯ ಇದೆ.

ಶಿವರಾಮ ಕಾರಂತರ 'ಚೋಮನ ದುಡಿ'ಯಲ್ಲಿ ಚೋಮನ ಎದುರಿಸುತ್ತಿರುವ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಸಂಕಪ್ಪಯ್ಯ ಪ್ರತಿನಿಧಿಸುವ ಊಳಿಗಮಾನಶಾಹಿ ವ್ಯವಸ್ಥೆಯೇ ಕಾರಣವಾಗಿದೆ. ಭೂಮಿಯ ಅಸಮಾನ ಹಂಚಿಕೆ, ಜೀತಪದ್ಧತಿ, ಹಸಿವು, ಬಡತನ, ಸಾಲದ ಸಮಸ್ಯೆ, ಜಾತಿಯ ಶೋಷಣೆ, ಲೈಂಗಿಕ ಶೋಷಣೆ, ಮತಾಂತರದ ಪ್ರಶ್ನೆಗಳು ಆಳುವ ವರ್ಗದ ಶೋಷಣೆಯ ಪರಿಣಾಮದಿಂದ ಉದ್ಭವವಾಗಿವೆ. ಈ ವಸ್ತುವಿಷಯಗಳನ್ನು ಕಾದಂಬರಿ ಯಲ್ಲಿ ಬಿಡಿಬಿಡಿಯಾಗಿ ಗುರುತಿಸಬಹುದು.

ಚೋಮನ ಆರ್ಥಿಕ ಶೋಷಣೆಗೆ ಕಾರಣ ಭೂಮಿಯ ಒಡತನವನ್ನು ಕಳೆದುಕೊಂಡಿರುವುದು. ಭೂಮಿಯ ಹಕ್ಕು ಮೇಲ್ವರ್ಗದ ಸಂಕಪ್ಪಯ್ಯನು ಹೊಂದಿರುವುದರಿಂದ ಅವರ ಭೂಮಿಯಲ್ಲಿ

ಜೀತಗಾರರಾಗಿ ದುಡಿಯುವಂತಹ ಸ್ಥಿತಿ ನಿರ್ಮಾಣವಾಗಿದೆ. ಇಲ್ಲಿ ಭೂಮಿಯ ಅಸಮಾನತೆ ಮತ್ತು 'ಜೀತಗಾರಿಕೆ' ಸಾಮಾಜಿಕ ಸಮಸ್ಯೆಯಾಗಿದೆ. ಆದ್ದರಿಂದ ಇಲ್ಲಿ ಈ ಕಾದಂಬರಿ ಸಾಮಾಜಿಕ ಸಮಸ್ಯೆಯನ್ನೇ ಕುರಿತು ನಿರೂಪಿಸಿದೆ ಎಂದು ಹೇಳಬಹುದು. ಈ ಅಸಮಾನತೆ, ಉಳಿದ ಎಲ್ಲಾ ಸಮಸ್ಯೆಗಳಿಗೆ ಕಾರಣವಾಗಿದೆ. ಈ ಆಳುವ ವರ್ಗದ ಆರ್ಥಿಕ ಶೋಷಣೆಯನ್ನು ಚಿತ್ರಿಸುವ ಕಾದಂಬರಿಯ ಮುಂದೆ ಇಟ್ಟ ಮುಖ್ಯವಾದ ವಸ್ತುವಿಷಯ ದುಡಿಯುವ ವರ್ಗದ ಭೂಮಿಯ ಹಕ್ಕಿನ ಒಡೆತನದ ಪ್ರಶ್ನೆಯನ್ನು ಕುರಿತು ಅಭಿವ್ಯಕ್ತಿಸುತ್ತದೆ. ಆದರೆ ಇದನ್ನು ನಿರೂಪಿಸುವಾಗ ಮಾತ್ರ ದುಡಿಯುವ ವರ್ಗದ ಪ್ರಜ್ಞೆಯನ್ನು ಮರೆತಿದೆ. ಚೋಮನು ಗೇಣಿಗಾಗಿ ಭೂಮಿ ಉಳುಮೆ ಮಾಡಲು ಭೂಮಿಯನ್ನು ಕೇಳುತ್ತಾನೆಯೇ ಹೊರತು ತನ್ನ ಹಕ್ಕಿನ ಭಾಗವಾಗಿ ಕೇಳುವುದಿಲ್ಲ. ಜೊತೆಗೆ ಆಳುವ ವರ್ಗ ಜಾತಿಯ ಸಮಸ್ಯೆಯನ್ನು ಮುಂದೆ ತಂದು ಅವನ ಮಗ ಚನಿಯನ ಸಾವಿಗೆ ಕಾರಣವಾಗುತ್ತದೆ ಮತ್ತು ಬೆಳ್ಳಿಯ ಮೇಲಿನ ದೌರ್ಜನ್ಯಕ್ಕೆ ಜಾತಿ ಸಮಸ್ಯೆಯೇ ಮುಖ್ಯವಾಗುತ್ತದೆ. ಇಲ್ಲಿ ಜಾತಿಯ ಪ್ರಶ್ನೆಯನ್ನು ಮುಖ್ಯವಾಗಿ ಪರಿಗಣಿಸಿ ದುಡಿಯುವ ವರ್ಗದ ಶ್ರಮಜೀವಿಗಳನ್ನು ಶೋಷಣೆ ಮಾಡುವುದರ ಮೂಲಕ ವರ್ಗಶೋಷಣೆಯ ವಿರುದ್ಧದ ಪ್ರತಿಭಟನೆಯನ್ನು ಗೌಣಗೊಳಿಸಿದೆ. ಸಮಾಜದಲ್ಲಿ ದುಡಿಯುವ ವರ್ಗಶೋಷಣೆಗೆ ಒಳಗಾಗಿದೆ ಎಂದಾಗ ಶೋಷಣೆ ಮಾಡುವ ವರ್ಗ ಇರಲೇಬೇಕು. ಈ ಶೋಷಣೆಯ ವಿರುದ್ಧ ಹೋರಾಟವು ಸಹಜವಾಗಿ ಇರುತ್ತದೆ. ಆದರೆ ಕಾದಂಬರಿಯಲ್ಲಿ ಸಾಮಾಜಿಕ ಸಮಸ್ಯೆಗಳಾದ ಅನ್ನ, ಹಸಿವು, ಬಡತನ, ಅನ್ಯಾಯ, ಶೋಷಣೆಯಂತಹ ಸಮಸ್ಯೆಗಳನ್ನು ಗುರುತಿಸುವ ಕಾದಂಬರಿಯು ಅದರ ವಿರುದ್ಧದ ಪ್ರತಿಧ್ವನಿಯನ್ನು ಚಿತ್ರಿಸುವುದಿಲ್ಲ. ಚೋಮನ ವೈಯಕ್ತಿಕ ಸಮಸ್ಯೆಗಳನ್ನು ಸಾಮಾಜಿಕ ಸಮಸ್ಯೆಗಳಾಗಿ ಪರಿವರ್ತಿಸಲು ಹೊರಟಿರುವ ಕಾದಂಬರಿಯ ಪ್ರಯತ್ನದಲ್ಲಿ ಸೋಲನ್ನು ಅನುಭವಿಸಿದೆ. ಯಾಕೆಂದರೆ ಚೋಮನು ದುಡಿಯುವ ವರ್ಗದ ಪ್ರತಿನಿಧಿಯಾದರೂ ಅವನ ಮೌನ, ಸ್ವಭಾವಗಳು, ಅವನ ಆಕಾಂಕ್ಷೆಗಳು ಆಳುವ ವರ್ಗದ ಸ್ವಭಾವದಿಂದ ತುಂಬಿವೆ. ಇದರಿಂದ ಚೋಮನ ಆಶಯಗಳು ಕೂಡ ಚೋಮನ ಮೂಲಕ ಹೇಳಿಸಿರುವ ನಿರೂಪಣೆಯಾಗಿದೆ. ಈ ರೀತಿಯಾದ ಆಳುವ ವರ್ಗರಾಜಕೀಯ ತಂತ್ರವು ಈ ಕಾದಂಬರಿಯಲ್ಲಿ ಚೋಮನನ್ನು ತನ್ನ ವರ್ಗದ ಪ್ರತಿನಿಧಿಯಾಗಿ ಹೇಳಿಸಿರುವ ವರ್ಗಸ್ವಭಾವಗಳನ್ನು ಗುರುತಿಸಬಹುದು.

ರಾವ್‌ಬಹದ್ದೂರ್ ಅವರ 'ಗ್ರಾಮಾಯಣ' ಕಾದಂಬರಿಯು ಶುರುವಾಗುವುದೇ ಸಾಮಾಜಿಕ ಅಸಮಾನತೆಯ ಸಮಾಜದಲ್ಲಿ. ಸಮಾಜದಲ್ಲಿ ಆಳುವವರು ಮತ್ತು ಆಳಿಸಿಕೊಳ್ಳುವ ವರ್ಗದ ನಡುವೆ ಇರುವ ವರ್ಗವೈರುಧ್ಯತೆಯನ್ನು ಮುಚ್ಚಿಡುವ ಸಲುವಾಗಿ ತನ್ನ ವರ್ಗದ ನಡುವೆ ಆಂತರಿಕ ಸಂಘರ್ಷವನ್ನು ಆಳುವ ವರ್ಗ ಮಾಡುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಇಲ್ಲಿ ದುಡಿಯುವ ವರ್ಗ ಮತ್ತು ದುಡಿಸಿಕೊಳ್ಳುವ ವರ್ಗಗಳ ನಡುವೆ ಉತ್ಪಾದನಾ ಸಂಬಂಧ ಇದೆ. ದುಡಿಯುವ ವರ್ಗದ ಶ್ರಮದ ಪ್ರತಿಫಲ ವಾಡೆ, ಮಠ, ಹೊಲಗಳು. ಆದರೆ ಇವರಿಗೆ

ಇವುಗಳ ಮೇಲೆ ಅಧಿಕಾರ ಇಲ್ಲ. ಯಾಕೆಂದರೆ ಆಳುವ ವರ್ಗ ಇವರ ಹಕ್ಕುಗಳನ್ನು ವಂಚಿಸಿ ಅವರನ್ನು ಕೂಲಿ ಕಾರ್ಮಿಕರಾಗಿ ದುಡಿಸಿಕೊಳ್ಳುತ್ತಿದೆ. ಈ ವರ್ಗತಾರತಮ್ಯವನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಆದರೆ ಕಾದಂಬರಿಯಲ್ಲಿ ಈ ಉತ್ಪಾದನಾ ಸಂಬಂಧಗಳ ನಡುವೆ ಇರುವ ವರ್ಗಪ್ರಜ್ಞೆಯನ್ನು ತರುವುದಿಲ್ಲ. ಅಂದರೆ ಕಾದಂಬರಿಯಲ್ಲಿ ವರ್ಗ ಖಚಿತತೆ ಚಿತ್ರಿಸದೇ ಇರುವುದು ಆಳುವ ವರ್ಗದ ಲಕ್ಷಣಕ್ಕೆ ಉದಾಹರಣೆಯಾಗಿದೆ. ಆಳುವವರು-ಆಳಿಸಿಕೊಳ್ಳುವವರು ಭೂಮಾಲೀಕರ ಭೂಹೀನರು(ಆಳುಗಳು) ಸಂಬಂಧ ಇದೆ. ಈ ಶೋಷಣೆ ಮತ್ತು ಶೋಷಕರ ನಡುವಿನ ಸಂಬಂಧಗಳು ಶೋಷಣೆಯ ವಿರುದ್ಧದ ಧ್ವನಿಯಾಗಿ ಮೂಡಿಬಂದಿಲ್ಲ. ಮೇಲುವರ್ಗವು ತನ್ನ ಹಿತಾಸಕ್ತಿಗಾಗಿ ಈ ಕೆಳವರ್ಗದವರು ಬಳಸಿಕೊಂಡಿದೆ. ರಾಣೋಜಿರಾಯನ ಮರಣದ ನಂತರ ಅವನ ಇಬ್ಬರ ಹೆಂಡಂದಿರಲ್ಲಿ ಆಸ್ತಿಯ ಒಡೆತನದ ಬಗ್ಗೆ ಕಲಹ ಆರಂಭವಾಗುತ್ತದೆ. ರಾಣೋಜಿರಾಯ ತನ್ನ ಆಸ್ತಿಗೆ ಒಡೆಯರಾಗಬೇಕು ಎಂಬ ಹಂಬಲವೇ ಆತನನ್ನು ಎರಡನೇ ಮದುವೆಗೆ ಒತ್ತಾಯಿಸುತ್ತದೆ. ಆದರೆ ಇವನ ಸಾವಿನ ನಂತರ ಭೂಮಿಯ ಒಡೆತನದ ನಡುವಿನ ಪ್ರಶ್ನೆಯು ಸಾಮಾಜಿಕ ಸಂಘರ್ಷಕ್ಕೆ ಕಾರಣವಾಗುತ್ತದೆ. ಇಲ್ಲಿ ವರ್ಗ ಖಚಿತತೆ ಇಲ್ಲವಾದರೂ ಜನರ ವರ್ತನೆ ಸ್ವಭಾವಗಳು ಸಾಮಾಜಿಕ ಅಸಮಾನತೆಯ ಸಮಸ್ಯೆಯನ್ನು ಹೇಳುತ್ತವೆ. ಬಡತನ, ಹಸಿವು, ಲೈಂಗಿಕ ಶೋಷಣೆ, ಆಸ್ತಿಯ ಕಲಹವು ಸಾಮಾಜಿಕ ಸನ್ನಿವೇಶವಾಗಿ ನಿರೂಪಣೆಗೊಂಡಿದೆ. ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಊಳಿಗಮಾನ್ಯಶಾಹಿ ವ್ಯವಸ್ಥೆಯ ವರ್ಗಸಂಬಂಧಗಳ ಸಾಮಾಜಿಕ ಪರಿಸ್ಥಿತಿಯನ್ನು ನಿರೂಪಣೆಯಲ್ಲಿ ತಂದಿದೆ. ಭೂಮಾಲೀಕ ವರ್ಗವು ದುಡಿಯುವ ವರ್ಗದವರನ್ನು ಶೋಷಣೆ ಮಾಡುವುದನ್ನು ಇಲ್ಲಿ ಚಿತ್ರಿಸಲಾಗಿದೆ.

ಕಾದಂಬರಿಯಲ್ಲಿ ಬರುವ ಹೊಲೆಯ ಸಮುದಾಯವನ್ನು ಮುಗ್ಧರು, ಅನಕ್ಷರಸ್ಥರಾಗಿ ಶ್ರಮಜೀವಿಗಳಾಗಿ, ಶೋಷಿತರಾಗಿ, ಶೋಷಣೆಯ ಅರಿವು ಇಲ್ಲದವರಾಗಿ ಚಿತ್ರಿಸಲಾಗಿದೆ. ಹಳೆ ಪೈಕದ ಸೇಸನಾಯ್ಕನ ಮನೆಗೆ ಹೊಲೆಯರವನಾದ ನಾಯಿಗುತ್ತಿ ಹೋದಾಗ, ಸೇಸನಾಯ್ಕ ತನ್ನ ಹಿತ್ತಲಿನ ಕೊಟ್ಟಿಗೆಯಲ್ಲಿ ಬಾಳೆಯೆಲೆಯಲ್ಲಿ ಗುತ್ತಿಗೆ ಉಣಬಡಿಸುತ್ತಾನೆ. ಅದೇ ರೀತಿ ಗುತ್ತಿ ಒಮ್ಮೆ ಐತನ ಗುಡಿಸಲಿನಲ್ಲಿ ಮಲಗಬೇಕಾಗಿ ಬಂದಾಗ ಪೀಂಚಲು ತನ್ನ ಗಂಡನನ್ನು ಕುರಿತು "ಇವತ್ತೊಂದು ದಿವಸ ಗುತ್ತಿಯ ಸಮೀಪದಲ್ಲಿ ದೂರ ಮಲಗಿದರಾಯ್ತು" ಎನ್ನುತ್ತಾಳೆ. ಅದಕ್ಕೆ ಐತ "ಥೂ ಥೂ ಥೂ! ನಾನು ಒಲ್ಲೆ, ಹೊಲೆಯನ ಬಳಿ ಮಲಗುವುದೆ"[೨] ಎಂದು ಅಸಹ್ಯ ಪಡುತ್ತಾನೆ! ಇಲ್ಲಿ ಅಸ್ಪೃಶ್ಯತೆಯ ಆಚರಣೆಗಳು ಕೆಳವರ್ಗದ ನಡುವೆ ನಡೆಯುತ್ತಿರುವುದನ್ನು ಗುರುತಿಸಬಹುದು.

ಹೊಲೆಯವನಾದ ನಾಯಿಗುತ್ತಿಯು ಪೋಲೀಸರಿಂದ ತಪ್ಪಿಸಿಕೊಂಡು ಹೋಗುತ್ತಿರುವಾಗ ತನ್ನ ಸ್ಥಿತಿಯನ್ನು ಕುರಿತು ಯೋಚಿಸುತ್ತಾನೆ. "ನಾನು ಹೊಲೆಯರವನಲ್ಲದೆ ಬ್ಯಾರೆ ಜಾತಿಗೆ ಸೇರಿದವನಾಗಿದ್ದರೆ ಹೀಗಾಗುತ್ತಿತ್ತೆ ಎಂದುಕೊಳ್ಳುತ್ತಾನೆ. ಮುಂದುವರೆದು ಕಡೇ ಪಕ್ಷ ತಾನು

ಕಿಲಸ್ತರವನೋ ಸಾಬರ ಜಾತಿಯವನೋ ಅಗಿದ್ದರೂ ತನಗೆ ಈ ಸ್ಥಿತಿ ಬರುತ್ತಿರಲಿಲ್ಲ ಎಂದುಕೊಳ್ಳುತ್ತಾನೆ. ಆದರೆ ಮರುಕ್ಷಣವೇ ಥೂ ಥೂ ಥೂ ಎಂದು ತನ್ನ ತಲೆಯಲ್ಲಿ ಸುಳಿದಿದ್ದ ಸಾಬರ ಕಿಲಸ್ತರ ಜಾತಿಯ ಯೋಚನೆಗಳನ್ನು ನಿರಾಕರಿಸುತ್ತಾನೆ."[೧೩] ಇಲ್ಲಿ ಜಾತಿಯ ಶೋಷಣೆಯ ವಿರುದ್ಧ ಅಸಹಾಯಕತೆಯನ್ನು ವ್ಯಕ್ತಪಡಿಸುವುದು ಮತ್ತು ಸಾಬರ ಕಿಲಸ್ತರ ಧರ್ಮವನ್ನು ಕೀಳಾಗಿ ಪರಿಗಣಿಸುವ ಬಗೆಯನ್ನು ಕಾದಂಬರಿಯು ಗುತ್ತಿಯ ಮೂಲಕ ನಿರೂಪಿಸುತ್ತಿದೆ. ಅಂದರೆ ಕಾದಂಬರಿಯಲ್ಲಿ ಆರ್ಥಿಕ ಅಸಮಾನತೆ, ಆರ್ಥಿಕ ಶ್ರೇಣೀಕರಣ ಭೂಮಿಯ ಒಡೆತನದ ಮೇಲೆ ನಿರ್ಧಾರವಾಗಿದೆ. ತನ್ನ ಆಸ್ತಿಯು ಕೆಳವರ್ಗದವರಿಗೆ ಪಲ್ಲಟವಾಗದ ಹಾಗೆ ಅವರನ್ನು ನಿಯಂತ್ರಿಸಿದೆ ಮತ್ತು ಅವರ ಹಕ್ಕಿನ ಪ್ರಶ್ನೆಯನ್ನು ಗೌಣಗೊಳಿಸಿದೆ. ಜೊತೆಗೆ ಈ ದುಡಿಯುವ ವರ್ಗದ ಶ್ರಮಮೌಲ್ಯ ಶೋಷಣೆ, ಜಾತಿಯ ಶೋಷಣೆ ಅವರನ್ನು ಗುಲಾಮರಾಗಿ ನೋಡುವ ಚಿತ್ರಣ ಕಾದಂಬರಿಯಲ್ಲಿದೆ. ಕಾದಂಬರಿಯು ವರ್ಗಪ್ರಜ್ಞೆಯನ್ನು ಮುಚ್ಚಿಟ್ಟು ದಲಿತ ವರ್ಗದ ಪಾತ್ರಗಳ ನಿರೂಪಣೆ ಮಾಡುವುದರ ಮೂಲಕ ಆಳುವ ವರ್ಗದ ರಾಜಕೀಯ ತಂತ್ರಕ್ಕೆ ಒಳಗಾಗಿದೆ ಎಂದು ಅನಿಸುತ್ತದೆ.

ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಮತ್ತು 'ಭಾರತೀಪುರ' ಕಾದಂಬರಿಯಲ್ಲಿ ಸಮಾಜದ ಸೂಕ್ಷ್ಮವಾದ ಬದಲಾವಣೆಯನ್ನು ಗ್ರಹಿಸುತ್ತದೆ. ಸಂಸ್ಕಾರದಲ್ಲಿ ನಡೆಯುವ ಸಾಮಾಜಿಕ ಬದಲಾವಣೆಯ ಚಹರೆಗಳು ಬ್ರಾಹ್ಮಣ ಸಮುದಾಯಕ್ಕೆ ಮಾತ್ರ ಸೀಮಿತವಾಗಿವೆ. ಮನುಷ್ಯ ಸಮಾಜ ಕಟ್ಟಿಕೊಂಡಿರುವ ಸಾಂಸ್ಕೃತಿಕ ಜಗತ್ತಿನ ಪ್ರಶ್ನೆಯನ್ನು ತರ್ಕಿಸುತ್ತಿದೆ. ನವವಸಾಹತು ಬೆಳವಣಿಗೆಯ ಕಾಲದಲ್ಲಿ ಬ್ರಾಹ್ಮಣ ಸಮುದಾಯ ನಂಬಿಕೊಂಡು ಬಂದಿರುವ ಊಳಿಗಮಾನ್ಯಶಾಹಿ ಮೌಲ್ಯಗಳನ್ನು ಮುರಿಯುವ ಪ್ರಯತ್ನವನ್ನು ಕಾದಂಬರಿಯಲ್ಲಿ ನಾರಾಯಣಪ್ಪ ಮತ್ತು ಪ್ರಾಣೇಶಾಚಾರ್ಯನ ಪಾತ್ರಗಳು ಮಾಡಿವೆ. ಶೂದ್ರ ಮತ್ತು ದಲಿತ ಸಮುದಾಯವನ್ನು ಉತ್ಪಾದನಾ ಸಂಬಂಧಗಳಿಂದ ಬೇರ್ಪಡಿಸಿ ಗ್ರಹಿಸಲಾಗಿದೆ. ಕೆಳವರ್ಗದ ದಲಿತ ಮಹಿಳೆಯರು ಮೇಲ್ವರ್ಗದ ಪುರುಷರ ಭೋಗದ ವಸ್ತುವಿನಂತೆ ಚಿತ್ರಿತವಾಗಿರುವುದು ಕಂಡುಬರುತ್ತದೆ. ಶ್ರೀಪತಿಯ ಕೆಳವರ್ಗದ ಬೆಳ್ಳಿಯ ಮೇಲೆ ಲೈಂಗಿಕ ಶೋಷಣೆ ಮಾಡುತ್ತಾನೆ. ನಾರಾಣಪ್ಪ ಮತ್ತು ಪ್ರಾಣೇಶಾಚಾರ್ಯರು ಚಂದ್ರಿಯ ಜೊತೆ ಸಂಬಂಧ ಹೊಂದಿರುತ್ತಾರೆ. ಆದರೆ ಇವರ ಈ ಶೋಷಣೆಯ ಬಗ್ಗೆ ಅರಿವೇ ಇಲ್ಲದ ಹಾಗೆ ವರ್ತಿಸುವ ಕೆಳವರ್ಗದ ಮಹಿಳಾಪಾತ್ರಗಳನ್ನು ಕಾಣಬಹುದು. ಬೆಳ್ಳಿ ಅಯ್ಯಾ ಇವತ್ತು ಬ್ಯಾಡವಯ್ಯ ಎಂದು ಕೇಳಿಕೊಂಡರು. ಅವಳ ಮೇಲೆ ಲೈಂಗಿಕ ಶೋಷಣೆ ಮುಂದುವರೆಯುತ್ತದೆ. ಇಲ್ಲಿ ಕಾದಂಬರಿಯಲ್ಲಿ ಬ್ರಾಹ್ಮಣ ಸಮುದಾಯದ ಬದಲಾವಣೆಯ ಸಂಕೇತವನ್ನು ಚಿತ್ರಿಸುತ್ತಲೇ ಈ ಬದಲಾವಣೆಯ ಜೊತೆಯಲ್ಲಿ ಕೆಳವರ್ಗದ ಜನರ ಮೇಲೆ ನಡೆಯುತ್ತಿರುವ ಶೋಷಣೆಯು ಮುಖ್ಯವಾಗುತ್ತದೆ. ಶೋಷಣೆಯ ಹಿಂದೆ ಕೂಡಿರುವ ಸಮಾಜದ ಚಿತ್ರಣ ಇದೆ. ಆದರೆ ಅದರ ವಿರುದ್ಧದ ಪ್ರತಿಭಟನೆಯನ್ನು ಮುಚ್ಚಿಟ್ಟಿದೆ. ಯಾವುದೇ ಸಮಾಜದ ಚಲನಶೀಲವಾಗಿ ಚಲಿಸಬೇಕಾದರೆ ದುಡಿಯುವ ವರ್ಗದ ಶ್ರಮ ಅಗತ್ಯ ಆದರೆ ಈ

ಕಾದಂಬರಿಯಲ್ಲಿ ಶ್ರಮಶಕ್ತಿಯನ್ನು ಯಾಂತ್ರಿಕವಾಗಿ ಗ್ರಹಿಸಿ ಜಾತಿಚೌಕಟ್ಟಿನ ಒಳಗೆ ವಿಭಾಗಿಸಿ ನಿರೂಪಿಸುತ್ತಿರುವುದು ವರ್ಗ ಅಸಮಾನತೆಯ ಬೇರುಗಳನ್ನು ಮುಚ್ಚಿಡುವ ಮತ್ತೊಂದು ಮುಖವಾಗಿ ಅನಾವರಣಗೊಂಡಿದೆ.

'ಭಾರತೀಪುರ'ದಲ್ಲಿ ಮೇಲುವರ್ಗ ಮತ್ತು ಕೆಳವರ್ಗಗಳ ನಡುವೆ ಶೋಷಕ ಶೋಷಿತ ಸಂಬಂಧಗಳಿವೆ. ಈ ಶೋಷಣೆಗೆ ಭೂಮಿಯ ಅಸಮಾನತೆ ಕಾರಣವಾಗಿದೆ. ಜಗನ್ನಾಥ ಭೂಮಿಯ ಒಡೆಯ. ಇವನ ಭೂಮಿಯಲ್ಲಿ ದುಡಿಯುವ ಹೊಲೆಯ ಸಮುದಾಯವನ್ನು ಜೀತದ ಆಳುಗಳಾಗಿ ಕಾದಂಬರಿ ಚಿತ್ರಿಸಿದೆ. ಜೊತೆಗೆ ಸ್ಪೃಶ್ಯ-ಅಸ್ಪೃಶ್ಯ ಎಂಬ ತಾರತಮ್ಯಗಳನ್ನು ಕಾಣಬಹುದು. ಜಗನ್ನಾಥ ಚಿಕ್ಕವನಾಗಿದ್ದಾಗ ಹೊಲೆಯರ ಭರ್ಮ ದಾರಿಯಲ್ಲಿ ಇವನಿಗೆ ಸಿಕ್ಕಿದರೆ ಭರ್ಮನು ತಟ್ಟನೆ ಸರಿದು ಮರದ ಹಿಂದೆ ಅವಿತು, ತೊಟ್ಟಿದ್ದ ಕಪ್ಪು ಅಂಗಿಯನ್ನು ಬಿಚ್ಚಿ ಕಣ್ಣಿಗೆ ಬೀಳುವುದೇ ತಪ್ಪೇನೋ ಎನ್ನುವಂತೆ ದಾರಿಯಂಚಿನಲ್ಲಿ ನಿಂತು ಭಾಗಿ ನಮಸ್ಕರಿಸುತ್ತಿದ್ದ ವಿವರಗಳು ದೊರೆಯುತ್ತವೆ."[೧೯] ಇದು ಅಸ್ಪೃಶ್ಯ ಸಂಬಂಧವನ್ನು ಅನಾವರಣ ಮಾಡುತ್ತಿದೆ. ಜೊತೆಗೆ ಆರ್ಥಿಕ ಅಸಮಾನತೆಯ ಸಮಾಜದಲ್ಲಿ ಈ ರೀತಿಯಾಗಿ ಜಾತಿವಿಭಜನೆಯನ್ನು ಮಾಡುತ್ತಿದೆ ಎಂಬುದು ಅರಿವು ಇಲ್ಲಿದೆ. ಇಲ್ಲಿ ಜಗನ್ನಾಥ ಆರ್ಥಿಕವಾಗಿ ಬಲಿಷ್ಠವಾದ ವರ್ಗದ ಪ್ರತಿನಿಧಿ. ಇವನು ಈ ಕೆಳವರ್ಗದ ಬದಲಾವಣೆಯನ್ನು ಬಯಸಿ ಅಕ್ಷರ ಕಲಿಸಲು ಮುಂದಾಗುತ್ತಾನೆ. ಪಿಳ್ಳನಿಗೆ ಅಕ್ಷರ ಹೇಳಿಕೊಡುವಾಗ ಪಿಳ್ಳನ ವರ್ತನೆಯ ಸ್ವರೂಪವನ್ನು ಗಮನಿಸಿದ್ದಾಗ ಮೇಲು-ಕೀಳು ಎಂಬ ಭಾವನೆಗಳು ಸಮಾಜದಲ್ಲಿ ಎಷ್ಟು ಆಳದಲ್ಲಿ ಬೇರೂರಿವೆ ಎಂಬುದನ್ನು ತಿಳಿಯಬಹುದು. ಜೊತೆಗೆ ದಲಿತ ವರ್ಗದವರು ದೇವಾಲಯಗಳ ಪ್ರವೇಶ ಮಾಡುವುದರಿಂದ ಅವರು ಬದಲಾಗುತ್ತಾರೆ. ಎನ್ನುವ ಜಗನ್ನಾಥನ ಭಾವನೆಗಳು ವ್ಯಕ್ತವಾಗಿವೆ. ಆದರೆ ಅವರ ಮೇಲೆ ನಡೆಯುವ ಶೋಷಣೆಗಳನ್ನು ಕರಿತು ಜಗನ್ನಾಥನು ಮಾತನಾಡದೆ ಮೌನ ವಹಿಸುತ್ತಾನೆ. ಇಲ್ಲಿ ದುಡಿಯುವ ವರ್ಗದ ಸುಧಾರಣೆಯ ಬಯಸುತ್ತದೆ. ಜೊತೆಗೆ ದುಡಿಯುವ ವರ್ಗದ ಹಕ್ಕುಗಳನ್ನು ಮುಚ್ಚಿಟ್ಟು ನಿರೂಪಿಸಿರುವುದನ್ನು ಕಾಣಬಹುದು. ವರ್ಗಶತ್ರುಗಳು ಯಾರು ಎಂಬುದರ ಅರಿವು ಕೂಡ ಈ ಕೆಳವರ್ಗದ ಜನರಿಗೆ ಗೊತ್ತಾಗದೆ ಇರುವಂತಹ ಸ್ಥಿತಿಯಲ್ಲಿ ಈ ದುಡಿಯುವ ವರ್ಗದ ಆಲೋಚನೆಯನ್ನು ತಂದಿದ್ದಾರೆ. ಇಲ್ಲಿ ದುಡಿಯುವ ವರ್ಗದ ಪಾತ್ರಗಳು ಈ ಅಸಮಾನತೆಯ ಖ್ಯಾತಿಯನ್ನು ಒಪ್ಪಿಕೊಂಡು ಹೋಗುತ್ತವೆ. ಅದರ ವಿರುದ್ಧ ಪ್ರತಿಭಟನೆ ಇಲ್ಲ. ಕೊನೆಯ ಪಕ್ಷ ಶೋಷಣೆಯ ಅರಿವು ಕೂಡ ಇಲ್ಲದ ಹಾಗೆ ಈ ವರ್ಗವನ್ನು ಚಿತ್ರಿಸಲಾಗಿದೆ.

ದೇವನೂರ ಮಹಾದೇವ ಅವರ 'ಒಡಲಾಳ' ಮತ್ತು 'ಕುಸುಮಬಾಲೆ' ಕಾದಂಬರಿಗಳಲ್ಲಿ ದಲಿತ ವರ್ಗವು ಅನುಭವಿಸುವ ಅಸಮಾನತೆ, ಜಾತಿಯ ಶೋಷಣೆ, ಅಪಮಾನ, ಹಸಿವು, ಬಡತನ ಮುಂತಾದ ಸಮಸ್ಯೆಗಳ ವಸ್ತುವಿಷಯವನ್ನು ಕಾದಂಬರಿಯಲ್ಲಿ ಚರ್ಚಿಸಲಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಕೆಳವರ್ಗವು ಎದುರಿಸಿದ ಆರ್ಥಿಕ ಮತ್ತು ಸಾಮಾಜಿಕ ಸಂಕಷ್ಟಗಳ

ಸ್ಥಿತಿಯನ್ನು ಈ ಎರಡು ಕಾದಂಬರಿಗಳು ನಿರೂಪಣೆ ಮಾಡುತ್ತಿವೆ. ಒಡಲಾಳದಲ್ಲಿ ಸಾಕವ್ವನ ಹಟ್ಟಿಯಲ್ಲಿ ಆಗುವಂತಹ ವರ್ಗಸಂಘರ್ಷಗಳು ಆರ್ಥಿಕ ಅಸಮಾನತೆಯ ಸೂಚನೆಗಳಾಗಿವೆ. ಸಾಕವ್ವ ತನ್ನ ಹುಂಜವನ್ನು ಕಳೆದುಕೊಂಡು ಅದರ ಸುಳಿವಿಗಾಗಿ ಪ್ರಯತ್ನಪಡುವ ಸನ್ನಿವೇಶವು ಬಡಜನರು ಹಕ್ಕುಗಳನ್ನು ಕಳೆದುಕೊಂಡಿರುವುದರತ ಸ್ಥಿತಿಯನ್ನು ಅಭಿವ್ಯಕ್ತಿಸುತ್ತವೆ. ಇಲ್ಲಿ ಸಾಕವ್ವನ ಪ್ರತಿನಿಧಿಸುವ ದುಡಿಯುವ ವರ್ಗವು ಕಳೆದುಕೊಂಡಿರುವ ಹಕ್ಕುಗಳನ್ನು ಹುಡುಕುವುದು ಒಂದು ಕಡೆಯಾದರೆ, ಈ ವಸ್ತು ಸ್ಥಿತಿಯು ಅವರ ಹಸಿವು ಬಡತನದ ಶೋಷಣೆ ಕಾರಣವಾಗಿದೆ. ಆದರೆ ಇವರ ಹುಂಜವನ್ನು ಅಕ್ರಮವಾಗಿ ವಶಪಡಿಸಿಕೊಂಡಿರುವ ಎತ್ತಪ್ಪನು ಶೋಷಕ ವ್ಯವಸ್ಥೆಯ ಪ್ರತಿನಿಧಿಯಾಗಿ ಶ್ರಮಿಕ ವರ್ಗದ ಸ್ವಾತಂತ್ರ್ಯವನ್ನು ದಮನ ಮಾಡುತ್ತಿದ್ದಾನೆ. ಈ ವರ್ಗ ಶೋಷಣೆಗೆ ಬಲಿಯಾಗುತ್ತಿರುವ ದುಡಿಯುವ ಜನರು ಸಂಕಷ್ಟದಲ್ಲಿ ಬದುಕುವಂತಹ ಸ್ಥಿತಿಯುನ್ನು ಕಾಣುತ್ತೇವೆ. ಆದರೆ ಈ ಶೋಷಣೆ ಯಥಾಸ್ಥಿತಿಯಲ್ಲಿ ಮುಂದುವರಿಸಬೇಕು ಎನ್ನುವುದು ಆಳುವ ವರ್ಗದ ಆಲೋಚನೆಯಾಗಿದೆ. ಸಾಕವ್ವ ಶಿವುಗೆ ಈ ರೀತಿಯಲ್ಲಿ ಹೇಳುತ್ತಾಳೆ "ಅಯ್ ನರಲೋಕದಲ್ಲಿ ನಾನು ಪಟ್ಟಂಥ ಕಷ್ಟಕ್, ಆ ಸೀಕ್ಸ್ ಎಲ್ಲಾದು ತಗಾ ಅವ್ನ ಜೊತೇಲೂ ಅದ್ನೆ ಅಂತಿನೀಕನಾ"[೧೫] ಎಂದು ಶಿವೂಗೆ ನರಲೋಕ ಮತ್ತು ಯಮಲೋಕ ಪರಿಸ್ಥಿತಿಯನ್ನು ಹೇಳುವಾಗ ಈ ವ್ಯವಸ್ಥೆಯ ಕ್ರೂರವಾದ ಶೋಷಣೆಯ ಸ್ಥಿತಿಯನ್ನು ಅಭಿವ್ಯಕ್ತಿಸುತ್ತದೆ. ಹಾಗೆಯೇ ಎತ್ತಪ್ಪನು ಕಡಲೆಕಾಯಿ ಆರೋಪ ಮಾಡುವುದರ ಮೂಲಕ ಕೆಳವರ್ಗವನ್ನು ಶೋಷಣೆ ಮಾಡುವುದು, ಈ ಶೋಷಣೆಯ ಪರಿಣಾಮ ಮತ್ತೊಂದು ಹುಂಜವನ್ನು ಕಳೆದುಕೊಂಡಿರುವುದನ್ನು ಕಾಣಬಹುದು. ಕಾದಂಬರಿಯಲ್ಲಿ ಬಡತನ, ಹಸಿವು, ನಿರುದ್ಯೋಗ ಮೇಲುವರ್ಗದ ಶೋಷಣೆಯ ಪರಿಣಾಮದಿಂದ ಉದ್ಭವಿಸಿರುವ ಸಾಮಾಜಿಕ ಸಮಸ್ಯೆಗಳಾಗಿವೆ. ಈ ಅಸಮಾನತೆಯ ಸಮಾಜದಲ್ಲಿ ವರ್ಗ ಶೋಷಣೆಯ ತೀವ್ರತೆಯ ಪರಿಣಾಮ ಕೆಳವರ್ಗ ಅನುಭವಿಸುವ ಶೋಷಣೆಗೆ ಕಾರಣವಾಗಿರುವ ವಸ್ತುಸ್ಥಿತಿಯನ್ನು ಇಲ್ಲಿ ನಿರೂಪಿಸಲಾಗಿದೆ.

ಕುಸುಮಬಾಲೆಯಲ್ಲಿ "ಅಕ್ಕಮಹಾದೇವಮ್ಮ ಗಂಡ ಸತ್ತ ಹನ್ನೆರಡು ತಿಂಗಳಿಗೆ ಜೀತಗಾರನಿಗೆ ಹುಟ್ಟಿದನೆಂಬ ಅಪವಾದ ಹೊತ್ತು ತನ್ನ ಕುಡಿಯೊಡನೆ ತೌರಿನಿಂದ ಗಂಡನ ಮನೆಗೆ ಬರುತ್ತಾಳೆ. ಆದರೆ ಆಸ್ತಿ ವಿಚಾರದಲ್ಲಿ ಭಾವ ಬಸಪ್ಪಸೋಮಿ ಮತ್ತು ಮೈದುನ ಸಿದ್ಧೂರಿಗೆ ಅವಳ ಪಾಲಿನ ಆಸ್ತಿಯನ್ನು ಲಪಟಾಯಿಸಲು ಒಂದು ನೆಪ ಬೇಕಾಗಿತ್ತು. ಅದು ಸಿಕ್ಕಿತು. ಬಹುಶಃ ಅವಳಿಗೆ ಸಂತಾನ(ಗಂಡು ಮಗು) ಇಲ್ಲದಿದ್ದು ಇವರ ಮನೆಯಲ್ಲಿಯೇ ಗೊಡ್ಡುದನದಂತೆ ಜೀತ ಮಾಡುವಂತಿದ್ದರೆ ಖಂಡಿತ ಇವರು ಖುಷಿಯಿಂದಲೇ ಬರಮಾಡಿಕೊಳ್ಳುತ್ತಿದ್ದರೇನೋ. ಆದ್ದರಿಂದ ಇಲ್ಲಿ ಜೀತಪದ್ಧತಿಯ ಪರಾಕಾಷ್ಠತೆಯನ್ನು ಕಾಣಬಹುದು"[೧೬] ಎಂದಿರುವುದು ಸತ್ಯವಾದ ಅಭಿಪ್ರಾಯ ವಾಗಿದೆ. ಇಲ್ಲಿ ಗಂಡು ಹೆಣ್ಣುಗಳ ನಡುವಿನ ಸಂಬಂಧವನ್ನು ಜಾತಿಚೌಕಟ್ಟಿನ ಒಳಗೆ ವಿಭಾಗಿಸುವ ಕಾರ್ಯವನ್ನು ಶೋಷಕ ವ್ಯವಸ್ಥೆ ಮಾಡುತ್ತಿರುತ್ತದೆ. ಆದರೆ ಅನ್ಯ ಜಾತಿಯ ಮಾನವೀಯ ಸ್ಪರ್ಶವೇ ಇಲ್ಲದೆ ಜಾತಿಯಿಂದ ಬಂದಿರುವ ಚನ್ನ ಕುಸುಮದಳನ್ನು ಕೂಡುವುದರ ಮೂಲಕ

ಸಾವಿರಾರು ವರ್ಷಗಳ ದಬ್ಬಾಳಿಕೆಯ ವಿರುದ್ಧ ತನ್ನ ಪ್ರತಿಭಟನೆಯನ್ನು ತೋರಿಸುವುದರ ಜೊತೆಗೆ ತನಗೆ ವಂಚಿತವಾಗಿರುವ ಮಾನವೀಯ ಸಮಾನತೆಯನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಸಮಾಜದ ಪ್ರಬಲ ಶಕ್ತಿಗಳು ಇವನನ್ನು ಧ್ವಂಸಗೊಳಿಸುತ್ತವೆ. ಚನ್ನನ ಕೊಲೆಯಾಗುತ್ತದೆ. ಇವನ ಪ್ರತಿಭಟನೆ ದುರಂತದಲ್ಲಿ ಅವಸಾನವಾಗುತ್ತದೆ"[೧೪] ಎನ್ನುವ ರಘನಾಥರ ಅಭಿಪ್ರಾಯದಲ್ಲಿ ನೋವಿನ ನೆಲೆಯನ್ನು ಗುರುತಿಸಬಹುದು. ಹಾಗೆಯೇ ಮೇಲುವರ್ಗವು ನಿರಂತರವಾಗಿ ಕೆಳವರ್ಗವನ್ನು ಶೋಷಣೆ ಮಾಡಲು ಮತ್ತು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಈ ವರ್ಗದ ಮೇಲೆ ದಾಳಿ ಮಾಡುತ್ತಿರುತ್ತದೆ. ಈ ರೀತಿಯಾಗಿ ಜಾತಿ ಶೋಷಣೆಯ ಪರಿಣಾಮವನ್ನು ಎದುರಿಸಿರುವ ದಲಿತ ವರ್ಗದ ಸಮಸ್ಯೆಗಳನ್ನು ಕಾದಂಬರಿಗಳು ಗುರುತಿಸಿವೆ ಮತ್ತು ಈ ಶೋಷಣೆಯ ವಿರುದ್ಧ ಜಾಗೃತಿ ಬೆಳೆಯುತ್ತಿರುವುದನ್ನು ಇಲ್ಲಿ ಕಾಣಬಹುದು.

ಮುಳ್ಳೂರು ನಾಗರಾಜ ಅವರ 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯು ಸಮಾಜದಲ್ಲಿನ ಜಾತಿಯ ಶೋಷಣೆ, ಜಾತಿದೌರ್ಜನ್ಯ, ಅದರ ವಿರುದ್ಧ ಪ್ರತಿಭಟನೆಯನ್ನು ವಿವರವಾಗಿಯೇ ಚಿತ್ರಿಸುತ್ತದೆ. ಕಾದಂಬರಿಯಲ್ಲಿ ಹಿರಿಯ ತಲೆಮಾರಿನ ದಲಿತ ವರ್ಗವೂ ಈ ಶೋಷಣೆಯನ್ನು ಒಪ್ಪಿಕೊಂಡು ಬಂದಿದೆ. ಆದರೆ ನಂತರದ ಕಿರಿಯ ತಲೆಮಾರಿನ ಈ ದಲಿತ ವರ್ಗವು ಈ ಮೇಲ್ವರ್ಗದ ಶೋಷಣೆಯ ವಿರುದ್ಧ ಪ್ರತಿಭಟಿಸುತ್ತದೆ. ಆರ್ಥಿಕವಾಗಿ ಶೋಷಣೆಗೆ ಒಳಗಾದ ಹೊಲೆಯ ಸಮುದಾಯ ಮೇಲ್ಜಾತಿಯವರ ಹೋಟೆಲಿಗೂ ಹೋಗದಂತೆ ನಿರ್ಬಂಧ ವಿಧಿಸಿರುವುದು ಮತ್ತು ಇಡೀ ಮೇಲ್ಜಾತಿಯವರು ಇವರನ್ನು ಅಸ್ಪೃಶ್ಯರಾಗಿ ಕಾಣುವ ವಾತಾವರಣವನ್ನು ಕಾದಂಬರಿಯಲ್ಲಿ ಚಿತ್ರಿಸಿದ್ದರೂ ಬಸವರಾಜನ ಪಾತ್ರವು ಈ ಮೌಲ್ಯಗಳನ್ನು ಮುರಿಯುತ್ತದೆ. ಹೋಟೆಲು ನಿಂಗವ್ವ ಇವರನ್ನು ಅಸ್ಪೃಶ್ಯರನ್ನಾಗಿ ಕಾಣುತ್ತಾಳೆ. ಇವರು ಹೋಟೆಲಿನ ಹೊರಗೆ ಪ್ರತ್ಯೇಕ ಗ್ಲಾಸಿನಲ್ಲಿ ಕೊಟ್ಟ ಟೀ ಕುಡಿಯಬೇಕಾಗಿತ್ತು. ಆದರೆ ಬಸವರಾಜ ಹೋಟೆಲ್‌ಗೆ ನುಗ್ಗಿ ಮೇಲ್ಜಾತಿಯವರ ಸರಿಸಮಕ್ಕೆ ಕುಳಿತುಕೊಂಡು ತನಗೂ ಟೀ ಕೇಳುವುದನ್ನು ಕಾಣುತ್ತೇವೆ. ಸಂಕ್ರಪ್ಪನ ಹೆಂಡತಿ "ಅದ್ಯಾನುಡಾ ಬಸುರಾಜು ಊರುನೂ ಹೊಲಗೇರಿನೂ ಒಂದು ಮಾಡಕ ಬಂದಿದ್ದೀಯಾ? ಇದ ನಮ್ಮಪ್ಪ ಕಾಲದಿಂದಲು ಕಂಡರ್ನಿಲ್ಲಕಪ್ಪಾ ಸಿವ್ನೆ ಎಂಥಾ ಕಾಲ ಬಂದೆಹ್ಯು ಇದು ಬರಬಾರದ ಕಾಲ" ಎಂದು ರೇಗುತ್ತಾಳೆ. ಅದಕ್ಕೆ ಬಸುರಾಜು "ಅವ್ವೈ ಇದ್ಯಾವ ಸೀಮೆ ರೂಲ್ಸ್‌ಯ್ಯ ನಮ್ಮ ಕೇರಿಗೊಂದು ರೂಲ್ಸು ನಿಮ್ಕರಿಗೊಂದು ರೂಲ್ಸ್? ನಮ್ಕೇರಿ ಗಾಳಿ ನಿಮ್ಕೇರಿವಳಕ ಬಂದ್ರ ನೀವು ಬ್ಯಾಡ ಅನ್ನಂಗಿಲ್ಲ, ನಾವೂ ಬ್ಯಾಡ ಅನ್ನಂಗಿಲ್ಲ. ಆ ಹೊಳೆ ನೀರುನ ಮೇಲೆ ನಿಮ್ಕೇರಿ ಹೆಸರೂ ಬರೆದಿಲ್ಲ. ನಮ್ಕೇರಿ ಹೆಸರೂ ಬರೆದಿಲ್ಲ. ಹೊಲಾರನ್ಗೂ ಬಾಯಾರ್ಕ ಆಯ್ತದಪ್ಪ, ನೀರು ಕುಡುದರ ತಣ್ಣಗಾಯ್ತದ. ಲಿಂಗಾಯ್ತನುಗೂ ಅಷ್ಟಿಯಾ, ಬ್ರಾಮಣ್ಗೂ ಅಷ್ಟೀಯಾ ಅವರಪ್ಪನ್ಗೂ ಅಷ್ಟಿಯಾ ಅವನವ್ವ ಜಾತಿ ಮಾಡ್ದವಳ ಬಾಯ್ಗ್ ನನ್ನೆಕ್ಡವ ಸಿಕ್ಕಾಕ್ಕುತ್ಕನ ಸುಮ್ಮನ ಟೀ ಕೊಡಿ. ಅಮ್ಮಮ್ಮಾ ಅಂದ್ರ ನಿಮ್ಮ ಟೀಗೆ ಎಂಟಾಣೆ ಅದರ ಮ್ಯಾಲು ಎಂಟಾಣೆ ಕೋಡ್ತೀನಿಕನ ಮೊದ್ಲು ಟೀ ಕೊಡಿ ಮತ್ತೆ"[೧೫] ಎನ್ನುತ್ತಾರೆ. ಇಲ್ಲಿ

ತಲೆತಲಾಂತರದಿಂದ ಅಸ್ಪೃಶ್ಯತೆಯ ಆಚರಣೆಯನ್ನು ಕೆಳವರ್ಗದವರಿಗೆ ಹೇರುವುದನ್ನು ಇಲ್ಲಿ ಬಸುರಾಜ ಮುರಿಯುತ್ತಾನೆ. ಜೊತೆಗೆ ಜಾತಿಶೋಷಣೆ ಮಾಡುತ್ತಿರುವ ಶೋಷಕ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ ಕೂಡ ಇದೆ. ಈ ಅಸಮಾನತೆಯ ಕಾರಣದಿಂದ ಹೊಲ್ಯಾರ ಸಿದ್ದಯ್ಯ ಮತ್ತು ಗೌಡರ ಕಿರಿಯ ಮಗ ಚಂದ್ರಪ್ಪನ ಸಂಬಂಧ ರಂಗ ರಂಗಿಯ ಪ್ರಕರಣದ ವಿರುದ್ಧ ಬಸುರಾಜನ ಪ್ರತಿಭಟನೆ, ಜಾತಿದೌರ್ಜನ್ಯ, ಲೈಂಗಿಕ ದೌರ್ಜನ್ಯದ ವಿರುದ್ಧ ಪ್ರತಿಧ್ವನಿಯಾಗಿದೆ. ಹೀಗೆ ಕಾದಂಬರಿಯಲ್ಲಿ ದುಡಿಯುವ ವರ್ಗವು ಆರ್ಥಿಕ ಅಸಮಾನತೆಯ ಕಾರಣದಿಂದ ಅನೇಕ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಈ ಸಮಸ್ಯೆಗಳ ವಿರುದ್ಧ ದುಡಿಯುವ ವರ್ಗದ ಪ್ರತಿಭಟನೆಯು ಸಮಾನತೆಯ ಮೌಲ್ಯಗಳನ್ನು ಎತ್ತಿಹಿಡಿಯುತ್ತದೆ.

ಚೆನ್ನಣ್ಣ ವಾಲೀಕಾರರ 'ಒಂದು ಹೆಣ್ಣಿನ ಒಳಜಗತ್ತು' ಕಾದಂಬರಿಯಲ್ಲಿ ಭೂಮಿಯ ಅಸಮಾನತೆ ಮತ್ತು ಜಾತಿಯ ಶೋಷಣೆ ಸಮಸ್ಯೆಗಳನ್ನು ಸಾಮಾಜಿಕ ಸಮಸ್ಯೆಯಾಗಿ ಗುರುತಿಸಿದೆ. ಭೂಮಿಯ ಒಡೆತನ ಹೊಂದಿರುವ ಸಂಗಣ್ಣಗೌಡ ಸರಕಾರ ತಂದ 'ಭೂಸೀಲಿಂಗ್' ಕಾಯ್ದೆಯಿಂದ ಅಕ್ರಮವಾಗಿ ಸಂಪಾದಿಸಿಕೊಂಡಿದ್ದ ಜಮೀನು ಕೈತಪ್ಪಿ ಹೋಗುತ್ತದೆ ಎಂದು ತನ್ನ ಜಮೀನಿನಲ್ಲಿ ದುಡಿಯುತ್ತಿದ ತಳವಾರ ಮಲ್ಲ, ಬ್ಯಾಡರ ಎಂಕ, ಕುರುಬರ ಬೀರ, ಹೊಲೇರ ಶಿವ, ಕಟುಗರ ಬಾಬ್ಯಾರ ಹೆಸರಿನಲ್ಲಿ ಖಾತೆ ಮಾಡಿಸುತ್ತಾನೆ. ಹೀಗೆ ಮೊಟ್ಟಮೊದಲು ದುಡಿಯುವ ಜನಾಂಗದವರು ಭೂ ಒಡೆಯರಾದರು. ಆದರೆ ಇದು ಕೇವಲ ಕಾಗದದ ಮೇಲಿನ ಹಕ್ಕಾಗಿತ್ತು. ಆದರೆ ಈ ಭೂಮಿಯು ಸಂಗಣ್ಣಗೌಡನ ವಶದಲ್ಲಿ ಉಳಿಸಿಕೊಂಡವನು. ಇಲ್ಲಿ ದಲಿತರ ಹೆಸರಲ್ಲಿ ಭೂಮಿಯು ಹಕ್ಕು ಇದ್ದರೂ ಅದನ್ನು ವಂಚಿಸಿ ಅವರನ್ನು ಕೃಷಿ ಕೂಲಿಯಾಳುಗಳಾಗಿ ದುಡಿಯುವಂತಹ ಪರಿಸ್ಥಿತಿಯನ್ನು ಆಳುವ ವರ್ಗ ನಿರ್ಮಾಣ ಮಾಡುವುದನ್ನು ಕಾದಂಬರಿಯು ಚಿತ್ರಿಸುತ್ತದೆ. ಜೊತೆಗೆ ಕೆಳಜಾತಿ ಮಲ್ಯನ ಮತ್ತು ರತ್ನಳ ಸಂಬಂಧ ಸಹಜವಾದ ಕ್ರಿಯೆಯಾದರೂ ಜಾತಿಯ ಸಮಸ್ಯೆ ಮಲ್ಯನ ಸಾವಿಗೆ ಕಾರಣವಾಗುತ್ತದೆ. ಇದನ್ನು ಕೇಳಿ ರತ್ನಳೂ ಕೂಡ ಸಾವಿಗೆ ಶರಣಾಗುವುದು ಜಾತಿಯ ಶೋಷಣೆ ಮೀರಿದ ಸಂಬಂಧವಾಗಿ ಕಾಣಿಸುತ್ತದೆ. ಹೀಗೆ ಭೂಮಾಲೀಕ ವರ್ಗ ತನ್ನ ಸಂಪತ್ತಿನ ಒಡೆತನವನ್ನು ಉಳಿಸಿಕೊಳ್ಳಲು ಜಾತಿಶೋಷಣೆ ಮತ್ತು ಭೂ ಆಕ್ರಮಣದಂತಹ ಸಮಸ್ಯೆಗಳನ್ನು ಹುಟ್ಟುಹಾಕಿದೆ. ಆ ಸಮಸ್ಯೆಗಳೇ ಸಮಾಜದಲ್ಲಿನ ಸಾಮಾಜಿಕ ಅಸಮಾನತೆಗೆ ಕಾರಣವಾಗಿರುವುದನ್ನು ಕಾಣಬಹುದು.

'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಕೃತಿಯಲ್ಲಿ ದಿಬ್ಬ ಮತ್ತು ಗೌಡನ ಸಂಬಂಧವು ಆಳು ಮತ್ತು ಮಾಲೀಕನ ಸಂಬಂಧ ಆಗಿದ್ದು, ಕ್ರಮೇಣ ಕೆಳವರ್ಗದ ದಿಬ್ಬ ಅಲ್ಲಿಂದ ಬೇರ್ಪಟ್ಟವನು. ಗೌಡರ ಮನೆಯ ವಿಶೇಷ ಸಮಾರಂಭದಲ್ಲಿ ಬಂದು ಹೋಗುತ್ತಿದ್ದ ತನ್ನ ಮಗ ಕೊಟ್ರನೊಂದಿಗೆ ಬಂದಾಗ ಜೀತಕ್ಕೆ ಮಗನನ್ನು ಬಿಡಲು ಬಂದಿದ್ದಾನೆ ಎಂದೇ ಗೌಡ ಭಾವಿಸಿದ. ನಿಜ ಸಂಗತಿ ತಿಳಿದ ತಕ್ಷಣ "ನಾವು ರೊಕ್ಕ ಕ್ವಟ್ರೆ ನೀನು ನಿನ್ ಮಗನ್ನ ಹೈಸ್ಕೂಲ್ಗೆ ಸೇರ್ಸೋದು ಅದಾವ ದ್ವಡ್ಡಸಂಗ್ತಿ ಹೇಳು" ಎಂದು ಘರ್ಜಿಸುತ್ತಾನೆ. ಇಲ್ಲಿ ದುಡಿಯುವ ವರ್ಗದ ಮಕ್ಕಳು ಶಿಕ್ಷಣ

ಕಲಿಯುವುದು ಕೂಡ ಮೇಲುವರ್ಗಕ್ಕೆ ಸಹಿಸದ ಪ್ರಶ್ನೆಯಾಗಿದೆ. ಹಾಗೆಯೇ ತಹಶೀಲ್ದಾರ್ ದುರುಗೇಶನೂ ದಲಿತ ವರ್ಗದಿಂದ ಬಂದವನು. ಆದರೆ ಅಧಿಕಾರಶಾಹಿ ಮನೋಭಾವವನ್ನು ಬೆಳೆಸಿಕೊಂಡು ತನ್ನ ವರ್ಗದವರನ್ನು ಶೋಷಣೆ ಮಾಡುತ್ತಾನೆ. ಅಧ್ಯಾಪಕರು ದಿಬ್ಬನನ್ನು ದುಡಿಸಿಕೊಳ್ಳುತ್ತಾರೆ. ಆದರೆ ತನ್ನ ಮಗನನ್ನು ಶಾಲೆಗೆ ಸೇರಿವುದಕ್ಕೂ ಮಾಹಿತಿ ಕೊಡುವುದಿಲ್ಲ ಮತ್ತು ದಲಿತರಿಗಿರುವ ಉಚಿತ ಶಿಕ್ಷಣ ಸೌಲಭ್ಯದ ಮಾಹಿತಿ ಕೂಡ ತಿಳಿಸದೆ ಇರುವುದನ್ನು ಕಾಣುತ್ತೇವೆ. ಇಲ್ಲಿ ಈ ಕೆಳವರ್ಗದ ಜನರು ಎಲ್ಲಾ ವಲಯದಲ್ಲಿ ಶೋಷಿತರಾಗಿ ಶೋಷಣೆ ಅನುಭವಿಸುತ್ತಿದ್ದಾರೆ. ಹಾಗೆಯೆ ಸರ್ಕಾರದ ಸೌಲಭ್ಯಗಳನ್ನು ಮೇಲುವರ್ಗ ಇವರಿಗೆ ಸಿಗದ ರೀತಿಯಲ್ಲಿ ನೋಡಿಕೊಳ್ಳುವುದನ್ನು ಕಾಣುತ್ತೇವೆ. ಈ ರೀತಿಯಲ್ಲಿ ದುಡಿಯುವ ವರ್ಗ ಜಾತಿಯ ಶೋಷಣೆ ಲೈಂಗಿಕ ಶೋಷಣೆಯನ್ನು ಅನುಭವಿಸುತ್ತಿರುವುದನ್ನು ಕಾಣುತ್ತೇವೆ. ಈ ಅಸಮಾನತೆಯ ವ್ಯವಸ್ಥೆಯ ಗರ್ಭದಲ್ಲಿ ಹುಟ್ಟಿರುವ ಸಾಮಾಜಿಕ ಸಮಸ್ಯೆಗಳು ಹೇಗೆ ಚಲಾವಣೆಯಲ್ಲಿ ಇವೆ ಎಂದು ಈ ಕಾದಂಬರಿಯು ತಿಳಿಸುತ್ತದೆ. ಆದರೆ ದುಡಿಯುವ ವರ್ಗವು ಶಿಕ್ಷಣ ಕಲಿತು ಬದಲಾಗುವುದನ್ನು ಅಥವಾ ಜಾಗೃತರಾಗುತ್ತಿರುವುದರ ಸುಳಿವು ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಹೊರತು ದುಡಿಯುವ ವರ್ಗವು ತನ್ನ ಶೋಷಣೆಯ ವಿರುದ್ಧದ ಪ್ರತಿಭಟನೆಗೆ ಮುಂದಾಗುವುದಿಲ್ಲ.

'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಸಾಮಾಜಿಕ ಸಮಸ್ಯೆಗಳ ವಿರುದ್ಧದ ಹೋರಾಟವನ್ನು ಚಿತ್ರಿಸಲಾಗಿದೆ. ಇಲ್ಲಿ ಮಾದೇವನ ಪಾತ್ರವು ತನ್ನ ಎರಡು ವರ್ಗಗಳ ನಡುವಿನ ಐಡೆಂಟಿಯ ನಡುವೆ ಗುರುತಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗುತ್ತದೆ. ಮಾದೇವ ಕ್ಷತ್ರಿಯ ಸಮುದಾಯದಲ್ಲಿ ಹುಟ್ಟಿ ತನ್ನ ಕುಟುಂಬದ ನಡುವಿನ ಆಂತರಿಕ ಸಂಘರ್ಷದಲ್ಲಿ ಹೊಲೆಯನೊಬ್ಬ ರಕ್ಷಿಸಿ ಅವನನ್ನು ತನ್ನ ಸಮುದಾಯದಲ್ಲಿ ಬೆಳೆಸುತ್ತಾನೆ. ಇದರಿಂದ ಇವರ ಎಲ್ಲ ಲಕ್ಷಣಗಳು ಕೆಳವರ್ಗದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಇಲ್ಲಿ ಹೆಸರು ಕುಲ, ಅಡ್ಡ ಹೆಸರು, ಜಾತಿಯ ಸರ್ಟಿಫಿಕೇಟು ಹೀಗೆ ಎಲ್ಲವನ್ನು ಪಡೆಯುತ್ತಾನೆ. ಈ ಮೂಲಕ ಶಿಕ್ಷಣ ಕಲಿತು ಉದ್ಯೋಗವನ್ನು ಪಡೆದು ದುಡಿಯುತ್ತಾನೆ. ಮೇಲುಜಾತಿಯವರು ನಡೆಸುವ ಜಾತಿ ದೌರ್ಜನ್ಯದ ವಿರುದ್ಧ ಪ್ರತಿಭಟಿಸುತ್ತಾನೆ ಮತ್ತು ದಲಿತ ಚಳುವಳಿಯಲ್ಲಿ ಭಾಗವಹಿಸಿ ಜಾತಿಶೋಷಣೆಯ ವಿರುದ್ಧ ಹೋರಾಡುವುದನ್ನು ಕಾಣುತ್ತೇವೆ. ಈ ಸಮುದಾಯ ಶೋಷಣೆಯ ವಿರುದ್ಧ ಹೋರಾಡಿರುವ ಅಂಬೇಡ್ಕರರನ್ನು ಓದಿಕೊಂಡು ಅವರ ಬಗ್ಗೆ ಭಾಷಣ ಮಾಡುವ ಮಾದೇವ ತಾನು ಈ ಹೊಲೆಯನಲ್ಲವೆಂಬ ಸತ್ಯ ಗೊತ್ತಾದಾಗ ಅವನು ಮೇಲುಜಾತಿಯವನಾಗಲು ಪ್ರಯತ್ನಿಸುತ್ತಾನೆ. ಆದರೆ ತನ್ನ ಕುಟುಂಬ ತಾನು ನಂಬಿದ ಚಿಂತನೆಗಳನ್ನು ಬೇಡವಾಗಿ ಸವರ್ಣೀಯರ ಆಚಾರ ಮಾರ್ಗವನ್ನು ಅನುಸರಿಸುವ ಮಾದೇವ, ತನ್ನ ಈ ಬದಲಾಗುತ್ತಿರುವ ಬೆಳವಣಿಗೆಯನ್ನು ಮೌಲ್ಯ ಮಾಡಿ ಮೂಲಸಂಸ್ಕೃತಿಗೆ ಮರಳುತ್ತಾನೆ. ಇಲ್ಲಿ ಜಾತಿಗಳ ನಡುವಿನ ಭಿನ್ನವಾದ ಸಂಸ್ಕೃತಿಯನ್ನು ತಿಳಿದುಕೊಂಡ ಮಾದೇವ ತಾನೂ ಬೆಳೆದ ದುಡಿಯುವ ವರ್ಗದ ಸಂಸ್ಕೃತಿಗೆ ಪುನಃ ಮರಳುತ್ತಾನೆ. ಜೊತೆಗೆ ಕಾದಂಬರಿಯಲ್ಲಿ ಭೂಮಿಯ ಅಸಮಾನ ಹಂಚಿಕೆ,

ಕಲಿಯುವುದು ಕೂಡ ಮೇಲುವರ್ಗಕ್ಕೆ ಸಹಿಸದ ಪ್ರಶ್ನೆಯಾಗಿದೆ. ಹಾಗೆಯೇ ತಹಶೀಲ್ದಾರ್ ದುರುಗೇಶನೂ ದಲಿತ ವರ್ಗದಿಂದ ಬಂದವನು. ಆದರೆ ಅಧಿಕಾರಶಾಹಿ ಮನೋಭಾವವನ್ನು ಬೆಳೆಸಿಕೊಂಡು ತನ್ನ ವರ್ಗದವರನ್ನು ಶೋಷಣೆ ಮಾಡುತ್ತಾನೆ. ಅಧ್ಯಾಪಕರು ದಿಬ್ಬನನ್ನು ದುಡಿಸಿಕೊಳ್ಳುತ್ತಾರೆ. ಆದರೆ ತನ್ನ ಮಗನನ್ನು ಶಾಲೆಗೆ ಸೇರಿವುದಕ್ಕೂ ಮಾಹಿತಿ ಕೊಡುವುದಿಲ್ಲ ಮತ್ತು ದಲಿತರಿಗಿರುವ ಉಚಿತ ಶಿಕ್ಷಣ ಸೌಲಭ್ಯದ ಮಾಹಿತಿ ಕೂಡ ತಿಳಿಸದೆ ಇರುವುದನ್ನು ಕಾಣುತ್ತೇವೆ. ಇಲ್ಲಿ ಈ ಕೆಳವರ್ಗದ ಜನರು ಎಲ್ಲಾ ವಲಯದಲ್ಲಿ ಶೋಷಿತರಾಗಿ ಶೋಷಣೆ ಅನುಭವಿಸುತ್ತಿದ್ದಾರೆ. ಹಾಗೆಯೆ ಸರ್ಕಾರದ ಸೌಲಭ್ಯಗಳನ್ನು ಮೇಲುವರ್ಗ ಇವರಿಗೆ ಸಿಗದ ರೀತಿಯಲ್ಲಿ ನೋಡಿಕೊಳ್ಳುವುದನ್ನು ಕಾಣುತ್ತೇವೆ. ಈ ರೀತಿಯಲ್ಲಿ ದುಡಿಯುವ ವರ್ಗ ಜಾತಿಯ ಶೋಷಣೆ ಲೈಂಗಿಕ ಶೋಷಣೆಯನ್ನು ಅನುಭವಿಸುತ್ತಿರುವುದನ್ನು ಕಾಣುತ್ತೇವೆ. ಈ ಅಸಮಾನತೆಯ ವ್ಯವಸ್ಥೆಯ ಗರ್ಭದಲ್ಲಿ ಹುಟ್ಟಿರುವ ಸಾಮಾಜಿಕ ಸಮಸ್ಯೆಗಳು ಹೇಗೆ ಚಲಾವಣೆಯಲ್ಲಿ ಇವೆ ಎಂದು ಈ ಕಾದಂಬರಿಯು ತಿಳಿಸುತ್ತದೆ. ಆದರೆ ದುಡಿಯುವ ವರ್ಗವು ಶಿಕ್ಷಣ ಕಲಿತು ಬದಲಾಗುವುದನ್ನು ಅಥವಾ ಜಾಗೃತರಾಗುತ್ತಿರುವುದರ ಸುಳಿವು ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಹೊರತು ದುಡಿಯುವ ವರ್ಗವು ತನ್ನ ಶೋಷಣೆಯ ವಿರುದ್ಧದ ಪ್ರತಿಭಟನೆಗೆ ಮುಂದಾಗುವುದಿಲ್ಲ.

'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಸಾಮಾಜಿಕ ಸಮಸ್ಯೆಗಳ ವಿರುದ್ಧದ ಹೋರಾಟವನ್ನು ಚಿತ್ರಿಸಲಾಗಿದೆ. ಇಲ್ಲಿ ಮಾದೇವನ ಪಾತ್ರವು ತನ್ನ ಎರಡು ವರ್ಗಗಳ ನಡುವಿನ ಐಡೆಂಟಿಯ ನಡುವೆ ಗುರುತಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗುತ್ತದೆ. ಮಾದೇವ ಕ್ಷತ್ರಿಯ ಸಮುದಾಯದಲ್ಲಿ ಹುಟ್ಟಿ ತನ್ನ ಕುಟುಂಬದ ನಡುವಿನ ಆಂತರಿಕ ಸಂಘರ್ಷದಲ್ಲಿ ಹೊಲೆಯನೊಬ್ಬ ರಕ್ಷಿಸಿ ಅವನನ್ನು ತನ್ನ ಸಮುದಾಯದಲ್ಲಿ ಬೆಳೆಸುತ್ತಾನೆ. ಇದರಿಂದ ಇವರ ಎಲ್ಲ ಲಕ್ಷಣಗಳು ಕೆಳವರ್ಗದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಇಲ್ಲಿ ಹೆಸರು ಕುಲ, ಅಡ್ಡ ಹೆಸರು, ಜಾತಿಯ ಸರ್ಟಿಫಿಕೇಟು ಹೀಗೆ ಎಲ್ಲವನ್ನು ಪಡೆಯುತ್ತಾನೆ. ಈ ಮೂಲಕ ಶಿಕ್ಷಣ ಕಲಿತು ಉದ್ಯೋಗವನ್ನು ಪಡೆದು ದುಡಿಯುತ್ತಾನೆ. ಮೇಲುಜಾತಿಯವರು ನಡೆಸುವ ಜಾತಿ ದೌರ್ಜನ್ಯದ ವಿರುದ್ಧ ಪ್ರತಿಭಟಿಸುತ್ತಾನೆ ಮತ್ತು ದಲಿತ ಚಳುವಳಿಯಲ್ಲಿ ಭಾಗವಹಿಸಿ ಜಾತಿಶೋಷಣೆಯ ವಿರುದ್ಧ ಹೋರಾಡುವುದನ್ನು ಕಾಣುತ್ತೇವೆ. ಈ ಸಮುದಾಯ ಶೋಷಣೆಯ ವಿರುದ್ಧ ಹೋರಾಡಿರುವ ಅಂಬೇಡ್ಕರರನ್ನು ಓದಿಕೊಂಡು ಅವರ ಬಗ್ಗೆ ಭಾಷಣ ಮಾಡುವ ಮಾದೇವ ತಾನು ಈ ಹೊಲೆಯನಲ್ಲವೆಂಬ ಸತ್ಯ ಗೊತ್ತಾದಾಗ ಅವನು ಮೇಲುಜಾತಿಯವನಾಗಲು ಪ್ರಯತ್ನಿಸುತ್ತಾನೆ. ಆದರೆ ತನ್ನ ಕುಟುಂಬ ತಾನು ನಂಬಿದ ಚಿಂತನೆಗಳನ್ನು ಬೇಡವಾಗಿ ಸವರ್ಣೀಯರ ಆಚಾರ ಮಾರ್ಗವನ್ನು ಅನುಸರಿಸುವ ಮಾದೇವ, ತನ್ನ ಈ ಬದಲಾಗುತ್ತಿರುವ ಬೆಳವಣಿಗೆಯನ್ನು ಮೌಲ್ಯ ಮಾಡಿ ಮೂಲಸಂಸ್ಕೃತಿಗೆ ಮರಳುತ್ತಾನೆ. ಇಲ್ಲಿ ಜಾತಿಗಳ ನಡುವಿನ ಭಿನ್ನವಾದ ಸಂಸ್ಕೃತಿಯನ್ನು ತಿಳಿದುಕೊಂಡ ಮಾದೇವ ತಾನೂ ಬೆಳೆದ ದುಡಿಯುವ ವರ್ಗದ ಸಂಸ್ಕೃತಿಗೆ ಪುನಃ ಮರಳುತ್ತಾನೆ. ಜೊತೆಗೆ ಕಾದಂಬರಿಯಲ್ಲಿ ಭೂಮಿಯ ಅಸಮಾನ ಹಂಚಿಕೆ,

ಜಾತಿಶೋಷಣೆ, ಮೀಸಲಾತಿಯ ಪ್ರಶ್ನೆಗಳ ಕುರಿತು ಮೇಲುವರ್ಗಗಳ ವಿರುದ್ಧ ಮಾದೇವ ಪ್ರತಿಭಟಿಸುತ್ತಾನೆ. ತನ್ನ ಕುಟುಂಬದ ಎಲ್ಲಾ ಸದಸ್ಯರನ್ನು ಬೆಂಡಿಗೇರಿಯ ಹೋರಾಟದಲ್ಲಿ ಭಾಗವಹಿಸುವುದರ ಮೂಲಕ ಅಸಮಾನತೆಯ, ಜಾತಿಶೋಷಣೆ, ಅಪಮಾನ, ದೌರ್ಜನ್ಯಗಳ ವಿರುದ್ಧ ಸಮಾನ ಹಕ್ಕಿಗಾಗಿ ಶೋಷಣೆ ಇಲ್ಲದ ಸಮಾಜಕ್ಕಾಗಿ ಹೋರಾಡುವ ಆಶಯವ ಈ ಕಾದಂಬರಿಯಲ್ಲಿ ನಿರೂಪಣೆಯಾಗಿದೆ.

ಒಟ್ಟಾರೆಯಾಗಿ ಈ ಎಲ್ಲಾ ಕಾದಂಬರಿಗಳಲ್ಲಿ ಅಸ್ಪೃಶ್ಯತೆ, ಜಾತಿಸಮಸ್ಯೆ, ಜಾತಿಶೋಷಣೆ, ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧ ಪ್ರತಿಧ್ವನಿ ಇದೆ. ಜೊತೆಗೆ ಯಾವ ವರ್ಗಕ್ಕೆ ಆಸ್ತಿ ಹಾಗೂ ಸಂಪತ್ತು ಇರುತ್ತದೋ ಅದು ಆಯಾ ವರ್ಗವು ಸಾಮಾಜಿಕ ಅಧಿಕಾರವಾಗಿ ರೂಪುಪಡೆಯುತ್ತಿದೆ. ಈ ಹಿನ್ನೆಲೆಯಾಗಿ ಇದು ತನ್ನ ಆಸ್ತಿ ಮತ್ತು ಅಧಿಕಾರದ ಉಳಿವಿಗಾಗಿ ತನ್ನ ತಾನು ಶೋಷಣೆ ಮಾಡುತ್ತಿರುವ ದುಡಿಯುವ ವರ್ಗವನ್ನು ಶ್ರಮಶೋಷಣೆ ಮತ್ತು ಹಕ್ಕುಗಳ ವಂಚನೆ ಮಾಡುವುದರ ಮೂಲಕ ತನ್ನ ಅಧೀನದಲ್ಲಿ ಇಟ್ಟುಕೊಂಡಿದೆ. ಈ ಶೋಷಣೆಯ ಪರಿಣಾಮವಾಗಿ ಹಸಿವು, ಬಡತನ, ನಿರುದ್ಯೋಗ, ಲೈಂಗಿಕ ದೌರ್ಜನ್ಯ, ಅಸಮಾನ ಜಾತಿಶೋಷಣೆ, ಅರ್ಥಿಕ ಶೋಷಣೆ ನಡೆಯುತ್ತಿದೆ. ಇದನ್ನು ಆಳುವ ವರ್ಗವು ಮಾಡುತ್ತಿರುತ್ತದೆ. ಹಾಗಾಗಿ ಸಾಮಾಜಿಕ ಸ್ಥಿತಿಗತಿಗಳನ್ನು ಸಮಾಜದಲ್ಲಿ ಇರುವಂತೆ ಗ್ರಹಿಸುವುದು ಮತ್ತು ಕೃತಿಯ ಮೂಲಕ ಸಮಾಜವನ್ನು ಗ್ರಹಿಸುವ ಮಾದರಿಯನ್ನು ಈ ಸಾಹಿತ್ಯ ಕೃತಿಗಳು ಮಾಡುತ್ತಿವೆ.

### ೩.೩. ಕಾದಂಬರಿಗಳಲ್ಲಿ ದುಡಿಯುವ ವರ್ಗದ ರಾಜಕೀಯ ಸ್ಥಿತಿಗತಿ

ಸಾಹಿತ್ಯ ಕೃತಿಗಳು ದುಡಿಯುವ ವರ್ಗದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗತಿಯನ್ನು ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ. ಅದರಲಿಯೂ ದುಡಿಯುವ ವರ್ಗದ ರಾಜಕೀಯ ಸ್ಥಿತಿಗತಿಯು ದುಡಿಯುವ ವರ್ಗವನ್ನು ಯಾವ ರೀತಿಯಲ್ಲಿ ತನ್ನ ಕಥನದೊಳಗೆ ಕಟ್ಟಿಕೊಟ್ಟಿದೆ ಎಂಬುದನ್ನು ಪರಿಶೀಲಿಸಿದರೆ ಕಾದಂಬರಿಯಲ್ಲಿ ನಿರೂಪಣೆಗೊಂಡಿರುವ ದುಡಿಯುವ ವರ್ಗವು ಆಳುವ ವರ್ಗವಿಲ್ಲದೆ ಅಸ್ತಿತ್ವದಲ್ಲಿ ಇರುವುದಿಲ್ಲ ಎಂಬುದು ತಿಳಿಯುತ್ತದೆ. ಅದೇ ರೀತಿಯಲ್ಲಿ ಆಳುವ ವರ್ಗವು ದುಡಿಯುವ ವರ್ಗವಿಲ್ಲದೆ ಅಸ್ತಿತ್ವದಲ್ಲಿ ಇರುವುದಿಲ್ಲ. ಈ ಎರಡು ವರ್ಗಗಳ ನಡುವಿನ ಪರಸ್ಪರ ಸಂಬಂಧವು ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಆದರೆ ದುಡಿಯುವ ವರ್ಗದ ರಾಜಕೀಯ ಸ್ಥಿತಿಗತಿಗಳನ್ನು ಅದರ ಬದಲಾಗುವಿಕೆಯ ಸ್ವರೂಪವನ್ನು ಗುರುತಿಸಿದೆ. ಜೊತೆಗೆ ಆ ಬದಲಾವಣೆಗೆ ಈ ದುಡಿಯುವ ವರ್ಗದ ರಾಜಕೀಯವು ಶಕ್ತಿಯುಳ್ಳದ್ದು ಎಂಬುದನ್ನು ಕಾದಂಬರಿಗಳ ಮೂಲಕ ಚರ್ಚಿಸಲಾಗಿದೆ.

'ಚೋಮನ ದುಡಿ' ಕಾದಂಬರಿಯು ಚೋಮನನ್ನು, ಸಂಕಪ್ಪಯ್ಯನ ಮನೆಯ ಜೀತದ ಆಳಾಗಿ ದುಡಿಯುತ್ತಿರುವ ವ್ಯಕ್ತಿಯಾಗಿ ಚಿತ್ರಿಸಿದೆ. ಅದೇ ರೀತಿಯಲ್ಲಿ ಸಂಕಪ್ಪಯ್ಯ ಈ ದುಡಿಯುವ

ಜಾತಿಶೋಷಣೆ, ಮೀಸಲಾತಿಯ ಪ್ರಶ್ನೆಗಳ ಕುರಿತು ಮೇಲುವರ್ಗಗಳ ವಿರುದ್ಧ ಮಾದೇವ ಪ್ರತಿಭಟಿಸುತ್ತಾನೆ. ತನ್ನ ಕುಟುಂಬದ ಎಲ್ಲಾ ಸದಸ್ಯರನ್ನು ಬೆಂಡಿಗೇರಿಯ ಹೋರಾಟದಲ್ಲಿ ಭಾಗವಹಿಸುವುದರ ಮೂಲಕ ಅಸಮಾನತೆಯ, ಜಾತಿಶೋಷಣೆ, ಅಪಮಾನ, ದೌರ್ಜನ್ಯಗಳ ವಿರುದ್ಧ ಸಮಾನ ಹಕ್ಕಿಗಾಗಿ ಶೋಷಣೆ ಇಲ್ಲದ ಸಮಾಜಕ್ಕಾಗಿ ಹೋರಾಡುವ ಆಶಯವ ಈ ಕಾದಂಬರಿಯಲ್ಲಿ ನಿರೂಪಣೆಯಾಗಿದೆ.

ಒಟ್ಟಾರೆಯಾಗಿ ಈ ಎಲ್ಲಾ ಕಾದಂಬರಿಗಳಲ್ಲಿ ಅಸ್ಪೃಶ್ಯತೆ, ಜಾತಿಸಮಸ್ಯೆ, ಜಾತಿಶೋಷಣೆ, ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧ ಪ್ರತಿಧ್ವನಿ ಇದೆ. ಜೊತೆಗೆ ಯಾವ ವರ್ಗಕ್ಕೆ ಆಸ್ತಿ ಹಾಗೂ ಸಂಪತ್ತು ಇರುತ್ತದೋ ಅದು ಆಯಾ ವರ್ಗವು ಸಾಮಾಜಿಕ ಅಧಿಕಾರವಾಗಿ ರೂಪುಪಡೆಯುತ್ತಿದೆ. ಈ ಹಿನ್ನೆಲೆಯಾಗಿ ಇದು ತನ್ನ ಆಸ್ತಿ ಮತ್ತು ಅಧಿಕಾರದ ಉಳಿವಿಗಾಗಿ ತನ್ನ ತಾನು ಶೋಷಣೆ ಮಾಡುತ್ತಿರುವ ದುಡಿಯುವ ವರ್ಗವನ್ನು ಶ್ರಮಶೋಷಣೆ ಮತ್ತು ಹಕ್ಕುಗಳ ವಂಚನೆ ಮಾಡುವುದರ ಮೂಲಕ ತನ್ನ ಅಧೀನದಲ್ಲಿ ಇಟ್ಟುಕೊಂಡಿದೆ. ಈ ಶೋಷಣೆಯ ಪರಿಣಾಮವಾಗಿ ಹಸಿವು, ಬಡತನ, ನಿರುದ್ಯೋಗ, ಲೈಂಗಿಕ ದೌರ್ಜನ್ಯ, ಅಸಮಾನ ಜಾತಿಶೋಷಣೆ, ಅರ್ಥಿಕ ಶೋಷಣೆ ನಡೆಯುತ್ತಿದೆ. ಇದನ್ನು ಆಳುವ ವರ್ಗವು ಮಾಡುತ್ತಿರುತ್ತದೆ. ಹಾಗಾಗಿ ಸಾಮಾಜಿಕ ಸ್ಥಿತಿಗತಿಗಳನ್ನು ಸಮಾಜದಲ್ಲಿ ಇರುವಂತೆ ಗ್ರಹಿಸುವುದು ಮತ್ತು ಕೃತಿಯ ಮೂಲಕ ಸಮಾಜವನ್ನು ಗ್ರಹಿಸುವ ಮಾದರಿಯನ್ನು ಈ ಸಾಹಿತ್ಯ ಕೃತಿಗಳು ಮಾಡುತ್ತಿವೆ.

### ೩.೩. ಕಾದಂಬರಿಗಳಲ್ಲಿ ದುಡಿಯುವ ವರ್ಗದ ರಾಜಕೀಯ ಸ್ಥಿತಿಗತಿ

ಸಾಹಿತ್ಯ ಕೃತಿಗಳು ದುಡಿಯುವ ವರ್ಗದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗತಿಯನ್ನು ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ. ಅದರಲಿಯೂ ದುಡಿಯುವ ವರ್ಗದ ರಾಜಕೀಯ ಸ್ಥಿತಿಗತಿಯು ದುಡಿಯುವ ವರ್ಗವನ್ನು ಯಾವ ರೀತಿಯಲ್ಲಿ ತನ್ನ ಕಥನದೊಳಗೆ ಕಟ್ಟಿಕೊಟ್ಟಿದೆ ಎಂಬುದನ್ನು ಪರಿಶೀಲಿಸಿದರೆ ಕಾದಂಬರಿಯಲ್ಲಿ ನಿರೂಪಣೆಗೊಂಡಿರುವ ದುಡಿಯುವ ವರ್ಗವು ಆಳುವ ವರ್ಗವಿಲ್ಲದೆ ಅಸ್ತಿತ್ವದಲ್ಲಿ ಇರುವುದಿಲ್ಲ ಎಂಬುದು ತಿಳಿಯುತ್ತದೆ. ಅದೇ ರೀತಿಯಲ್ಲಿ ಆಳುವ ವರ್ಗವು ದುಡಿಯುವ ವರ್ಗವಿಲ್ಲದೆ ಅಸ್ತಿತ್ವದಲ್ಲಿ ಇರುವುದಿಲ್ಲ. ಈ ಎರಡು ವರ್ಗಗಳ ನಡುವಿನ ಪರಸ್ಪರ ಸಂಬಂಧವು ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಆದರೆ ದುಡಿಯುವ ವರ್ಗದ ರಾಜಕೀಯ ಸ್ಥಿತಿಗತಿಗಳನ್ನು ಅದರ ಬದಲಾಗುವಿಕೆಯ ಸ್ವರೂಪವನ್ನು ಗುರುತಿಸಿದೆ. ಜೊತೆಗೆ ಆ ಬದಲಾವಣೆಗೆ ಈ ದುಡಿಯುವ ವರ್ಗದ ರಾಜಕೀಯವು ಶಕ್ತಿಯುಳ್ಳದ್ದು ಎಂಬುದನ್ನು ಕಾದಂಬರಿಗಳ ಮೂಲಕ ಚರ್ಚಿಸಲಾಗಿದೆ.

'ಚೋಮನ ದುಡಿ' ಕಾದಂಬರಿಯು ಚೋಮನನ್ನು, ಸಂಕಪ್ಪಯ್ಯನ ಮನೆಯ ಜೀತದ ಆಳಾಗಿ ದುಡಿಯುತ್ತಿರುವ ವ್ಯಕ್ತಿಯಾಗಿ ಚಿತ್ರಿಸಿದೆ. ಅದೇ ರೀತಿಯಲ್ಲಿ ಸಂಕಪ್ಪಯ್ಯ ಈ ದುಡಿಯುವ

ಜನರ ಭೂಮಿಯನ್ನು ವಂಚಿಸಿ, ಭೂಮಾಲೀಕನನ್ನಾಗಿ ದುಡಿಯುವ ಜನರನ್ನು ಶೋಷಣೆ ಮಾಡುತ್ತಿರುವ ಆಳುವ ವರ್ಗದ ಪ್ರತಿನಿಧಿಯಾಗಿದ್ದಾನೆ. ಇಲ್ಲಿ ಮಾಲೀಕ ಮತ್ತು ಆಳುಗಳ ಸಂಬಂಧಗಳಿವೆ. ಜೊತೆಗೆ ಶೋಷಕ ಮತ್ತು ಶೋಷಿತ ಸಂಬಂಧಗಳು ಕೂಡ ಏರ್ಪಟ್ಟಿವೆ. ಆಳುವ ವರ್ಗದ ವ್ಯವಸ್ಥೆಯು ತಮ್ಮ ಭೂಮಿಯ ಒಡೆತನವನ್ನು ಉಳಿಸಿಕೊಳ್ಳಲು ಭೂಮಿಯು ಕೆಳವರ್ಗದವರಿಗೆ ಪಲ್ಲಟವಾಗದ ಹಾಗೆ ಆಳುವ ವರ್ಗವು ನೋಡಿಕೊಳ್ಳುತ್ತದೆ. ಇದು ಅದರ ರಾಜಕೀಯ ಕೆಲಸವಾಗಿದೆ. ಆ ಕಾರಣದಿಂದ ದುಡಿಯುವ ವರ್ಗದ ಚೋಮನನ್ನು ಈ ವರ್ಗವು ನಿರಂತರವಾಗಿ ಶೋಷಣೆ ಮಾಡುತ್ತಿರುವುದನ್ನು ಗುರುತಿಸಬಹುದು. ಅದೇ ಹೊತ್ತಿನಲ್ಲಿ ಚೋಮನು ಈ ಮೇಲುವರ್ಗದ ಶೋಷಣೆಯನ್ನು ಒಪ್ಪಿಕೊಂಡು ಹೋಗುತ್ತಾನೆ. ಆದರೆ ಚೋಮನ ನಂತರದ ತಲೆಮಾರು(ಅವನ ಮಕ್ಕಳು) ಈ ಶೋಷಣೆಯಿಂದ ಬದಲಾಗುವ ಪ್ರಯತ್ನ ಮಾಡುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಆದರೆ ಈ ಸಾಹಿತ್ಯ ಕೃತಿಯು ಇರುವ ಸಾಮಾಜಿಕ ವ್ಯವಸ್ಥೆಯಲ್ಲಿ ಚೋಮನ ಸುಧಾರಣೆಯನ್ನು ಬಯಸುತ್ತಿದೆ. ಅದರ ಪರಿಣಾಮವಾಗಿ ಚೋಮನ ಗೇಣಿಗಾಗಿ ಭೂಮಿಯನ್ನು ಕೇಳುತ್ತಾನೆ. ಆದರೆ ಆಳುವ ವರ್ಗ ಇವನ ಬೇಡಿಕೆಯನ್ನು ನಿರಾಕರಿಸುತ್ತದೆ. ಇಲ್ಲಿ ಚೋಮನು ಗೇಣಿಗಾಗಿ ಭೂಮಿಯನ್ನು ಕೇಳುವ ದುಡಿಯುವ ವರ್ಗವಾಗಿ ನಿರೂಪಣೆಗೊಂಡಿದ್ದಾನೆ. ಆದರೆ ಸಂಕಪ್ಪಯ್ಯ, ಬಿರುಮ ಇವನ ಈ ಪ್ರಯತ್ನವನ್ನು ವಂಚಿಸುವ ಆಳುವ ವರ್ಗದ ರಾಜಕೀಯ ಪ್ರತಿನಿಧಿಯಾಗಿ ಕಾಣಿಸುತ್ತಾರೆ. ಇದರ ಪರಿಣಾಮ ಚೋಮನಿಗೆ ಗೇಣಿಗಾಗಿ ಭೂಮಿ ಉಳುಮೆ ಮಾಡುವ ಅವನ ಕನಸು ನನಸಾಗಲಿಲ್ಲ. ಹಾಗೆಯೇ ಅವನ ಮಕ್ಕಳ ಮೇಲೆ ನಡೆಸಿದ ಲೈಂಗಿಕ ಕಿರುಕುಳ, ಜಾತಿಶೋಷಣೆ, ದೌರ್ಜನ್ಯ ಆಳುವ ವರ್ಗದ ರಾಜಕೀಯ ಹಿತಾಸಕ್ತಿಯ ಪರಿಣಾಮವಾಗಿ ನಡೆದಿದೆ. ಹಾಗೆಯೇ ಈ ಮೇಲುವರ್ಗವು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಭೂಮಿಯ ಅಸಮಾನತೆ, ಮತಾಂತರ, ಬಡತನ, ಹಸಿವಿನಂತಹ ಶೋಷಣೆಗಳನ್ನು ಸಮಾಜದಲ್ಲಿ ಹರಡುವ ರಾಜಕೀಯ ತಂತ್ರವನ್ನು ಕಾದಂಬರಿಯಲ್ಲಿ ಗುರುತಿಸಬಹುದು. ಆದರೆ ಇಲ್ಲಿ ಇರುವ ದುಡಿಯುವ ವರ್ಗದ ಪಾತ್ರಗಳು ಆ ಶೋಷಣೆಯನ್ನು ಒಪ್ಪಿಕೊಳ್ಳುತ್ತವೆ. ಆ ಶೋಷಣೆಯ ವ್ಯವಸ್ಥೆಯನ್ನು ಬದಲಿಸುವ ಸೂಚನೆಗಳು ಇಲ್ಲಿ ಕಾಣುವುದಿಲ್ಲ. ಆದ್ದರಿಂದ ಈ ದುಡಿಯುವ ವರ್ಗದ ಶೋಷಣೆ ಮುಂದುವರೆಯುವುದು ಕಾದಂಬರಿಯಲ್ಲಿ ಕಾಣಬಹುದು.

'ಚಿರಸ್ಮರಣೆ' ಕಾದಂಬರಿಯಲ್ಲಿ ದುಡಿಯುವ ವರ್ಗದ ರಾಜಕೀಯ ಪ್ರಜ್ಞೆಯನ್ನು ಕಾಣಬಹುದು. ಅದರಲ್ಲಿಯೂ ಮಾರ್ಕ್ಸ್‌ವಾದಿ ಚಿಂತನೆಗಳು ಕಾದಂಬರಿಯ ಕೇಂದ್ರಭಿತ್ತಿಯಲ್ಲಿ ನಿರೂಪಣೆಗೊಂಡಿವೆ. ಇದರ ಜೊತೆಗೆ ಆ ಕಾಲದ ರಾಜಕೀಯ ಮತ್ತು ಆರ್ಥಿಕ ಒತ್ತಡವು ಕಾದಂಬರಿಯಲ್ಲಿ ಬಲವಾಗಿರುವುದನ್ನು ಗುರುತಿಸಬಹುದು. ಇಲ್ಲಿ ಬರುವ ದುಡಿಯುವ ವರ್ಗವು ತನ್ನ ಹಕ್ಕುಗಳನ್ನು ಪಡೆದುಕೊಳ್ಳಲು ಸಂಘಟಿತವಾಗಿರುವುದನ್ನು ಸೂಚಿಸುತ್ತದೆ. ಕೈಯೂರಿನ ರೈತವರ್ಗವು ತನ್ನ

ಹಕ್ಕುಗಳನ್ನು ಕಳೆದುಕೊಂಡು ಮೇಲುವರ್ಗದ ಶೋಷಣೆ ಒಳಗಾಗಿದ್ದಾರೆ. ಇದರಿಂದ ಅಸಮಾನತೆ, ಅನ್ಯಾಯ, ದೌರ್ಜನ್ಯ, ಶೋಷಣೆ ಆ ಸಮಾಜದ ಸಾಮಾಜಿಕ ಸಮಸ್ಯೆಯಾಗಿ ಕಾಡುತ್ತಿದೆ. ಈ ವರ್ಗಶೋಷಣೆಯ ವಿರುದ್ಧ ಪ್ರತಿಭಟನೆಯ ಬೆಳವಣಿಗೆಯನ್ನು ಕಾದಂಬರಿಯು ಚಿತ್ರಿಸುತ್ತಿದೆ.

ಭೂಮಾಲೀಕ ವ್ಯವಸ್ಥೆಯ ಪ್ರತಿನಿಧಿಗಳಾದ ನಂಬೂದರಿ ಮತ್ತು ನಂಬಿಯಾರ ದುಡಿಯುವ ವರ್ಗವನ್ನು ನಿರಂತರವಾಗಿ ಶೋಷಣೆ ಮಾಡುವ ಆಳುವ ವರ್ಗದ ಪ್ರತಿನಿಧಿಗಳು. ಈ ವರ್ಗವನ್ನು ಕುರಿತು ಅಪ್ಪು ಹೇಳಿದ್ದು "ಈ ಹಳ್ಳಿಯ ಇಬ್ಬರು ಜಮೀನ್ದಾರ್ರು ಆಳೋ ಪಾಳೆಯಗಾರರಾಗಿ ಹೋದ್ರು, ಅವರು ರಾಜರು ನಾವು ಪ್ರಜೆಗಳು"[೧೯] ಎನ್ನುವುದರ ಹಿಂದೆ ವರ್ಗಶೋಷಣೆಯ ನಿರಂತರತೆಯನ್ನು ಮತ್ತು ವರ್ಗಶೋಷಕ ವ್ಯವಸ್ಥೆಯನ್ನು ಚಿತ್ರಿಸುತ್ತದೆ. ಜೊತೆಗೆ ಈ ಎರಡು ವರ್ಗಗಳ ನಡುವಿನ ವರ್ಗವೈರುಧ್ಯತೆಯ ಸಂಕೇತವು ಕೂಡ ಹೌದು. ಕಾದಂಬರಿಯಲ್ಲಿ ಬರುವ ದುಡಿಯುವ ವರ್ಗದ ಪಾತ್ರಗಳು ಈ ಆಳುವ ವರ್ಗದ ವ್ಯವಸ್ಥೆಯ ಶೋಷಣೆಯ ವಿರುದ್ಧ ಸಂಘಟಿತರಾಗಿ, ಪ್ರತಿಭಟಿಸುವುದು ಆರ್ಥಿಕ ಮೂಲವಾದ ತಾತ್ವಿಕತೆ ಯಾದರೂ ಅದು ದುಡಿಯುವ ವರ್ಗದ ರಾಜಕೀಯ ಪ್ರಜ್ಞೆಯನ್ನು ಅಭಿವ್ಯಕ್ತಿಸುತ್ತಿದೆ.

ಅಪ್ಪು ತನ್ನ ತಾಯಿಯ ಕುರಿತು ಹೇಳಿದ್ದು "ಅಮ್ಮ ಅಳಬೇಡಮ್ಮ ಮುಂದೆ ಒಂದು ದಿನ ನಮ್ಮ ರಾಜ್ಯ ಬರುತ್ತದೆ"[೨೦] ಎನ್ನುವುದು ದುಡಿಯುವ ವರ್ಗದ ಬಿಡುಗಡೆಯ ಸಂಕೇತವಾಗಿ ನಿರೂಪಣೆಗೊಂಡಿದೆ. ಅಂದರೆ ಸಮಾನತೆಯ ಸಮಾಜ, ವರ್ಗರಹಿತ ಸಮಾಜದ ಕಲ್ಪನೆಗೆ ಈ ದುಡಿಯುವ ವರ್ಗದ ರಾಜಕೀಯ ದೃಷ್ಟಿಕೋನವನ್ನು ಗುರುತಿಸಬಹುದು. ಈ ಆಳುವ ವರ್ಗ ಮತ್ತು ಅಳಿಸಿಕೊಳ್ಳುವ ವರ್ಗಗಳ ನಡುವೆ ಉಂಟಾದ ಈ ವರ್ಗಹೋರಾಟವನ್ನು ಮುಂದಿಡುವುದು ವರ್ಗರಹಿತ ಸಮಾಜದ ಕಲ್ಪನೆಯಾಗಿದೆ. ಆದರೆ ಆಳುವ ವರ್ಗವು ಈ ದುಡಿಯುವ ವರ್ಗದ ಹೋರಾಟವನ್ನು ನಾಶ ಮಾಡಲು ಪ್ರಯತ್ನಿಸುತ್ತದೆ. ಅದೇ ಹೊತ್ತಿನಲ್ಲಿ ಕಾದಂಬರಿಯು "ದಲಿತ ಕೋಟಿಯ ಎಲುಬುಗೂಡಿನ ಮೇಲೆ ಕಟ್ಟಿದ ಸಾಮ್ರಾಜ್ಯ ಖಂಡಿತ ಪುಡಿಪುಡಿಯಾಗುತ್ತದೆ. ಲೋಕದಲ್ಲೆಲ್ಲಾ ದುಡಿಯುವ ಜನರ ವಿಜಯಪತಾಕೆ ಹಾರಿಸಿಯೇ ಹಾರಿಸುತ್ತಾರೆ"[೨೧] ಎನ್ನುವ ದುಡಿಯುವ ವರ್ಗದ ರಾಜಕೀಯ ಪ್ರಜ್ಞೆಯನ್ನು ಎತ್ತಿಹಿಡಿಯುವುದನ್ನು ಕಾಣುತ್ತೇವೆ.

'ಬಂಡಾಯ' ಕಾದಂಬರಿಯು ಬಂಡವಾಳಶಾಹಿ ವ್ಯವಸ್ಥೆ, ಆಧುನಿಕತೆ, ಕೈಗಾರೀಕರಣದ ಬೆಳವಣಿಗೆಯ ಪರಿಣಾಮವನ್ನು ವಿವರಿಸುತ್ತದೆ. ಮೇಲುವರ್ಗವು ತನ್ನ ಹಿತಾಸಕ್ತಿಯನ್ನು ಕಾಪಾಡಿಕೊಂಡು ಹೋಗಲು ಕಾರ್ಮಿಕ ವರ್ಗವನ್ನು ಶೋಷಣೆ ಮಾಡಿ ಅವರನ್ನು ತನ್ನ ಅಧೀನ ವರ್ಗವಾಗಿಟ್ಟುಕೊಳ್ಳುವ ಆಳುವ ವರ್ಗದ ರಾಜಕೀಯ ಮನೋಭಾವವನ್ನು ಚಿತ್ರಿಸುತ್ತದೆ. ಬಂಡವಾಳಶಾಹಿ ವರ್ಗವು ಕಾರ್ಖಾನೆಗಳ ಒಡೆಯರಾಗಿ, ಕಾರ್ಮಿಕ ವರ್ಗವನ್ನು ನಿರಂತರವಾಗಿ ಒಂದಿಲ್ಲ ಒಂದು ಸಮಸ್ಯೆಯನ್ನು ಸೃಷ್ಟಿಸಿ ಅವರನ್ನು ಶೋಷಣೆ ಮಾಡುತ್ತಿರುತ್ತದೆ. ಅದರ ವಿರುದ್ಧ ಕಾರ್ಮಿಕ ವರ್ಗವು ತನ್ನ ಶೋಷಣೆಯನ್ನು ಪ್ರತಿಭಟಿಸುತ್ತದೆ. ಈ ವರ್ಗಸಂಘರ್ಷವು

ಕಾದಂಬರಿಯ ಕೇಂದ್ರಸ್ಥಾನದಲ್ಲಿ ನಿರೂಪಣೆಯಾಗಿದೆ. ಈ ವರ್ಗಸಂಘರ್ಷವು ಮೂಲಭೂತವಾಗಿ ಆರ್ಥಿಕ ಅಸಮಾನತೆಯ ತಳಹದಿಯ ಮೇಲೆ ನಿಂತಿದೆ. ಕಾರ್ಮಿಕ ವರ್ಗದ ಸಂಬಳದ ಬಡ್ತಿ, ಬೋನಸ್, ಹೆರಿಗೆ ರಜೆ, ತುಟ್ಟಿಭತ್ಯೆ ಹೆಚ್ಚಳ ಇತ್ಯಾದಿ ಬೇಡಿಕೆ ಈಡೇರಿಸಲು ಒತ್ತಾಯಿಸಿ ಕಾರ್ಮಿಕ ವರ್ಗವು ಹೋರಾಟಕ್ಕೆ ಇಳಿದಿದೆ. ಅದೇ ಹೊತ್ತಿನಲ್ಲಿ ವರ್ಗಶತ್ರುವಾದ ಬಂಡವಾಳ ಶಾಹಿಯ ವಿರುದ್ಧ ಹೋರಾಟದ ತೀವ್ರತೆಯನ್ನು ಸೂಚಿಸುತ್ತಿದೆ. ಇಲ್ಲಿ ಕಾರ್ಮಿಕ ವರ್ಗದ ಬಂಡಾಯದ ಮೂಲ ಆಶಯ ವರ್ಗರಹಿತ ಸಮಾಜದ ಪ್ರಯತ್ನವನ್ನು ಕಾದಂಬರಿಯ ಆಶಯದಲ್ಲಿ ಗಮನಿಸಬಹುದು. ಕಾರ್ಮಿಕ ಸಂಘಟನೆ ಮತ್ತು ಕಾರ್ಮಿಕ ನಾಯಕರ ನಡುವೆ ಭಿನ್ನಾಭಿಪ್ರಾಯ ತಂದ ಆಳುವ ವರ್ಗವು ಈ ವರ್ಗಸಂಘರ್ಷವನ್ನು ದಿಕ್ಕು ತಪ್ಪಿಸುತ್ತಿವೆ. ಬಂಡವಾಳಶಾಹಿಗಳಾದ ನಾಗೇಶ ಶರ್ಮಾ, ಸತೀಶ ಶರ್ಮಾ, ಕಾರ್ಮಿಕ ವರ್ಗದ ನಾಯಕನಾದ ರಾಜೀವನನ್ನು ತನ್ನ ಹಿತಾಸಕ್ತಿಯನ್ನು ಈಡೇರಿಸಿಕೊಳ್ಳಲು ಬಯಸುತ್ತಾರೆ. ಅದೇ ಹೊತ್ತಿನಲ್ಲಿ ಕಾದಂಬರಿಯ ಈ ಕಾರ್ಮಿಕ ಹೋರಾಟದ ಮೂಲಕ ಸಮಾಜದ ಬದಲಾವಣೆಗೆ ಪ್ರಯತ್ನಿಸುವುದನ್ನು ನಿರೂಪಣೆಯಲ್ಲಿ ಕಾಣುತ್ತೇವೆ. ಅದೇ ರೀತಿ ಯಾಮಿನಿ ಹೋರಾಟದಲ್ಲಿ ಧುಮುಕುವುದು ವರ್ಗ ಅಸಮಾನತೆಯ ಬದಲಾಯಿಸುವ ಆಲೋಚನೆಯಲ್ಲಿ. ರಾಜೀವ ಹೋರಾಟದ ಕಣದಿಂದ ನಿಷ್ಕ್ರಮಿಸುವ ಬೆಳವಣಿಗೆ ಕಾದಂಬರಿಯ ಹಿನ್ನಡೆಗೆ ಕಾರಣವಾಗಿದೆ. ಇಲ್ಲಿ ದುಡಿಯುವ ವರ್ಗವು ತನ್ನ ಬದುಕನ್ನು ನಿರ್ವಹಿಸಿಕೊಳ್ಳಲು ಮೇಲುವರ್ಗದ ಕೈಕೆಳಗಾಗಿ ದುಡಿಯುತ್ತಲೇ ವರ್ಗಜಾಗೃತಿಯಾಗಿ ಪ್ರತಿಭಟಿಸುತ್ತಿರುವುದನ್ನು ಕಾಣುತ್ತೇವೆ. ಹೀಗೆ ವರ್ಗ ಹೋರಾಟದ ಆಳದಲ್ಲಿ ಅಸಮಾನತೆಯ ವಿರುದ್ಧ ಉಗ್ರವಾದ ಹೋರಾಟದಲ್ಲಿ ದುಡಿಯುವ ವರ್ಗದ ಜನರು ಧುಮುಕುವುದನ್ನು ಕಾದಂಬರಿಯು ಅನಾವರಣ ಮಾಡುತ್ತಿದೆ, ಈ ಬೆಳವಣಿಗೆಯನ್ನು ಬಂಡವಾಳಶಾಹಿ ವರ್ಗ ತಪ್ಪಿಸುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಹೀಗೆ ಆಳುವ ವರ್ಗ ಮತ್ತು ದುಡಿಯುವ ವರ್ಗದ ನಡುವೆ ವರ್ಗಶೋಷಣೆಯ ನಿರಂತರತೆಯ ಸಂಕೇತವಾಗಿ ಕಾದಂಬರಿಯ ಚಿತ್ರಿಸುತ್ತಿದೆ.

'ಒಡಲಾಳ' ಮತ್ತು 'ಕುಸುಮಬಾಲೆ' ಕಾದಂಬರಿಗಳು ದಲಿತ ಸಮಾಜದ ಸೂಕ್ಷ್ಮ ನೋಟಗಳನ್ನು ದಾಖಲಿಸುತ್ತವೆ. 'ಒಡಲಾಳ'ದಲ್ಲಿ ಸಾಕವ್ವ ಕಳೆದುಕೊಂಡಿರುವ ಹುಂಜವನ್ನು ಹುಡುಕುವ ಪ್ರಯತ್ನದಿಂದ ಕಾದಂಬರಿಯು ಆರಂಭವಾಗುತ್ತದೆ. ಮೇಲುವರ್ಗ ಮತ್ತು ಪ್ರಭುತ್ವದ ದೌರ್ಜನ್ಯಕ್ಕೆ ಹೇಗೆ ದುಡಿಯುವ ವರ್ಗವು ಬಲಿಯಾಗುತ್ತದೆ ಎಂಬುದನ್ನು ಕಾದಂಬರಿಯ ನಿರೂಪಣೆಯಲ್ಲಿ ಚಿತ್ರಿಸಿದ್ದಾರೆ. ಸಾಕವ್ವನು ಹುಂಜ ಕಳೆದುಕೊಂಡಿದ್ದು, ಅವರ ಮನೆಯ ಆಂತರಿಕ ಬಿಕ್ಕಟ್ಟಿಗೆ ಕಾರಣವಾಗುತ್ತದೆ. ಜೊತೆಗೆ ಸಾಹುಕಾರ ಎತ್ತಪ್ಪ 'ಕಡಲೆಕಾಯಿ' ಕಳ್ಳತನ ಆರೋಪವನ್ನು ಮಾಡಿ ಈ ದುಡಿಯುವ ವರ್ಗದ ಕುಟುಂಬದ ಮೇಲೆ ದೌರ್ಜನ್ಯ ಮಾಡುವುದು, ಇದರ ಜೊತೆಯಲ್ಲಿ ಪೊಲೀಸ್ ವ್ಯವಸ್ಥೆಯ ಕೂಡ ಭೂಮಾಲೀಕ ವರ್ಗದ ಪರವಾಗಿ ನಿಂತು ದುಡಿಯುವ ವರ್ಗದವರ ಮೇಲೆ ದೌರ್ಜನ್ಯ ಎಸಗುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಈ ಆಳುವ ವರ್ಗದ ಕ್ರೂರವಾದ ಶೋಷಣೆಯ ಮೌಲ್ಯಗಳನ್ನು ಕಾದಂಬರಿಯು ಗುರುತಿಸುತ್ತಿದೆ. ಹಾಗೆಯೇ ಈ ಪ್ರಭುತ್ವ ಶೋಷಣೆಯ ವಿರುದ್ಧ ಗುರುಸಿದ್ದು ಇನ್‌ಸ್ಪೆಕ್ಟರ್‌ನನ್ನು ದುರುಗುಟ್ಟಿ ನೋಡುವುದು ಸಾಹೇಬರ ರೋಮಗಳು ಅಲುಗಾಡಿಸುವುದು ಪ್ರತಿಭಟನೆಯ ಸ್ವರೂಪವಾಗಿ ಕಾಣಿಸುತ್ತದೆ. ಹಾಗೆಯೇ ಆಳುವ ವರ್ಗದ ವ್ಯವಸ್ಥೆಯ ಶೋಷಣೆಯನ್ನು ಪ್ರತಿಭಟಿಸುವ ರಾಜಕೀಯ ಮನೋಭಾವ ಬೆಳೆಯುತ್ತಿರುವುದನ್ನು ಕಾದಂಬರಿಯು ಚಿತ್ರಿಸುತ್ತದೆ. ಪುಟ್ಟಗೌರಿ ಬಿಡಿಸಿದ ನವಿಲಿನ ಚಿತ್ರ ಅವರ ರಾಜಕೀಯ ಅನನ್ಯತೆಗೆ ಸಂಕೇತವಾಗಲಿದೆ. ಆದರೆ ಕುಸುಮಬಾಲೆಯಲ್ಲಿ ಮೇಲು-ಕೀಳು ಎಂಬ ಕಟ್ಟುಪಾಡುಗಳನ್ನು ಮೀರಿ ಮಾನವೀಯ ಸಂಬಂಧ ಗಳನ್ನು ಬೆಳೆಸಿಕೊಳ್ಳುತ್ತಾರೆ. ಕುಸುಮ ಮತ್ತು ಚನ್ನನ ಸಂಬಂಧ ಜಾತಿಚೌಕಟ್ಟನ್ನು ಮೀರಿರುವುದನ್ನು ಕಾಣುತ್ತೇವೆ. ಇದನ್ನು ಸಹಜವಾದ ಕ್ರಿಯೆಯಾಗಿ ಕಾದಂಬರಿಕಾರರು ತಂದಿದ್ದಾರೆ. ಆದರೆ ಈ ಸಂಬಂಧವನ್ನು ಸಹಿಸದ ಮೇಲುವರ್ಗವು ಚನ್ನನನ್ನು ಕೊಲೆ ಮಾಡುವುದರ ಮೂಲಕ ತನ್ನ ವರ್ಗದ ಕ್ರೂರವಾದ ಸ್ಥಿತಿಯನ್ನು ತೋರಿಸುವುದನ್ನು ಕಾಣಬಹುದು. ಈ ಮೂಲಕ ಕಾದಂಬರಿಯು ಅಂತರ್‌ಜಾತೀಯ ವಿವಾಹದ ವಿಷಯವನ್ನು ಚರ್ಚೆಗೆ ತರುತ್ತದೆ. ಜಾತಿತಾರತಮ್ಯಗಳನ್ನು ಮೀರಿ ಮಾನವ ಸ್ವಭಾವವನ್ನು ಬೆಸೆಯುವುದಕ್ಕೆ ಕಾದಂಬರಿಯ ಪ್ರಯತ್ನ ಇದೆ. ಸಮಾಜದ ಜನರು ಈ ಶೋಷಣೆಯ ಗಡಿಯನ್ನು ದಾಟುವ ಪ್ರಯತ್ನ ಮಾಡಬೇಕು ಎನ್ನುವ ಆಳವಾದ ನಂಬಿಕೆ ಕಾದಂಬರಿಯಲ್ಲಿ ಕಾಣಬಹುದು. ತನ್ನ ಮಗನಿಗಾಗಿ ಕಾಯುವ ತಂದೆ-ತಾಯಿಗಳಿಗೆ ತನ್ನ ಮಗನ ಸಾವು ಕೂಡ ತಲುಪದೇ ಇರುವ ಸ್ಥಿತಿಯನ್ನು ಕಾಣುತ್ತೇವೆ. ಇಲ್ಲಿ ಮೇಲುವರ್ಗವು ತನ್ನ ವ್ಯವಸ್ಥೆಯನ್ನು ಉಳಿಸಿಕೊಂಡು ಹೋಗಲು ಗಾರಸಿದ್ಮಾವನ ಮೇಲೆ ಕಳುವಿನ ಆರೋಪ ಮಾಡುತ್ತಾರೆ. ಈ ಮೂಲಕ ಈ ದುಡಿಯುವ ವರ್ಗವನ್ನು ತನ್ನ ನಿಯಂತ್ರಣದಲ್ಲಿ ಅಥವಾ ತನ್ನ ಅಧೀನದಲ್ಲಿಟ್ಟುಕೊಳ್ಳುವ ಮೇಲುವರ್ಗದ ವಿರುದ್ಧ ದಲಿತ ವರ್ಗವು ಜಾಗೃತಿಯಾಗುತ್ತಿರುವುದನ್ನು ಕಾದಂಬರಿಯು ಬಿಂಬಿಸುತ್ತಿದೆ ಹೊರತು ಅದರ ಬಿಡುಗಡೆಗೆ ಯಾವುದೇ ವೈಚಾರಿಕ ನಿಲುವುಗಳನ್ನು ಕಾದಂಬರಿಯು ತಾಳುವುದಿಲ್ಲ.

'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯಲ್ಲಿ ಜಾತಿ ದೌರ್ಜನ್ಯವನ್ನು ಪ್ರತಿಭಟಿಸುವ ರಾಜಕೀಯ ಮನೋಭಾವವನ್ನು ಗುರುತಿಸಬಹುದು. ಇಲ್ಲಿ ಬರುವ ದುಡಿಯುವ ವರ್ಗದ ಪಾತ್ರವಾದ ಬಸವರಾಜನು ತನ್ನ ಜಾತಿಯ ಮೇಲೆ ನಡೆಯುತ್ತಿರುವ ಮೇಲುವರ್ಗದ ದಬ್ಬಾಳಿಕೆ, ದೌರ್ಜನ್ಯವನ್ನು ನಿಲ್ಲಿಸುವ ಪ್ರಯತ್ನದಲ್ಲಿ ಹೋರಾಡುತ್ತಾನೆ. ಹೊಲ್ಯಾರ ಸಿದ್ಧಿ ಮತ್ತು ಗೌಡರ ಕಿರಿಯ ಮಗ ಚಂದ್ರಪ್ಪ ಇವರ ಸಂಬಂಧ ಹೊಟೇಲು ನಿಂಗವ್ವ ಅಸ್ಪೃಶ್ಯರನ್ನು ಕಾಣುವ ರೀತಿ, ಹೊಲ್ಯಾರ ರಂಗಿ-ರಂಗಿಯರ ಪ್ರಕರಣ ಇಲ್ಲಿ ವರ್ಗದ ಲಕ್ಷಣವನ್ನು ಸೂಚಿಸುತ್ತವೆ. ಜೊತೆಗೆ ಈ ಮೇಲುಜಾತಿಯ ವರ್ಗದ ವಿರುದ್ಧ ಜಾತಿಸಂಘರ್ಷವನ್ನು ಕಾದಂಬರಿಯು ನಿರೂಪಿಸಿದೆ. ಆದರೆ ಈ ಜಾತಿಯ ಶೋಷಣೆಗೆ ಒಳಗಾಗಿರುವ ದುಡಿಯುವ ವರ್ಗದ ಬಿಡುಗಡೆಯ ಪ್ರಯತ್ನವು ಕಾದಂಬರಿಯಲ್ಲಿ ಕಾಣುವುದಿಲ್ಲ. ಅದರ ವಿರುದ್ಧ ಹೋರಾಟದ ಬೆಳವಣಿಗೆ ಕಾದಂಬರಿಯ ಆಳದಲ್ಲಿ ಇದೆ.

'ಹೊಲಗೇರಿಯ ರಾಜಕಮಾರ' ಕಾದಂಬರಿಯಲ್ಲಿ ಶೋಷಣೆ ಒಳಗಾಗಿರುವ ದುಡಿಯುವ ಜನರ ಹೋರಾಟವನ್ನು ಚಿತ್ರಿಸುತ್ತಿದೆ. ಜಾತಿ, ಶ್ರೇಷ್ಠ, ಕನಿಷ್ಠದ ನೆಲೆಯಿಂದ ನೋಡುವ ಆಲೋಚನಾ ವಿಧಾನಗಳನ್ನು ಇಲ್ಲಿ ಬದಲಾಯಿಸುವ ಪ್ರಯತ್ನವನ್ನು ಮಾದೇವನ ಪಾತ್ರದಿಂದ ತಿಳಿದುಕೊಳ್ಳಬಹುದು. ಮಾದೇವನ ಹುಟ್ಟು, ಕ್ಷತ್ರಿಯ ಕುಟುಂಬದಲ್ಲಿ ನಡೆದರೂ ಅವನ ಬೆಳವಣಿಗೆಯು ಕೆಳವರ್ಗದಲ್ಲಿ ಆಯಿತು. ಈ ಎರಡು ಸಂಸ್ಕೃತಿಗಳ ನಡುವೆ ಮಾದೇವ ಸಮಾಜದ ಒಳ್ಳೆಯತನ ಇರುವ ದುಡಿಯುವ ವರ್ಗಕ್ಕೆ ಬೆಂಬಲವಾಗಿ ನಿಂತು ಈ ದೇಶದ ಶೋಷಣೆಯ ವಿರುದ್ಧ ಸಂಘರ್ಷಕ್ಕೆ ಇಳಿಯುವ ದುಡಿಯುವ ವರ್ಗದ ರಾಜಕೀಯ ಚಿಂತನೆ ಇಲ್ಲಿ ಮೂಡಿಬಂದಿದೆ. ಹೀಗೆ ದುಡಿಯುವ ವರ್ಗವು ತನ್ನ ಹಕ್ಕಿಗಾಗಿ ಹೋರಾಟಕ್ಕಿಳಿಯುವ ಆಲೋಚನೆಗಳನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಹಾಗೆಯೇ ದುಡಿಯುವ ವರ್ಗದ ಬಿಡುಗಡೆಗೆ ಅಂಬೇಡ್ಕರ್ ಶಕ್ತಿಯುತವಾದ ಚಿಂತನೆಯನ್ನು ಕಾದಂಬರಿಯಲ್ಲಿ ಆಳವಡಿಸಿಕೊಂಡಿದೆ.

### ೩.೪. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಮಾನಸಿಕ ಮತ್ತು ಭಾವನಾತ್ಮಕ ಸ್ಥಿತಿಗತಿ

ಕಾದಂಬರಿ ಸಾಹಿತ್ಯದಲ್ಲಿ ದುಡಿಯುವ ವರ್ಗದ ಮಾನಸಿಕ ಮತ್ತು ಭಾವನಾತ್ಮಕ ಸ್ಥಿತಿಗಳನ್ನು ಸೂಕ್ಷ್ಮವಾಗಿ ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ. ಅದರಲ್ಲಿ ಒಂದು ಕಾದಂಬರಿ ಕಟ್ಟಿಕೊಡುವ ಮಾನಸಿಕ ಮತ್ತು ಭಾವನಾತ್ಮಕ ಸ್ಥಿತಿಗತಿಗೂ ಮತ್ತೊಂದು ಕಾದಂಬರಿ ಕಟ್ಟಕೊಡುವ ಮಾನಸಿಕ ಮತ್ತು ಭಾವನಾತ್ಮಕ ಸ್ಥಿತಿಗತಿಗೂ ತುಂಬಾ ವ್ಯತ್ಯಾಸಗಳನ್ನು ಕಾಣಬಹುದು ಅದೇ ರೀತಿಯಲ್ಲಿ ಒಂದೇ ಕಾದಂಬರಿಯ ಒಳಗಿನ ಪಾತ್ರಗಳಲ್ಲಿ ಈ ಭಿನ್ನತೆಗಳನ್ನು ಗುರುತಿಸಬಹುದು. ಅದರಲ್ಲಿಯೂ ಪಾತ್ರಗಳ ಸಂಭಾಷಣೆಯ ರೂಪದಲ್ಲಿ, ನಿರೂಪಕರ ನಿರೂಪಣೆಯ ಕ್ರಮದಲ್ಲಿ ಹಾಗೂ ಕೆಲವು ಪಾತ್ರಗಳ ಸ್ವಗತದ ವಿನ್ಯಾಸದಲ್ಲಿ ಒಡಮೂಡಿದೆ. ಕಾದಂಬರಿಯೊಳಗಿನ ವ್ಯಕ್ತಿಗಳ ಇಲ್ಲವೇ ಪಾತ್ರಗಳ ಸಾಂದರ್ಭಿಕ ವರ್ತನೆಗಳ ಶೋಧ ಮಾತ್ರವಾಗಿರದೆ ಅದು ಪರೋಕ್ಷವಾಗಿ ಸಮುದಾಯಗಳ ಪಾರಂಪರಿಕ ಬದುಕಿನ ಹಲವು ನಂಬಿಕೆಗಳನ್ನು, ಅಪೇಕ್ಷೆಗಳನ್ನು, ಹಂಬಲಗಳನ್ನು, ಅನುಮಾನಗಳನ್ನು ಮತ್ತು ಪರೋಕ್ಷ ವಿಧಾನದ ಅಸಹನೆ ಹಾಗೂ ಪ್ರತಿರೋಧಗಳನ್ನು ಒಳಗೊಂಡಿರುವುದನ್ನು ಗುರುತಿಸಬಹುದು. ಹಾಗೆಯೇ ದುಡಿಯುವ ವರ್ಗದ ಭೌತಿಕ ಸ್ಥಿತಿಗತಿಗೂ ಅದರ ಭಾವನಾತ್ಮಕ ಸ್ಥಿತಿಗತಿಗೂ ಇರುವ ಇಲ್ಲವೇ ಏರ್ಪಡುವ ವೈರುಧ್ಯತೆಯ ಆಯಾಮವನ್ನು ಪ್ರಧಾನವಾಗಿ ಇಲ್ಲಿ ಗುರುತಿಸಲಾಗುತ್ತದೆ.

'ಚೋಮನ ದುಡಿ' ಕಾದಂಬರಿಯಲ್ಲಿ ಚೋಮನು ಶ್ರಮಜೀವಿ ಸಂಕಪ್ಪಯ್ಯನ ಮನೆಯ ಜೀತದ ಆಳಾಗಿ ದುಡಿಯುತ್ತಿದ್ದಾನೆ. ಆದ್ದರಿಂದ ಇಲ್ಲಿ ಮಾಲೀಕ ಮತ್ತು ಆಳುಗಳ ಸಂಬಂಧಗಳು ಏರ್ಪಟ್ಟಿವೆ. ಈ ಸಾಮಾಜಿಕ ಅಸಮಾನತೆಯನ್ನು ಕಾದಂಬರಿ ಗುರುತಿಸುವುದರ ಜೊತೆಗೆ ಅದನ್ನು ಸಮಾಜೀಕರಿಸುವ ಪ್ರಯತ್ನ ಮಾಡುತ್ತಿದೆ. ಚೋಮ ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾಗಿ ತನ್ನದಲ್ಲದ ಭೂಮಿಯಲ್ಲಿ ದುಡಿಯುವ ಶ್ರಮಜೀವಿ. ಇವನು ಏನೇ ದುಡಿದರೂ ಹಸಿವನ್ನು ನೀಗಿಸುವಷ್ಟು ದುಡಿಮೆಯ ಪ್ರತಿಫಲ ಸಿಗುತ್ತಿರಲಿಲ್ಲ. ಹಬ್ಬದ ದಿನ ಉಣ್ಣಲು ಏನೂ

ಉಳಿದಿರಲಿಲ್ಲ, ಅದರೂ ಜಾತ್ರೆಗೆ ಹೋಗಿ ಸಂಜೆಯಾದ ಬಳಿಕ ಅವನ ಸ್ನೇಹಿತರು ಸೇಂದಿ ಅಂಗಡಿಗೆ ಹೋದರು. "ಒಬ್ಬಿಬ್ಬರು ಚೋಮನನ್ನು ಜತೆಗೆ ಕರೆದರು. ಆದರೆ ಪಾಪದ ಚೋಮನಿಗೆ" ನನ್ನಲ್ಲಿ ಇಲ್ಲದುದಕ್ಕೆ ಅವರ ದಾನವನ್ನು ಕೊಳ್ಳುವುದೇ? ಎಂದು ತೋರಿತು. ಆದ್ದರಿಂದ "ನನ್ನದು ಆಗಿದೆ" ಎಂದನು. ಇಲ್ಲಿ ಚೋಮನ ಸ್ವಾಭಿಮಾನವನ್ನು ಗುರುತಿಸಬಹುದು. ಆದರೆ ಸಂಕಪ್ಪಯ್ಯ ಅವನ ಶ್ರಮದ ಮೌಲ್ಯವನ್ನು ವಂಚಿಸಿ ಶ್ರೀಮಂತನಾಗಿದ್ದಾನೆ. ಅವನು ಚೋಮನನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುವುದರ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಮುಂದುವರಿದಿದ್ದಾನೆ.

ಚೋಮನು ಸಾಕಿರುವ ಕರುಗಳು ಎತ್ತುಗಳಾಗಿವೆ. ಆದ್ದರಿಂದ ಭೂಮಿಯನ್ನು ಗೇಣಿಗಾಗಿ ಕೇಳುವ ಪ್ರಯತ್ನವನ್ನು ಮಾಡಿದ್ದಾನೆ. ತನ್ನ ಭಾವನೆಗಳನ್ನು ತನ್ನ ಮಕ್ಕಳಿಗೆ ಹೇಳುತ್ತಾನೆ. ಆದರೆ ಅವನ ಮಕ್ಕಳೇ ಅವನ ಮನಸ್ಸಿನ ಭಾವನೆಗಳನ್ನು ಧಿಕ್ಕರಿಸುವುದನ್ನು ಕಾಣಬಹುದು. ಅವರು ಸಂಕಪ್ಪಯ್ಯನ ಬಳಿ ಮೂರು ಭಾರಿ ಗೇಣಿಗಾಗಿ ಭೂಮಿ ಕೇಳುತ್ತಾನೆ. ಆದರೆ ಆಳುವ ವರ್ಗ ಅವನ ಆಶಯಗಳಿಗೆ ಧಕ್ಕೆ ತರುತ್ತದೆ. ಗೇಣಿಗಾಗಿ ಭೂಮಿಯನ್ನು ಉಳುಮೆ ಮಾಡುವ ಚೋಮನ ಭಾವನೆಗಳು ಆಳುವ ವರ್ಗದ ಶೋಷಣೆಯಲ್ಲಿ ಕೊನೆಗೊಳ್ಳುತ್ತಿರುವುದನ್ನು ಕಾದಂಬರಿಯು ನಿರೂಪಿಸುತ್ತದೆ. ಗೇಣಿಗಾಗಿ ಭೂಮಿಯನ್ನು ಕೊಡಲಿಕ್ಕೆ ಬುರುವುದಿಲ್ಲ ಎಂದು ಸಂಕಪ್ಪಯ್ಯ ಹೇಳುವುದು ಮತ್ತು ಅವನ ತಾಯಿ "ಅಬ್ಬಾ ಈ ಹೊಲೆಯರಿಗೆ ಬಂದ ಸೊಕ್ಕೆ" ಎಂದು ಪ್ರತಿಕ್ರಿಯೆ ತೋರುವುದು ಆಳುವ ವರ್ಗದ ರಾಜಕೀಯ ಮನೋಭಾವವಾಗಿದೆ, ಆದರೆ ಚೋಮನು ಕ್ರಿಶ್ಚಿಯನ್ನನಾಗಿ ಮತಾಂತರನಾಗಿ ಭೂಮಿಯಲ್ಲಿ ಉಳುಮೆ ಮಾಡುವ ಕನಸು. ಆದರೆ ಅವನ ಭಾವನೆಗೆ ಕಾದಂಬರಿಯಲ್ಲಿ ನಿಯಂತ್ರಣ ಇದೆ. ಅಂದರೆ ಮತಾಂತರವಾಗಿ ಭೂಮಿ ಪಡೆದುಕೊಳ್ಳುವುದು ಕೂಡ ಈ ಆಳುವ ವ್ಯವಸ್ಥೆಗೆ ಸಹಿಸಲು ಸಾಧ್ಯವಾಗಿಲ್ಲ. ಅದರಿಂದ ಸಾಲದ ನೆಪದಲ್ಲಿ ಅವನನ್ನು ಬಂಧಿಯಾಗಿಸುತ್ತದೆ. ಅದರೆ ಅವನ ನಂತರದ ತಲೆಮಾರು ತನ್ನ ಹಳೆಯ ಊಳಿಗಮಾನ್ಯಶಾಹಿ ವ್ಯವಸ್ಥೆಯ ಮೌಲ್ಯಗಳನ್ನು ಮುರಿದು ಹೋಗುವ ಪ್ರಕ್ರಿಯೆಯನ್ನು ಕಾಣಬಹುದು. ಹಾಗೆ ಜಾತಿ ಕಾರಣಕ್ಕಾಗಿ ಗೇಣಿಗಾಗಿ ಭೂಮಿ ವಂಚನೆಗೆ ಒಳಗಾದ ಚೋಮನು ಮತ್ತು ಆಳುವ ವರ್ಗದ ಸಂಬಂಧಗಳು ಶೋಷಕ ಶೋಷಿತ ಸಂಬಂಧಗಳಾಗಿ ಮುಂದುವರಿ ಯುತ್ತವೆ. ಆದರೆ ಇಲ್ಲಿ ದುಡಿಯುವ ವರ್ಗದ ಭಾವನಾತ್ಮಕ ಮತ್ತು ಮಾನಸಿಕ ಸ್ಥಿತಿಗತಿಗಳು ಅವರ ಹಕ್ಕುಗಳನ್ನು ಪ್ರತಿಪಾದಿಸುವುದಿಲ್ಲ ಬದಲಿಗೆ ಇರುವ ಸ್ಥಿತಿಯನ್ನು ಮುಂದುವರಿಸುವ ಭಾವನೆಗಳು ಕಾಣುತ್ತವೆ. ಹಾಗೆಯೇ ದುಡಿಯುವ ವರ್ಗದ ವರ್ಗಪ್ರಜ್ಞೆಯನ್ನು ಅವರ ಹಕ್ಕುಗಳನ್ನು ಕಾದಂಬರಿಯಲ್ಲಿ ಪ್ರತಿಪಾದಿಸುತ್ತಲೇ ಅವರನ್ನು ಅಳುವ ವರ್ಗದ ಅಲೋಚನೆಗೆ ಒಳಪಡಿಸಿರುವ ನಿರೂಪಣೆ ಕಾಣುತ್ತೇವೆ.

ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ದುಡಿಯುವ ವರ್ಗವು ತನ್ನ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡು ಭೂಮಾಲೀಕರ ಭೂಮಿಯಲ್ಲಿ ದುಡಿಯುತ್ತಿರುವ ಶ್ರಮಜೀವಿಗಳಾಗಿದ್ದಾರೆ. ಈ ಕಾರಣದಿಂದ ಭೂಮಾಲೀಕ ವರ್ಗಕ್ಕೂ ಮತ್ತು

ಈ ದುಡಿಯುವ ವರ್ಗಕ್ಕೂ ಭೌತಿಕ ಮತ್ತು ಭಾವನಾತ್ಮಕ ಸಂಬಂಧಗಳು ಏರ್ಪಟ್ಟಿವೆ. ತನ್ನ ಬದುಕನ್ನು ನಿರ್ದಿಷ್ಟಗೊಳ್ಳಲು ಕೆಳವರ್ಗದ ಜನರು ಈ ಭೂಮಾಲೀಕ ವರ್ಗದ ಮೇಲೆ ಅವಲಂಬಿತರಾಗಿದ್ದಾರೆ. ಅದೇ ರೀತಿ ಭೂಮಾಲೀಕ ವರ್ಗವು ಕೆಳವರ್ಗದ ಜನರ ಶ್ರಮದ ಪ್ರತಿಫಲವನ್ನು ವಂಚಿಸಿ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ಬರುತ್ತಿದ್ದಾರೆ. ಈ ಎರಡು ವರ್ಗಗಳ ನಡುವೆ ಶೋಷಕ ಮತ್ತು ಶೋಷಿತ ಸಂಬಂಧಗಳೂ ಇವೆ. ಹಾಗೆಯೇ ಭಾವನಾತ್ಮಕವಾಗಿ ಈ ಎರಡು ವರ್ಗಗಳ ನಡುವೆ ಹೊಂದಾಣಿಕೆ ಕಾಣಿಸುತ್ತದೆ. ಈ ಎರಡು ಕಾದಂಬರಿಯಲ್ಲಿ ಬರುವ ದಲಿತರು ಮುಗ್ಧರು, ಅನಕ್ಷರಸ್ಥರು ಜೊತೆಗೆ ಮೇಲುವರ್ಗದ ಶೋಷಣೆಯ ಅರಿವು ಕೂಡ ಇಲ್ಲದ ಪಾತ್ರದಲ್ಲಿ ಕಂಡುಬರುತ್ತಾರೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಜಾತಿ, ಉಪಜಾತೀಯತೆ ದಟ್ಟ ಚಿತ್ರಣವಿದೆ. ಮೇಲುಜಾತಿಗಳು ಕೆಳಜಾತಿ ಸಮುದಾಯವನ್ನು ಅಸ್ಪೃಶ್ಯರಾಗಿ ಕಾಣುತ್ತಾರೆ. ಗುತ್ತಿ ಒಮ್ಮೆ ಐತನ ಗುಡಿಸಲಿನಲ್ಲಿ ಮಲಗಬೇಕಾಗಿ ಬಂದಾಗ ಪೀಂಚಲು ತನ್ನ ಗಂಡನನ್ನು ಕುರಿತು "ಇವತ್ತೊಂದು ದಿವಸ ಗುತ್ತಿಯ ಸಮೀಪದಲ್ಲಿ ದೂರ ಮಲಗಿದರಾಯ್ತು ಎನ್ನುತ್ತಾಳೆ. ಅದಕ್ಕೆ ಐತ ಥೂ ಥೂ ಥೂ ನಾನು ಒಲ್ಲೆ, ಹೊಲೆಯನ ಬಳಿ ಮಲಗುವುದೇ?"[೨೧] ಎಂದು ಅಸಹ್ಯಪಡುತ್ತಾನೆ. ಇಲ್ಲಿ ಕೆಳಜಾತಿಯನ್ನು ಕೀಳಾಗಿ ಕಾಣುವ ಅಸ್ಪೃಶ್ಯರಾಗಿ ಕಾಣುವ ಮನೋಭಾವ ಮತ್ತೊಂದು ಜಾತಿಯಲ್ಲಿ ಕಾಣುತ್ತದೆ. ಹಾಗೆಯೇ ಹೊಲೆಯ ಸಮುದಾಯದ ನಾಯಿಗುತ್ತಿಯು ಪೊಲೀಸರಿಂದ ತಪ್ಪಿಸಿಕೊಂಡು ಹೋಗುತ್ತಿರುವಾಗ ತನ್ನ ಸ್ಥಿತಿಯನ್ನು ಕುರಿತು ಯೋಚಿಸುತ್ತಾ ನಾನು ಹೊಲೆಯರವನಲ್ಲದೆ ಬ್ಯಾರೆ ಜಾತಿಗೆ ಸೇರಿದವನಾಗಿದ್ದರೆ ಹೀಗಾಗುತ್ತಿತ್ತೆ ಎಂದುಕೊಳ್ಳುತ್ತಾನೆ. ಮುಂದುವರಿದು ಕಡೆ ಪಕ್ಷ ತಾನು ಕೆಳಸ್ತರವನೋ ಸಾಬರ ಜಾತಿಯವನೋ ಆಗಿದ್ದರೂ ತನಗೆ ಈ ಸ್ಥಿತಿ ಬರುತ್ತಿರಲಿಲ್ಲ ಎನ್ನುತ್ತಾನೆ.[೨೨] ಇಲ್ಲಿ ಜಾತಿಯ ಶೋಷಣೆಯನ್ನು ಕುರಿತು ಸಂಕಷ್ಟಪಡುತ್ತಾನೆ. ಜೊತೆಗೆ ಈ ಜಾತಿಯ ಚೌಕಟ್ಟನ್ನು ಮುರಿಯುವ ಆಲೋಚನೆ ಇದೆ. ಆದರೆ ಕಾದಂಬರಿಯು ಇದರ ಮುಖಾಂತರ ಪ್ರಕ್ರಿಯೆನ್ನು ನಿಯಂತ್ರಿಸುವುದು ಈ ಸನ್ನಿವೇಶದಿಂದ ತಿಳಿಯಬಹುದು.

ಕಾನೂರು ಸುಬ್ಬಮ್ಮ ಹೆಗ್ಗಡಿತಿಯಲ್ಲಿ ಗೌಡರ ಮನೆ ಪಾಲಾಗುವಾಗ ಜೀತಗಾರರೂ ವಸ್ತುಗಳಂತೆ ಪಾಲಾಗುವುದನ್ನು ಕಾಣುತ್ತೇವೆ. ಇಲ್ಲಿ ಮೇಲುವರ್ಗ ಮತ್ತು ದುಡಿಯುವ ವರ್ಗಗಳ ನಡುವೆ ಭಾವನಾತ್ಮಕ ಸಂಬಂಧಗಳ ಪ್ರಶ್ನೆಯೇ ಮೇಲ್ವರ್ಗದವರಿಗೆ ಇಲ್ಲ. ಕೆಳವರ್ಗದವರಿಗೆ ಆಯ್ಕೆಯ ಸ್ವಾತಂತ್ರ್ಯಕ್ಕೂ ಕೂಡ ಅವಕಾಶ ಕೊಡದ ಆಳುವ ವರ್ಗ ಜೀತಗಾರರಿಗೆ ತನ್ನದೇ ಆದ ಬದುಕು ಹಾಗೂ ಭಾವನೆಗಳಿರಬಹುದೆಂಬುದನ್ನು ಭೂಮಾಲೀಕ ವರ್ಗ ಒಪ್ಪಿಕೊಳ್ಳುವುದಿಲ್ಲ. ಹೀಗೆ ಆಳುವ ವರ್ಗವು ದುಡಿಯುವ ಜನರನ್ನು ಶೋಷಣೆ ಮಾಡುವುದರ ಜೊತೆಗೆ ಅವರ ಮಾನಸಿಕ ಮತ್ತು ಭಾವನಾತ್ಮಕ ಅಭಿವ್ಯಕ್ತಿಯನ್ನು ನಿಯಂತ್ರಿಸುತ್ತಿರುವ ಸ್ಥಿತಿಯನ್ನು ಈ ಎರಡು ಕಾದಂಬರಿಗಳು ನಿರೂಪಿಸುತ್ತಿವೆ. ಹಾಗೆಯೇ ಇಲ್ಲಿ ದುಡಿಯುವ ವರ್ಗವು ಮೇಲುವರ್ಗದ ಶೋಷಣೆಯನ್ನು ನಿರಾಕರಿಸಿರುವ ಭಾವನೆಗಳು ಗೌಣವಾಗಿರುವುದನ್ನು ಕಾಣುತ್ತೇವೆ.

'ಹೇಮಾವತಿ' ಕಾದಂಬರಿಯಲ್ಲಿ ಅಸ್ಪೃಶ್ಯರಾಗಿ ಹೊಲೆಯ ಸಮುದಾಯದವರನ್ನು ಚಿತ್ರಿಸಲಾಗಿದೆ. ಅದೇ ರೀತಿಯಲ್ಲಿ ಭೂಮಾಲೀಕರಾಗಿ ಬ್ರಾಹ್ಮಣ ಸಮುದಾಯದ ಚಿತ್ರಣವನ್ನು ಕಾಣುತ್ತೇವೆ. ಇಲ್ಲಿ ದಲಿತ ಸಮುದಾಯವು ಮೇಲುವರ್ಗದವರ ಭೂಮಿಯಲ್ಲಿ ದುಡಿಯುತ್ತಿರುವುದರಿಂದ ಈ ಎರಡು ವರ್ಗಗಳಿಗೆ ಒಂದಕ್ಕೊಂದು ಭೌತಿಕ ಮತ್ತು ಭಾವನಾತ್ಮಕ ಸಂಬಂಧ ಇದೆ. ಮೇಲ್ಜಾತಿಯ ಪುರುಷರು ಕೆಳಜಾತಿಯ ಹೆಣ್ಣುಗಳನ್ನು ಭೋಗದ ವಸ್ತುವಾಗಿ ಕಾಣುತ್ತಿದರು. ಆದರೆ ಆಧುನಿಕತೆಯ ಬೆಳವಣಿಗೆಯಿಂದ ಸಂಪ್ರದಾಯಗಳಲ್ಲಿ ಅನೇಕ ಬದಲಾವಣೆಗಳು ನಡೆಯುತ್ತಿವೆ ಎಂಬುದನ್ನು ಈ ಕಾದಂಬರಿಯು ನಿರೂಪಿಸುತ್ತದೆ. ಹರಿಜನೋದ್ಧಾರ ಕಾರ್ಯಕ್ರಮಗಳ ಪ್ರಭಾವದಿಂದ ಸವರ್ಣೀಯ ಹಾಗೂ ದಲಿತರ ನಡುವಿನ ವಿವಾಹಗಳು ನಡೆದಿರುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಇಲ್ಲಿ ಬರುವ ಮೇಲ್ಜಾತಿಯ 'ವಾಸು' ಆಧುನಿಕ ಶಿಕ್ಷಣ ಪಡೆದಾತ. ಅದರ ಫಲವಾಗಿ ಗಾನ ಶಾರದೆಯ ಸೌಂದರ್ಯ, ಸಂಗೀತದ ಪ್ರೌಢಿಮೆ ಹಾಗೂ ಕೀರ್ತಿಗೆ ಮರುಳಾದವನು. ಗಾಂಧೀವಾದದಿಂದ ಪ್ರೇರಣೆ ಹೊಂದಿ ಅಸ್ಪೃಶ್ಯತ್ಯಾ ನಿವಾರಣೆಗೆ ದುಡಿಯಬೇಕೆಂದು ನಿಶ್ಚಿಯಿಸಿ ಅಂತರ್‌ಜಾತೀಯ ವಿವಾಹಕ್ಕೆ ಮುಂದಾಗುತ್ತಾನೆ. ಆದರೆ ಅವನ ತಂದೆಯ ಭಾವನೆಗಳು "ಹೊಲೆಯರ ಕಾಳ ನನ್ನ ಬೀಗ, ಭೇಷ್, ಭೇಷ್ ನನ್ನ ಮನೆಯ ಸತ್ತ ದನಗಳನ್ನೆಲ್ಲಾ ತಿಂದವನು ಕಾಳನೇ. ಈ ಗಾನಶಾರದೆಯೂ ತಿಂದಿರಬೇಕು. ಇವಳನ್ನು ಮದುವೆಯಾಗುವವನು ಕಶ್ಯಪ, ಕಾಶ್ಯಪ, ನಿದ್ರವ, ನಿದ್ರೈಪ, ಕೀಪ, ರೈವ ಸಪ್ತರ್ಷ ಪ್ರವರಾನ್ವಿತರಾದ ಅಗ್ರಹಾರದ ಪುರೋಹಿತ ಸುಬ್ಬಾಭಟ್ಟರ ಮಗ ವಾಸು... ಆದರೆ ಗಾನಶಾರದೆಗೆ ಯಾವ ಪ್ರವರ ಹೇಳುತ್ತೀರಿ. ಕಾಳನ ಅಪ್ಪ ಕಾಳ, ಅವನಪ್ಪ ಕಾಳ; ಸಮಾಜ ಸುಧಾರಣೆಯಂತೆ ಸುಧಾರಣೆ. ಕಲಿಯುಗ ಪ್ರಾರಂಭವಾಗಿದೆ. ಆದ್ದರಿಂದಲೇ ಹೀಗೆ ವರ್ಣಸಂಕರ"[೨೩] ಎಂದು ಪ್ರತಿರೋಧವನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಹಿರಿಯ ತಲೆಮಾರಿನಲ್ಲಿ ಈ ಬಗೆಯ ಶೋಷಣೆಗಳಿವೆ. ಆದರೆ ಅವನ ನಂತರದ ಕಾಲವು ಸ್ವಲ್ಪ ಸಡಿಲತೆಯಿಂದ ಕೂಡಿದೆ ಎಂಬುದನ್ನು ಅರ್ಥೈಸಿಕೊಳ್ಳಬಹುದು.

ಆದರೆ ದುಡಿಯುವ ವರ್ಗದ ಪಾತ್ರಗಳನ್ನು ಗಮನಿಸಿದರೆ, ಇಲ್ಲಿ ಬರುವ ಹೊಲೆಯರೆಲ್ಲರೂ ಭೂರಹಿತರೇ ಆಗಿದ್ದಾರೆ. ಎಲ್ಲ ದಲಿತರೂ ಸವರ್ಣೀಯರ ಭೂಮಿಯಲ್ಲಿ ದುಡಿಯುವ ಜೀತಗಾರರಾಗಿ, ಕೂಲಿಯಾಳುಗಳಾಗಿ ದುಡಿಯಬೇಕು. ಇಲ್ಲಿ ಬರುವ ಕಾಳನ ಪಾತ್ರ ಶ್ರೀನಿವಾಸ ಪೆರುಮಾಳರ ಖಾಯಂ ಜೀತಗಾರ. ಈ ಕಾಳನ ಸ್ಥಿತಿಯನ್ನು ಕುರಿತು "ಪಾಪ ಈ ಪ್ರಾಣಿ ಎಷ್ಟು ತಲೆಮಾರಿನಿಂದ ಹೀಗೆ ನಮಗಾಗಿ ದುಡಿಯುತ್ತಿದ್ದಾನೆ. ಇವನು ದುಡಿಯುವುದು, ಇವರ ಪ್ರತಿಫಲ ನಾವು ಅನುಭವಿಸುವುದು ಹೀಗೆಯೇ ಆಯಿತಲ್ಲ"[೨೪] ಎಂದು ಆನಂದ ಮರುಗುತ್ತಾನೆ. ಇಲ್ಲಿ ಮೇಲುಜಾತಿಯ ಭಾವನೆಗಳನ್ನು ಬದಲಾಯಿಸುವ ಒತ್ತಡ ಕಾದಂಬರಿಯ ಆಳದಲ್ಲಿ ಕಾಣಿಸುತ್ತದೆ. ಆದರೆ ದಲಿತರ ಮನಪರಿವರ್ತನೆ ಪ್ರಶ್ನೆಯು ಜಾಗ್ರತಿಯ ಸಂಕೇತವಾಗಿದೆ. ದೇವಾಲಯ ಪ್ರವೇಶ ಅಂತರ್‌ಜಾತಿ ವಿವಾಹ ಮುಂತಾದ ಸುಧಾರಣೆಯ ಹೆಸರಲ್ಲಿ ಜಾತಿಯ ಶೋಷಣೆಯನ್ನು ನಿರಾಕರಿಸುವ ಕಾದಂಬರಿ ಅವರ ಹಕ್ಕುಗಳ ವಿಷಯದಲ್ಲಿ ಮೌನವಹಿಸುತ್ತದೆ.

## ಕೊನೆ ಟಿಪ್ಪಣಿಗಳು

೧. ಭಂಡಾರಿ ಆರ್.ವಿ., ೨೦೦೩, **ಕನ್ನಡ ಕಾದಂಬರಿಗಳಲ್ಲಿ ವರ್ಣ ಮತ್ತು ವರ್ಗಸಂಘರ್ಷ**, ಶ್ರೀರಾಘವೇಂದ್ರ ಪ್ರಕಾಶನ, ಅಂಕೋಲ, ಪು. ೧೩.

೨. ಪುಟ್ಟಯ್ಯ ಬಿ.ಎಂ., ೨೦೦೮, **ಮುಖಾಮುಖಿ**, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪು. ೧೪೫.

೩. ನಿರಂಜನ, ೨೦೧೧, **ಚಿರಸ್ಮರಣೆ**, (೧೧ನೇ ಮುದ್ರಣ), ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು, ಪು. ೨೯.

೪. ಅದೇ, ಚಿರಸ್ಮರಣೆ. ಪು. ೩೩.

೫. ಅನಂತಮೂರ್ತಿ ಯು.ಆರ್., ೨೦೦೮, **ಸಂಸ್ಕಾರ**, ಅಕ್ಷರ ಪ್ರಕಾಶನ, ಸಾಗರ, ಹೆಗ್ಗೋಡು, ಪು. ೪೨.

೬. ದೇವನೂರ ಮಹಾದೇವ, **ಒಡಲಾಳ**, ನವ್ವಾಲೆ ಪ್ರಕಾಶನ, ಮೈಸೂರು, ಪು. ೪೬.

೭. ಭಂಡಾರಿ ಆರ್.ವಿ. ೧೯೮೪, **ಬೆಂಕಿಯ ಮಧ್ಯೆ**, ಬಂಡಾಯ ಪ್ರಕಾಶನ, ಅರೆ ಅಂಗಡಿ, ಹೊನ್ನಾವರ, ಪು. ೪.

೮. ಅದೇ, **ಬೆಂಕಿಯ ಮಧ್ಯೆ**, ಪು. ೪.

೯. ಪುಟ್ಟಯ್ಯ ಬಿ.ಎಂ., ೨೦೦೮, **ಕದಡು**, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ. ಪು. ೧೭೨.

೧೦. ನಾರಾಯಣ ಕೆ.ವಿ., ೨೦೧೦. **ತೊಂಡು ಮೇವು**(ಕಂತೆ ಮೂರು), ಬರಹ ಪಬ್ಲಿಷಿಂಗ್‌ಹೌಸ್, ಬೆಂಗಳೂರು, ಪು. ೧೭೦.

೧೧. ಬರಗೂರು ರಾಮಚಂದ್ರಪ್ಪ, ೨೦೦೫, **ಸಂಸ್ಕೃತಿ: ಶ್ರಮ ಮತ್ತು ಸೃಜನ ಶೀಲತೆ**, ಅಂಕಿತ ಪುಸ್ತಕ, ಬೆಂಗಳೂರು, ಪು. ೧೭೪.

೧೨. ಕುವೆಂಪು, ೧೯೯೭, **ಮಲೆಗಳಲ್ಲಿ ಮದುಮಗಳು**, ಉದಯರವಿ ಪ್ರಕಾಶನ, ಮೈಸೂರು, ಪು. ೫೯೯.

೧೩. ಅದೇ, ಪು. ೫೭೬.

೧೪. ಅನಂತ ಮೂರ್ತಿ ಯು.ಆರ್., ೧೯೭೭, (ದ್ವಿಮು.) **ಭಾರತೀಪುರ**, ಅಕ್ಷರ ಪ್ರಕಾಶನ, ಹೆಗ್ಗೋಡು, ಪು. ೨೬.

೧೫. ಶಿವರಾಮಯ್ಯ, ೧೯೯೩, **ಸಾಹಿತ್ಯ ಪರಿಸರ**, ವೈಚಾರಿಕ ಪುಸ್ತಕ ಮಾಲೆ, ಅನುವನಹಳ್ಳಿ(ಶಿವನಿ) ಚಿಕ್ಕಮಗಳೂರು, ಪು. ೧೩೭.

೧೬. ಚಂದ್ರಶೇಖರ, ೨೦೦೪, **ಕನ್ನಡದಲ್ಲಿ ದಲಿತ ಬಂಡಾಯ ಕಾದಂಬರಿಗಳು: ಒಂದು ಅಧ್ಯಯನ**, ಸ್ನೇಹ ಪ್ರಕಾಶನ, ಮೈಸೂರು, ಪು. ೮೭

೧೭. ಮುಳ್ಳೂರು ನಾಗರಾಜ್, ೧೯೯೨, **ಮರಣ ಮಂಡಲ ಮಧ್ಯದೊಳಗೆ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು. ೪೧.

೧೮. ನಿರಂಜನ, ೨೦೧೧, **ಚಿರಸ್ಮರಣೆ**, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು, ಪು. ೨೬.

***

ಅಧ್ಯಾಯ : ಮೂರು

# ಕಾದಂಬರಿಗಳಲ್ಲಿ ದುಡಿಯುವ ವರ್ಗ

---

೩.೧. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಆರ್ಥಿಕ ಸ್ಥಿತಿಗತಿ

೩.೨. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಸಾಮಾಜಿಕ ಸ್ಥಿತಿಗತಿ

೩.೩. ಕಾದಂಬರಿಗಳಲ್ಲಿ ದುಡಿಯುವ ವರ್ಗದ ರಾಜಕೀಯ ಸ್ಥಿತಿಗತಿ

೩.೪. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಮಾನಸಿಕ ಮತ್ತು ಭಾವನಾತ್ಮಕ ಸ್ಥಿತಿಗತಿ

ಅಧ್ಯಾಯ : ನಾಲ್ಕು

# ದುಡಿಯುವ ವರ್ಗ ಮತ್ತು ಆಳುವ ವರ್ಗದ ಸ್ವರೂಪ

ಕನ್ನಡ ಕಾದಂಬರಿ ಸಾಹಿತ್ಯವು ದುಡಿಯುವ ವರ್ಗ ಮತ್ತು ಆಳುವ ವರ್ಗಗಳ ಕುರಿತು ವಿವಿಧ ರೀತಿಯ ಸ್ವರೂಪಗಳನ್ನೊಳಗೊಂಡಿದ್ದು, ಅವುಗಳ ನಡುವಿನ ಸಂಬಂಧಗಳನ್ನು ತಿಳಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಈ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಸಂಬಂಧಗಳ ವಿನ್ಯಾಸಗಳು ಹೇಗೆ ಪ್ರತಿಬಿಂಬತವಾಗಿವೆ. ದುಡಿಯುವ ವರ್ಗದ ಸ್ಥಿತ್ಯಂತರಗಳ ಜೊತೆಗೆ ಆಳುವ ವರ್ಗ ಮತ್ತು ದುಡಿಯುವ ವರ್ಗಗಳ ನಡುವಿನ ಸಂಬಂಧಗಳ ಬಿಡುಗಡೆಯ ನೆಲೆಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

**೪.೧. ದುಡಿಯುವ ವರ್ಗ ಮತ್ತು ಆಳುವ ವರ್ಗದ ನಡುವಿನ ಸಂಬಂಧಗಳ ವಿನ್ಯಾಸಗಳು**

ಕಾದಂಬರಿ ಸಾಹಿತ್ಯವು ಆಳುವ ವರ್ಗದ ಹಾಗೂ ದುಡಿಯುವ ವರ್ಗದ ನಡುವಿನ ಸಂಬಂಧಗಳು ಹಾಗೂ ಅವರಲ್ಲಿ ನಡೆಯುವ ಸಂಘರ್ಷದ ಸಂಬಂಧಗಳನ್ನು ಹಾಗೂ ಶೋಷಣೆಯ ನಾನಾ ಮುಖಗಳನ್ನು ಕುರಿತು ವಿಶ್ಲೇಷಣೆ ಮಾಡಿವೆ. ದುಡಿಯುವ ವರ್ಗವು ಆಳುವ ವರ್ಗವಿಲ್ಲದೆ ಅಸ್ತಿತ್ವದಲ್ಲಿ ಇರುವುದಿಲ್ಲ. ಹಾಗೆಯೇ ಆಳುವ ವರ್ಗವು ಕೂಡ ದುಡಿಯುವ ವರ್ಗವಿಲ್ಲದೆ ಅಸ್ತಿತ್ವದಲ್ಲಿ ಇರುವುದಿಲ್ಲ. ಇವೆರಡೂ ವರ್ಗಗಳು ಪರಸ್ಪರ ಒಂದರ ಮೇಲೆ ಒಂದು ಅವಲಂಬನೆಯಾಗಿರುತ್ತವೆ. ಒಂದನ್ನು ಬಿಟ್ಟು ಒಂದಕ್ಕೆ ಅಸ್ತಿತ್ವವಿಲ್ಲ. ಆದ್ದರಿಂದ ಕಾದಂಬರಿಗಳಲ್ಲಿ ನಿರೂಪಿತವಾಗಿರುವ ದುಡಿಯುವ ವರ್ಗವನ್ನು ಸ್ವತಂತ್ರವಾದ ವಸ್ತು ಸಂಗತಿ ಎಂದು ನೋಡಲು ಬರುವುದಿಲ್ಲ. ಯಾಕೆಂದರೆ ಈ ದುಡಿಯುವ ವರ್ಗವು ಆಳುವ ವರ್ಗದೊಂದಿಗೆ ಸಂಬಂಧ ಹೊಂದಿರಲೇಬೇಕು.

ಇಲ್ಲಿ ಆಳುವ ವರ್ಗದಿಂದ ದುಡಿಯುವ ವರ್ಗದ ಮೇಲೆ ಆಗುತ್ತಿರುವ ಪರಿಣಾಮಗಳೇನು ಎಂಬುದರ ಹುಡುಕಾಟವಿರಬಹುದು. ಇಲ್ಲವೇ ಆಳುವ ವರ್ಗಕ್ಕೆ ದುಡಿಯುವ ವರ್ಗವು ಪ್ರತಿಕ್ರಿಯಿಸುವ ವಿಧಾನಗಳು ಯಾವುವು ಎಂಬುದರ ಹುಡುಕಾಟವಿರಬಹುದು. ಈ ಅಂಶಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

'ಚೋಮನ ದುಡಿ' ಕಾದಂಬರಿಯಲ್ಲಿ ದಲಿತವರ್ಗ ಹಾಗೂ ಭೂಮಾಲೀಕ ವರ್ಗಗಳು ನಿರೂಪಣೆಗೊಂಡಿದ್ದು ಇಲ್ಲಿ ದಲಿತ ವರ್ಗದ ಪ್ರತಿನಿಧಿ ಚೋಮನನ್ನು ಹಾಗೂ ಭೂಮಾಲೀಕ ವರ್ಗದ ಪ್ರತಿನಿಧಿಯಾದ ಸಂಕಪ್ಪಯ್ಯನು ಶೋಷಣೆ ಮಾಡುತ್ತಾನೆ. ಇಲ್ಲಿ ಚೋಮನು ಮತ್ತು ಸಂಕಪ್ಪಯ್ಯನ ನಡುವೆ ಆಳು ಮತ್ತು ಒಡೆಯನ ಸಂಬಂಧಗಳು ಏರ್ಪಟ್ಟಿವೆ. ಇಲ್ಲಿ ದಲಿತ ವರ್ಗದ ಚೋಮನು ಮೇಲುವರ್ಗದ ನೀತಿ, ನಿಯಮ, ಆಜ್ಞೆಗಳನ್ನು ಪಾಲಿಸಿಕೊಂಡು ಅವರ ಶೋಷಣೆಯನ್ನು ಒಪ್ಪಿಕೊಂಡು ಹೋಗುವ ಪಾತ್ರವಾಗಿ ಮೂಡಿಬಂದಿದೆ. ಇಲ್ಲಿ ಶೋಷಕ ಮತ್ತು ಶೋಷಿತ ಎಂಬ ಎರಡು ವರ್ಗಗಳ ಬದುಕು ಈ ಕಾದಂಬರಿಯಲ್ಲಿ ನಿರೂಪಣೆ ಯಾಗಿರುವುದನ್ನು ಕಾಣಬಹುದು. ಇಲ್ಲಿ ಶೋಷಕ ವರ್ಗವಾಗಿ ಸಂಕಪ್ಪಯ್ಯ ಮನ್ವೇಲ ಬಿರುಮನನ್ನು ಗುರುತಿಸಬಹುದು. ಹಾಗೆಯೇ ಶೋಷಿತ ವರ್ಗವಾಗಿ ಚೋಮನು ಮತ್ತು ಅವನ ಕುಟುಂಬದವರು ನಿರೂಪಣೆಗೊಂಡಿದೆ. ಹೀಗೆ ಉಳ್ಳವರು ಇಲ್ಲದವರ ಮೇಲೆ ನಡೆಸುವ ದೌರ್ಜನ್ಯ ಅಥವಾ ಶೋಷಣೆಯ ಪರಿಣಾಮವು ಈ ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಇಲ್ಲಿ ದಲಿತ ವರ್ಗ ಎಂದು ಕೂಡಲೇ ನಮಗೆ ಸಾಮಾನ್ಯವಾಗಿ ಅನಿಸುವುದು. ಆರ್ಥಿಕ, ಸಾಮಾಜಿಕವಾಗಿ ಶೋಷಣೆ ಒಳಗಾದಿರುವ ಶ್ರಮಜೀವಿ ವರ್ಗವಾಗಿ ಗ್ರಹಿಸುವುದು. ಯಾಕೆಂದರೆ ಇದು ಅಸಮಾನತೆ, ಶೋಷಣೆ, ದಮನ, ದಬ್ಬಾಳಿಕೆಗೆ ಒಳಗಾಗಿರುವ ವರ್ಗವಾಗಿದೆ. ಈ ಕಾದಂಬರಿಯಲ್ಲಿ ದುಡಿಯುವ ವರ್ಗ ಮತ್ತು ಆಳುವ ವರ್ಗಗಳ ನಡುವಿನ ಸಂಬಂಧದ ವಸ್ತುವಿಷಯವನ್ನು ಕೇಂದ್ರಪ್ರಜ್ಞೆಯಲ್ಲಿ ಚರ್ಚಿಸಲಾಗಿದೆ. ಮೇಲುವರ್ಗ ಕೆಳವರ್ಗದವರನ್ನು ಶೋಷಣೆ ಮಾಡುವುದನ್ನು ಈ ಕಾದಂಬರಿಯ ಆಳು-ಒಡೆಯರ ಸಂಬಂಧದಲ್ಲಿ ಮನಮುಟ್ಟುವಂತೆ ಕಾದಂಬರಿಕಾರರು ಚಿತ್ರಿಸಿದ್ದಾರೆ. ಈ ಮೂಲಕ ಸಮಾಜದಲ್ಲಿನ ವರ್ಗಶ್ರೇಣೀಕರಣ ಜಾತಿಶ್ರೇಣೀಕರಣ ಹಾಗೂ ಅಸಮಾನತೆ, ಶೋಷಣೆಯ ಮತ್ತು ಜೀತದ ಕ್ರೂರಪರಿಸ್ಥಿತಿಯನ್ನು ಚಿತ್ರಿಸುತ್ತದೆ. ಕಾದಂಬರಿಯಲ್ಲಿ ಚೋಮನು ತನ್ನದಲ್ಲದ ಭೂಮಿಯಲ್ಲಿ ದುಡಿಯುವಾತ. ಆದ್ದರಿಂದ ಭೂಮಾಲೀಕ ವರ್ಗದ ಮೇಲೆ ಅವಲಂಬಿತನಾಗಿದ್ದಾನೆ. ಅದೇ ರೀತಿಯಲ್ಲಿ ಸಂಕಪ್ಪಯ್ಯ ಚೋಮನ ಶ್ರಮವನ್ನು ದೋಚುವುದರ ಮೂಲಕ ದುಡಿಯುವ ವರ್ಗದ ಮೇಲೆ ಅವಲಂಬಿತನಾಗಿದ್ದಾನೆ. ಆದರೆ ಈ ಎರಡು ವರ್ಗಗಳ ನಡುವೆ ಸಹಬಾಳ್ವೆ ಹೊಂದಾಣಿಕೆ ಇಲ್ಲ. ಬದಲಿಗೆ ಇವುಗಳ ಮಧ್ಯೆ ಶೋಷಕ-ಶೋಷಿತ ಸಂಬಂಧ ಇರುವುದರಿಂದ ಈ ವರ್ಗಗಳ ಮಧ್ಯೆ ಘರ್ಷಣೆ, ಪ್ರತಿರೋಧ ಇರುತ್ತವೆ. ಆದರೆ ಕಾದಂಬರಿಯಲ್ಲಿ ದುಡಿಯುವ ವರ್ಗವು ಶೋಷಣೆಯನ್ನು ಪ್ರತಿಭಟಿಸದೆ ಒಪ್ಪಿಕೊಳ್ಳುತ್ತದೆ. ಜೊತೆಗೆ ಇಲ್ಲಿ ಪ್ರತಿಭಟನೆ, ತನ್ನ ಸಿಟ್ಟನ್ನು ದುಡಿ ಬಾರಿಸುವುದರ ಜೊತೆಗೆ ವ್ಯಕ್ತವಾಗುತ್ತಿದೆ ಹೊರತು ನೇರವಾಗಿ ಆಳುವ ವರ್ಗಗಳ ನಡುವೆ ಮುಖಾಮುಖಿಯಾಗುವುದಿಲ್ಲ. ಕಾದಂಬರಿಯಲ್ಲಿ ಮೂರು ಬಾರಿ ಗೇಣಿಗಾಗಿ ಭೂಮಿ ಕೇಳಿದರೂ ಕೊಡದೆ ಇರುವ ಆಳುವ ವರ್ಗವು ಇದೆ. ಆದರೆ ಗೇಣಿಗಾಗಿ ಭೂಮಿ ಕೇಳುವ ಚೋಮನ ಉಳುಮೆ ಮಾಡುವ ಕನಸಿನ ಆಶೆಯ ಮೂಲಕ ಆಳುವ ವರ್ಗದ ಶೋಷಣೆಗೆ ಬಲಿಯಾಗುವುದನ್ನು ಕಾದಂಬರಿಯು ನಿರೂಪಿಸುತ್ತದೆ. ಈ ಮೂಲಕ ಕನ್ನಡ

ಕಥಾಸಾಹಿತ್ಯದಲ್ಲಿ ದುಡಿಯುವ ವರ್ಗದ ಭೂಮಿಯ ಹಕ್ಕನ್ನು ಕುರಿತು ಅಭಿವ್ಯಕ್ತಿಸಿರುವ ಕಾದಂಬರಿಯಾಗಿ ಇದನ್ನು ಗುರುತಿಸಬಹುದು.

ಒಟ್ಟಾರೆಯಾಗಿ ಕಾದಂಬರಿಯಲ್ಲಿ ವರ್ಗ ವೈರುಧ್ಯತೆಗಳು ನೇರವಾಗಿ ಮುಖಾಮುಖಿಯಾಗದೇ ಇದ್ದರೂ ಕಾದಂಬರಿಯ ಆಳದಲ್ಲಿ ಶೋಷಕ ವ್ಯವಸ್ಥೆಯ ವಿರುದ್ಧ ಧ್ವನಿ ಮುಳುಗುತ್ತಿರುವುದನ್ನು ಕಾಣುತ್ತೇವೆ. ಹಾಗೆಯೇ ಚೋಮನು ಮೇಲುವರ್ಗದ ಶೋಷಣೆಯನ್ನು ಎದುರಿಸಲು ಆಗದೇ ಈ ಎರಡು ವರ್ಗಗಳ ನಡುವೆ ಪೋಷಕ ಮತ್ತು ಪೋಷಿತ ಸಂಬಂಧಗಳಲ್ಲಿ, ಬದಲಿಗೆ ಶೋಷಕ ಮತ್ತು ಶೋಷಿತ ಸಂಬಂಧಗಳು ಭೂಮಾಲೀಕ ಮತ್ತು ಆಳುಗಳ ಭೂಹೀನ ಮತ್ತು ಭೂಮಾಲೀಕ, ಮೇಲುಜಾತಿ ಮತ್ತು ಕೆಳಜಾತಿ, ಆಳುವ ವರ್ಗ ಮತ್ತು ದುಡಿಯುವ ವರ್ಗದ ಸಂಬಂಧಗಳು ಕಂಡುಬರುತ್ತದೆ. ಇದರ ಪರಿಣಾಮವೇ ಜಾತಿಶೋಷಣೆ ದೌರ್ಜನ್ಯಗಳಾದರೆ, ಮತಾಂತರ ಭೂಮಿಯ ಹಕ್ಕಿನ ಪ್ರಶ್ನೆಯಾಗಿ ಅವರ ಬಿಡುಗಡೆಯ ಸೂಚನೆಯಾಗಿ ಕಾದಂಬರಿಯಲ್ಲಿ ನಿರೂಪಿತವಾಗಿದೆ.

ಕುವೆಂಪು ಅವರ "ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಶೋಷಕ ಮತ್ತು ಶೋಷಿತ ವರ್ಗದ ಸಂಬಂಧಗಳು ನಿರೂಪಣೆಗೊಂಡಿವೆ. ಕಾದಂಬರಿಯಲ್ಲಿ ಬರುವ ಒಕ್ಕಲಿಗರು, ಗೌಡರು ಭೂಮಾಲೀಕ ವ್ಯವಸ್ಥೆಯ ಪ್ರತಿನಿಧಿಗಳಾಗಿದ್ದಾರೆ. ಹಾಗೆಯೇ ಇಲ್ಲಿ ಬರುವ ಕೆಳವರ್ಗದ ಜನರು ತನ್ನದಲ್ಲದ ಭೂಮಿಯಲ್ಲಿ ದುಡಿಯುವ ಜನರಾಗಿ, ಉತ್ಪಾದಕ ವರ್ಗವಾಗಿ ಚಿತ್ರಿಸಲಾಗಿದೆ. ಈ ದುಡಿಯುವ ಜನರನ್ನು ಮೇಲುವರ್ಗವು ಬಲಾತ್ಕಾರ ವಾಗಿ ಅನ್ಯಾಯಕ್ಕೆ ಮತ್ತು ಶೋಷಣೆಗೆ ಒಳಪಡಿಸುವುದರ ಮೂಲಕ ಇವರನ್ನು ದುಡಿಯುವ ವರ್ಗವಾಗಿ ರೂಪುಗೊಂಡಿರುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಇಲ್ಲಿ ದುಡಿಯುವವರ ಮತ್ತು ದುಡಿಯದವರ ಸಂಬಂಧವನ್ನು ಆಧರಿಸಿ ಮಾಲೀಕ ವರ್ಗ ಮತ್ತು ಕೃಷಿ ಕೂಲಿ ಕಾರ್ಮಿಕರು ಎಂಬ ಎರಡು ವರ್ಗಗಳನ್ನು ಕಾಣುತ್ತೇವೆ. ಭೂಮಿಯ ಒಡೆತನ ಹೊಂದಿರುವ ಮೇಲುವರ್ಗವು, ಭೂಮಿಯ ಒಡೆತನವು ಹೊಂದಿರದ ಅಥವಾದ ಭೂಮಿಯ ಹಕ್ಕನ್ನು ಕಳೆದುಕೊಂಡಿರುವ ದಲಿತ ವರ್ಗದವರ ಶ್ರಮಶೋಷಣೆಯ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದ್ದಾರೆ. ಈ ಸಂಬಂಧವನ್ನು ಅವಲಂಬಿಸಿ ಇಲ್ಲಿ ಮಾಲೀಕ ಆಳು ಎಂಬ ಸಂಬಂಧಗಳು ನಿರ್ಮಾಣವಾಗಿರುವುದು ಕಾಣುತ್ತೇವೆ.

ಭೂಮಾಲೀಕ ವ್ಯವಸ್ಥೆಯು ತಮ್ಮ ಭೂಮಿಯ ಒಡೆತನವನ್ನು ಉಳಿಸಿಕೊಳ್ಳಲು ಶೋಷಣೆಯ ತಂತ್ರವನ್ನು ರೂಪಿಸುತ್ತದೆ. ತನ್ನ ಹಿತಾಸಕ್ತಿಗೆ ಧಕ್ಕೆ ಬರದ ಹಾಗೆ ಕೆಳಸಮುದಾಯಗಳನ್ನು ನಿಯಂತ್ರಣ ಮಾಡುತ್ತದೆ. ತಮ್ಮನ್ನು ಬಿಟ್ಟು ಬೇರೆ ಯಾರೂ ಭೂಮಿಯ ಹಕ್ಕನ್ನು ಹೊಂದಬಾರದು ಎನ್ನುವ ಆಳುವ ವರ್ಗ ಆಲೋಚನೆ ನಿರೂಪಣೆಗೊಂಡಿದೆ. ಹಾಗೆಯೇ ದುಡಿಯುವ ಜನರು ಅವರ ಇಚ್ಛೆಗೆ ವಿರೋಧವಾಗಿ ನಡೆದುಕೊಂಡರೆ ಮುಸ್ಲಿಂ ಸಮುದಾಯವನ್ನು ಬಳಸಿಕೊಂಡು

'ಹೊನ್ನಾಳಿ ಹೊಡೆತ'ದ ಮೂಲಕ ಕ್ರೂರವಾದ ಶಿಕ್ಷೆಯನ್ನು ಆಳುವ ವರ್ಗ ಕೊಡುತ್ತಿದ್ದುದನ್ನು ಕಾದಂಬರಿಯು ಅಭಿವ್ಯಕ್ತಿಸಿದೆ. ಈ ಜಾತಿವರ್ಗದ ದಬ್ಬಾಳಿಕೆ ಅಸಮಾನತೆಯ ವಸ್ತುಸ್ಥಿತಿಯನ್ನು ಉಳಿಸಿಕೊಳ್ಳುವ ಸಲುವಾಗಿ ನಡೆಸಿದ ಶೋಷಣೆಯ ಪರಿಣಾಮವಾಗಿದೆ. ಹೊಲೆಯ ಸಮುದಾಯದವರು ಹೊಲ, ಗದ್ದೆಗಳಲ್ಲಿ ದುಡಿಯುವ ಶ್ರಮಜೀವಿಗಳು. ಇವರ ದಿನನಿತ್ಯದ ದುಡಿಮೆಯ ಪ್ರತಿಫಲ ಇವರಿಗೆ ಸಿಗುತ್ತಿಲ್ಲ. ಬದಲಿಗೆ ಆಳುವ ವರ್ಗದ ಪಾಲಾಗಿದೆ. ಇಲ್ಲಿ ಬರುವ ದುಡಿಯುವ ವರ್ಗವು ತನ್ನ ಶ್ರಮದ ಪ್ರತಿಫಲವನ್ನು ಕೇಳುವುದಿಲ್ಲ. ಈ ಕಾರಣದಿಂದ ಕಾದಂಬರಿಯು ಶ್ರಮಿಕ ಪ್ರತಿಫಲ ನಿಮ್ಮದಲ್ಲ ಎಂಬುದನ್ನು ಒತ್ತಾಯಪೂರ್ವಕವಾಗಿ ಹೇರಲಾಗಿದೆ. ಹಾಗೆಯೇ ಕೆಳವರ್ಗವನ್ನು ವಸ್ತುರೂಪದಲ್ಲಿ ಪಾಲು ಮಾಡುವ ಆಳುವ ವರ್ಗ ಕ್ರೂರವಾದ ಶೋಷಣೆಯನ್ನು ಕಾಣುತ್ತೇವೆ. ಇದು ಜೀತಪದ್ಧತಿಯನ್ನು ಮುಂದುವರಿಸುವ ಅಥವಾ ಆರ್ಥಿಕ, ರಾಜಕೀಯ ಅಸಮಾನತೆಯನ್ನು ಮುಂದುವರಿಸುವ ಆಳುವ ವರ್ಗದ ಶೋಷಣೆಯ ಪರಿಣಾಮದಿಂದ ಇಲ್ಲಿ ಈ ವರ್ಗಸಂಬಂಧಗಳು ಕಾಣಿಸುತ್ತವೆ. ಹೀಗೆ ದುಡಿಯುವ ಜನರ ಹಕ್ಕಿನ ಪ್ರಶ್ನೆಯನ್ನು ಮುಚ್ಚಿಡುವ ಸಲುವಾಗಿ, ಆಳುವ ವರ್ಗವು ಕೆಳವರ್ಗವನ್ನು ಶೋಷಣೆ ಮಾಡುತ್ತಿದೆ. ಈ ಶೋಷಣೆಯನ್ನು ಒಪ್ಪಿಕೊಂಡು ಹೋಗುವ ದುಡಿಯುವ ವರ್ಗದ ಪಾತ್ರಗಳಾಗಿ ಇವು ಕಾಣಿಸಿಕೊಳ್ಳುತ್ತವೆ.

'ಗ್ರಾಮಾಯಣ' ಕಾದಂಬರಿಯಲ್ಲಿ ಭೂಮಾಲೀಕರ ಮತ್ತು ದುಡಿಯುವ ವರ್ಗದ ಸಂಬಂಧವನ್ನು ಗುರುತಿಸಬಹುದು. ಇಲ್ಲಿ ದುಡಿಯುವ ವರ್ಗದ ಶೋಷಣೆಯೇ ಪ್ರಮುಖ ಅಂಶವಾಗಿ ಕಂಡುಬರುತ್ತದೆ. ಹಾಗೆಯೇ ಶ್ರೀಮಂತರು ಮತ್ತು ಬಡವರ ನಡುವಿನ ಸಂಬಂಧವೂ ಆಸ್ತಿ ಮತ್ತು ಅಧಿಕಾರದ ದೃಷ್ಟಿಯಲ್ಲಿ ನಡೆಯುತ್ತದೆ. ಇಲ್ಲಿ ಶ್ರೀಮಂತ ವರ್ಗವು ತಮ್ಮ ಅನುಕೂಲಕ್ಕೆ ತಕ್ಕಂತೆ ಬಡವರನ್ನು ನಡೆಸಿಕೊಳ್ಳುವುದು ಕಂಡುಬರುತ್ತದೆ. ಅಂದರೆ ಬಡವರ ಶ್ರಮವನ್ನು ಅವರ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವುದನ್ನೇ ಕಾಣಬಹುದು. ಆಸ್ತಿ ಮತ್ತು ಅಧಿಕಾರ ಹೊಂದಿರುವ ವರ್ಗವು ಮೇಲು-ಕೀಳು, ಶ್ರೀಮಂತ-ಬಡವ ಎನ್ನುವ ವರ್ಗತಾರತಮ್ಯವನ್ನು ಸೃಷ್ಟಿಸಿದೆ. ರಾಣೋಜಿರಾಯನ ಮರಣದ ನಂತರ ಅವನ ಇಬ್ಬರು ಹೆಂಡಂದಿರಲ್ಲಿ ಆಸ್ತಿಯ ಒಡೆತನದ ಬಗ್ಗೆ ಕಲಹ ಪ್ರಾರಂಭವಾಯಿತು. ಇದರ ಪರಿಣಾಮವನ್ನು ದುಡಿಯುವ ಜನರು ಆಸ್ತಿ ಹಾಗೂ ಅದರ ಅಧಿಕಾರವನ್ನು ತಾವು ಹಿಡಿಯಬೇಕು ಎಂಬುದು ಆಳುವ ವರ್ಗದ ನಡುವೆ ವರ್ಗವೈರುಧ್ಯತೆಗೆ ಕಾರಣವಾಗಿದೆ. ಅದೇ ರೀತಿಯಲ್ಲಿ ಆಸ್ತಿ ಮತ್ತು ಅಧಿಕಾರಕ್ಕೆ ಹಂಬಲಿಸುವ ಸಮುದಾಯದ ಬದುಕನ್ನು ದುರಂತಕ್ಕೆ ತಳ್ಳುವ ಮನಸ್ಥಿತಿಯೇ ಕಾದಂಬರಿಯ ಕೇಂದ್ರಪ್ರಜ್ಞೆಯಾಗಿ ಕಂಡುಬರುತ್ತದೆ. ಇಲ್ಲಿ ಆಳುವ ವರ್ಗದಿಂದ ಆಸ್ತಿ ಮತ್ತು ಅಧಿಕಾರ ಕೆಳವರ್ಗದವರಿಗೆ ಪಲ್ಲಟವಾಗುವುದನ್ನು ತಪ್ಪಿಸುವ ಕಾರ್ಯದಲ್ಲಿ ಭೂಮಾಲೀಕ ವರ್ಗದ ಮನಸ್ಸುಗಳು ಕೆಲಸ ನಿರ್ವಹಿಸುತ್ತಿವೆ. ತನ್ನ ಅಸಮಾನತೆ ಮತ್ತು ಶೋಷಣೆಯನ್ನು ಯಥಾಸ್ಥಿತಿಯಲ್ಲಿ ಮುಂದುವರಿಸಲು ಕೆಳವರ್ಗದ ಜನರ ಜಾಗೃತಿಯನ್ನು ಅವರ ಭೂಮಿಯ ಹಕ್ಕಿನ ಪ್ರಶ್ನೆಯನ್ನು

ಗೌಣಗೊಳಿಸಿ, ಅವರನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಳ್ಳುವ ಮತ್ತು ತನ್ನ ಅಧೀನದಲ್ಲಿ ಬದುಕುವಂತೆ ಆಜ್ಞೆ ಮಾಡುವ ಆಳುವ ವರ್ಗದ ಆಲೋಚನೆಯು ದುಡಿಯುವ ಜನರ ಹಸಿವು, ಬಡತನ, ನಿರುದ್ಯೋಗದ ಸಮಸ್ಯೆಯನ್ನು ಸೃಷ್ಟಿಸಿದೆ. ಜೊತೆಗೆ ತನ್ನ ಹಿತಾಸಕ್ತಿಗೆ ದುಡಿಯುವಂತೆ ಕೆಳವರ್ಗದ ಪಾತ್ರಗಳನ್ನು ನಿರೂಪಿಸಿರುವಂತಹದ್ದನ್ನು ಕಾಣುತ್ತೇವೆ. ಹೀಗೆ ದುಡಿಯುವ ಜನರನ್ನು ವರ್ಗಪ್ರಜ್ಞೆಯ ಭಾಗವಾಗಿ ಗ್ರಹಿಸದ ವರ್ಗ ಚಿಂತನೆಯನ್ನು ಸ್ಪಷ್ಟಪಡಿಸದ ನಿರೂಪಣೆ ಇದೆ. ಆದ್ದರಿಂದ ಇಲ್ಲಿ ಶೋಷಕ ಮತ್ತು ಶೋಷಿತ ಸಂಬಂಧವಾಗಿ ಆಳುವ ವರ್ಗ ಮತ್ತು ದುಡಿಯುವ ವರ್ಗದ ಪಾತ್ರಗಳು ಅನಾವರಣಗೊಂಡಿವೆ.

'ಚಿರಸ್ಮರಣೆ' ಕಾದಂಬರಿಯಲ್ಲಿ ಶೋಷಣೆಯ ಮೂಲ ಕೇಂದ್ರೀಕೃತವಾಗಿರುವುದೇ ಸಂಪತ್ತಿನ ಅಸಮಾನತೆಯಲ್ಲಿ. ಕಯ್ಯೂರಿನ ರೈತರ ಭೂಮಿಯನ್ನು ಅಕ್ರಮವಾಗಿ ಕಿತ್ತುಕೊಂಡು ಬೆಳೆದಿರುವ ಇಬ್ಬರು ಭೂಮಾಲೀಕರು ಅಕ್ರಮವಾಗಿ ಸಂಪಾದನೆ ಮಾಡಿರುವ ಭೂಮಿಯನ್ನು ಉಳಿಸಿಕೊಳ್ಳುವ ಸಲುವಾಗಿ ಕೆಳವರ್ಗದವರ ಮೇಲೆ ಶೋಷಣೆ ಮಾಡುತ್ತಿದ್ದಾರೆ. ಅದೇ ರೀತಿಯಲ್ಲಿ ತನ್ನ ಹಕ್ಕುಗಳನ್ನು ಕಳೆದುಕೊಂಡಿರುವ ಕೃಷಿಕಾರ್ಮಿಕರು ತನ್ನ ಹಕ್ಕನ್ನು ಪಡೆದುಕೊಳ್ಳಲು ಶೋಷಕ ವ್ಯವಸ್ಥೆಯನ್ನು ವಿರೋಧಿಸುತ್ತಾರೆ. ಇಲ್ಲಿ ವರ್ಗಸಂಘರ್ಷ ಆಳುವ ವರ್ಗ ಮತ್ತು ದುಡಿಯುವ ವರ್ಗದ ನಡುವೆ ನಡೆಯುತ್ತದೆ. ಇಲ್ಲಿ ಕಾದಂಬರಿಯು ದುಡಿಯು ವರ್ಗದ ಮೂಲಕವೇ ಇಡೀ ಸಮಸ್ಯೆಯನ್ನು ನೋಡುವ ತಾತ್ವಿಕತೆ ಬೆಳೆಸಿಕೊಂಡಿದೆ. ಶ್ರಮಿಕ ವರ್ಗದ ಮೇಲೆ ನಡೆಯುತ್ತಿರುವ ಆಳುವ ವರ್ಗದ ಶೋಷಣೆಯನ್ನು ಹಿಮ್ಮೆಟ್ಟಿಸುವ ದುಡಿಯುವ ವರ್ಗದ ಆಲೋಚನಾ ಕ್ರಮ ಇದೆ. ಕಾದಂಬರಿಯಲ್ಲಿ ನಂಬಿಯಾರ ಮತ್ತು ನಂಬೂದರಿ ಭೂಮಾಲೀಕ ವ್ಯವಸ್ಥೆಯ ಪ್ರತಿನಿಧಿಗಳಾಗಿದ್ದಾರೆ. ಹಾಗೆಯೇ ಕೈಯ್ಯೂರಿನ ರೈತರು ಕೃಷಿಕಾರ್ಮಿಕರು ದುಡಿಯುವ ವರ್ಗ ಪ್ರತಿನಿಧಿಗಳಾಗಿದ್ದಾರೆ. ಈ ದುಡಿಯುವ ವರ್ಗವು ತನ್ನ ಗುಲಾಮಗಿರಿಯನ್ನು, ಶೋಷಣೆಯನ್ನು ಪ್ರತಿಭಟಿಸುವ ಪಾತ್ರವನ್ನು ಕಾಣಬಹುದು. ಈ ವರ್ಗವೈರುಧ್ಯತೆಯು ವರ್ಗ ಸಂಘರ್ಷವಾಗಿ ಕಾದಂಬರಿಯಲ್ಲಿ ನಿರೂಪಣೆಗೊಂಡಿದೆ. ಹೀಗೆ ಆಳುವ ವ್ಯವಸ್ಥೆಯ ಶೋಷಣೆ, ಅನ್ಯಾಯವನ್ನು ಪ್ರತಿಭಟಿಸುವ ದುಡಿಯುವ ವರ್ಗವು, ಅಸಮಾನತೆಯನ್ನು ಹೋಗಲಾಡಿಸಿ ಸಮಾನತೆಯನ್ನು ತರುವ ಆಶಯವನ್ನು ಹೊಂದಿದೆ. ಈ ದುಡಿಯು ವರ್ಗದ ಹೋರಾಟವನ್ನು ನಾಶ ಮಾಡಿ ಅಸಮಾನತೆಯು ಮುಂದುವರಿಸಬೇಕು ಎನ್ನುವುದು ಆಳುವ ವರ್ಗದ್ದು. ಹೀಗೆ ಕಾದಂಬರಿಯಲ್ಲಿ ವರ್ಗ ಸಂಘರ್ಷದ ನಿರಂತರತೆಯನ್ನು ಇಲ್ಲಿ ಕಾಣಬಹುದು.

ವ್ಯಾಸರಾಯ ಬಲ್ಲಾಳರ 'ಬಂಡಾಯ' ಕಾದಂಬರಿಯಲ್ಲಿ ಬಂಡವಾಳಶಾಹಿ ಮತ್ತು ಕಾರ್ಮಿಕ ವರ್ಗದ ನಡುವೆ ಸಂಘರ್ಷ ನಡೆಯುತ್ತದೆ. ಮುಂಬಯಿಯ ಉದ್ಯಮ ಜಗತ್ತು ತನ್ನ ಹಿತಾಸಕ್ತಿಗಾಗಿ ನಡೆಸುವ ಕುತಂತ್ರವನ್ನು ಬಿಚ್ಚಿಟ್ಟಿದೆ. ಶ್ರೀಮಂತಿಕೆ ಮತ್ತು ಹಣದ ದಾಹವು ಇಡೀ ಸಮಾಜದಲ್ಲಿ ಹೇಗೆ ತಾರತಮ್ಯಗಳನ್ನು ಸೃಷ್ಟಿಸುತ್ತದೆ ಎಂಬುದನ್ನು ಇಲ್ಲಿ ಚರ್ಚಿಸಿದೆ. ಇಲ್ಲಿ ಉದ್ಯಮ ಜಗತ್ತು ಶ್ರೀಮಂತವರ್ಗವಾಗಿದೆ. ಇದು ಬಂಡವಾಳಶಾಹಿ ಸಂಬಂಧದೊಂದಿಗೆ

ಬೆಸೆದುಕೊಂಡಿದೆ. ಈ ವರ್ಗವು ಉತ್ಪಾದಕ ಶಕ್ತಿಗಳಾದ ಕಾರ್ಮಿಕ ವರ್ಗವನ್ನು, ಶೋಷಣೆ ಮಾಡುವುದರ ಮೂಲಕ ವರ್ಗವೈರುಧ್ಯತೆಗೆ ಕಾರಣವಾಗಿದೆ. ಇಲ್ಲಿ ಬರುವ ಕಾರ್ಮಿಕ-ಮಾಲೀಕ ಸಂಬಂಧಗಳ ನಡುವೆ ಸಂಘರ್ಷಗಳು ನಿರಂತರವಾಗಿ ನಡೆಯುತ್ತಲೇ ಇರುತ್ತವೆ. ಕಾರ್ಖಾನೆಗಳಲ್ಲಿ ದುಡಿಯುವ ಕಾರ್ಮಿಕ ವರ್ಗವು ಆರ್ಥಿಕ ಅಸಮಾನತೆಯ ತಳಹದಿಯ ಮೇಲೆ ನಿಂತಿರುವುದರಿಂದ ಈ ಕಾರ್ಮಿಕ ವರ್ಗವು ಸಂಬಳದ ಬಡ್ತಿ, ಬೋನಸ್, ಹೆರಿಗೆ ರಜೆ, ತುಟ್ಟಿಭತ್ಯೆ ಹೆಚ್ಚಳ ಹೀಗೆ ಹಲವಾರು ಬೇಡಿಕೆಗಳನ್ನು ಆಳುವ ವರ್ಗದ ಮುಂದಿಡುತ್ತದೆ. ಅದಕ್ಕಾಗಿ ಪ್ರತಿಭಟನೆಯನ್ನು ಸಹ ಹಮ್ಮಿಕೊಳ್ಳುತ್ತದೆ. ಆದರೆ ಈ ಪ್ರತಿಭಟನೆಯಿಂದ ತನ್ನ ಅಸ್ತಿತ್ವಕ್ಕೆ ಧಕ್ಕೆ ಬರುತ್ತದೆ ಎನ್ನುವ ಆಳುವ ವರ್ಗ ಮತ್ತು ಆಲೋಚನೆ, ಕಾರ್ಮಿಕರ ಮಧ್ಯದಲ್ಲಿ ಒಡಕನ್ನು ಉಂಟುಮಾಡುತ್ತದೆ ಮತ್ತು ಅವರ ಹೋರಾಟವನ್ನು ಹತ್ತಿಕ್ಕುವ ಕೆಲಸ ಮಾಡುತ್ತದೆ. ಇದರ ಪರಿಣಾಮ ಸಂಘರ್ಷ ಗಲಭೆಗಳಾಗುವುದನ್ನು ಕಾದಂಬರಿಯು ಚಿತ್ರಿಸುತ್ತದೆ.

ನಾಗೇಶ ಶರ್ಮಾರ ಮಗ ಸತೀಶ. ಅವರ ಕೈಗೂಸಾಗಿ ಕೆಲಸ ಮಾಡುವವರು ರಘು ಪಾಟಣಕರನಂಥ ಅಧಿಕಾರಿಗಳು, ತಿವಾರಿ-ಕೊತ್ವಾಲರಂಥ ಕಾರ್ಮಿಕರು. ಇವರಿಗೆಲ್ಲ ಸುರಕ್ಷಿತತೆಯನ್ನು ಒದಗಿಸುವ ಪೊಲೀಸು ಅಧಿಕಾರಿ ಕೋರೇಗಾಂವಕರ್ ಆಳುವ ವರ್ಗದ ವ್ಯವಸ್ಥೆಯನ್ನು ಪ್ರತಿನಿಧಿಸುತ್ತಾರೆ. ಇವರು ರಾಜೀವನಂತಹ ಕಾರ್ಮಿಕ ವರ್ಗದ ನಾಯಕನನ್ನೇ ತನ್ನ ಹಿತಾಸಕ್ತಿಗಾಗಿ ದುಡಿಯುವಂತೆ ಒತ್ತಾಯಿಸುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಆಳುವ ವರ್ಗವು ಅಸ್ತಿತ್ವದ ಉಳಿವಿಗಾಗಿ ಈ ಕೆಲಸ ನಿರ್ವಹಿಸುತ್ತದೆ. ಇಲ್ಲಿ ಬಂಡವಾಳಶಾಹಿ ವ್ಯವಸ್ಥೆ ಕಾರ್ಮಿಕರ ಶ್ರಮದ ಮೌಲ್ಯವನ್ನು ತನ್ನದಾಗಿಸಿಕೊಂಡು ಅವರನ್ನು ಶೋಷಣೆಗೆ ತಳ್ಳುವ ಕೆಲಸವನ್ನು ಈ ಆಳುವ ವರ್ಗ ಮಾಡುತ್ತದೆ. ಜೊತೆಗೆ ಕಾರ್ಮಿಕ ಚಳುವಳಿಯ ನಾಯಕರೊಡನೆ ಹೊಂದಾಣಿಕೆಯನ್ನು ಮಾಡಿಕೊಳ್ಳುವುದಕ್ಕೆ ಮುಂದಾಗುತ್ತದೆ. ಆ ಮೂಲಕ ದುಡಿಯುವ ವರ್ಗದ ಹೋರಾಟವನ್ನು ನಿಯಂತ್ರಿಸುತ್ತಿರುತ್ತದೆ. ಆದರೆ ಈ ಒಪ್ಪಂದದ ಹಿಂದೆ ಆಳುವ ವರ್ಗದ ರಾಜಕೀಯ ಹಿತಾಸಕ್ತಿ ಆಳವಾಗಿ ಬೇರೂರಿರುವುದರಿಂದ ಇದನ್ನು ಹೊಂದಾಣಿಕೆಯ ಮೂಲಕ ಬಗೆಹರಿಸಲು ಸಾಧ್ಯವಿಲ್ಲ. ಕಾರ್ಮಿಕ ವರ್ಗವು "ಆಡಳಿತ ವ್ಯವಸ್ಥೆಯ ವಿರುದ್ಧ ಸಿಡಿದೆದ್ದು ತಮ್ಮ ಹಕ್ಕುಗಳನ್ನು ದಕ್ಕಿಸಿಕೊಳ್ಳುವುದೇ ಬಂಡಾಯದ ಉದ್ದೇಶವಾಗಿರುತ್ತದೆ"[೧]. ಹೀಗೆ ಕಾದಂಬರಿಯಲ್ಲಿ ಆಳುವ ವರ್ಗ ಮತ್ತು ದುಡಿಯುವ ವರ್ಗದ ನಡುವೆ ನಡೆದಿರುವ ಸಂಘರ್ಷವು ವರ್ಗಸಂಬಂಧವಾಗಿ ನಿರೂಪಣೆಯಾಗಿದೆ.

'ಒಡಲಾಳ' ಕಾದಂಬರಿಯಲ್ಲಿ ದಲಿತ ವರ್ಗದ ಪ್ರತಿನಿಧಿಗಳಾಗಿ ಸಾಕವ್ವನ ಕುಟುಂಬವನ್ನು ಗುರುತಿಸಬಹುದು. ಹಾಗೆಯೇ ಸಾಹುಕಾರ ಎತ್ತಪ್ಪ ಭೂಮಾಲೀಕ ವ್ಯವಸ್ಥೆಯ ಪ್ರತಿನಿಧಿಯಾಗಿ, ಪೊಲೀಸ್ ವ್ಯವಸ್ಥೆಯು ಪ್ರಭುತ್ವದ ಸಂಕೇತವಾಗಿ ನಿರೂಪಣೆಗೊಂಡಿದೆ. ಸಾಕವ್ವನು ಹುಂಜವನ್ನು ಕಳೆದುಕೊಂಡು ಅದರ ಸುಳಿವಿಗೆ ಪ್ರಯತ್ನಿಸುತ್ತಿರುವಾಗ, ಈ ಕುಟುಂಬದ ಮೇಲೆ ಕಡಲೆಕಾಯಿ ಕಳ್ಳತನದ ಆರೋಪವನ್ನು ಮಾಡಿ ಎತ್ತಪ್ಪನು ಈ ಕುಟುಂಬದ ಮೇಲೆ ದೌರ್ಜನ್ಯ ಮಾಡುವುದನ್ನು

ಚಿತ್ರಿಸುತ್ತದೆ. ಈ ದೌರ್ಜನ್ಯದ ಪ್ರಕರಣದಲ್ಲಿ ಸಾಕವ್ವನ ಕುಟುಂಬವು ಮತ್ತೊಂದು ಹುಂಜವನ್ನು ಕಳೆದುಕೊಂಡು, ಅತಂತ್ರ ಸ್ಥಿತಿಯಲ್ಲಿ ಬದುಕುವುದನ್ನು ಕಾಣುತ್ತೇವೆ. ಹಾಗೆಯೇ ಕೂಲಿ ಮಾಡಿ ಬದುಕನ್ನು ಕಟ್ಟಿಕೊಳ್ಳುತ್ತಿದ್ದ ಈ ಕುಟುಂಬವನ್ನು ಕೂಲಿ ಕೆಲಸಕ್ಕೆ ಕರೆಯದೆ ಇರುವ ಭೂಮಾಲೀಕ ವ್ಯವಸ್ಥೆಯ ಚಿತ್ರಣ ಇದೆ. ಜೊತೆಗೆ ಈ ಆಳುವ ವರ್ಗವು ತನ್ನ ಭೂಮಿಯ ಒಡೆತನ ಹಕ್ಕಿಗಾಗಿ ಕೆಳವರ್ಗದ ಮೇಲೆ ಶೋಷಣೆ ಮಾಡುತ್ತಿದೆ. ಈ ದುಡಿಯುವ ವರ್ಗದಲ್ಲಿ ಈ ಶೋಷಣೆಯ ವಿರುದ್ಧ ಜಾಗೃತಿ ಮಾಡದ ಹಾಗೆ ಆಳುವ ವರ್ಗವು ನಿರಂತರವಾಗಿ ಅವರನ್ನು ಶೋಷಣೆ ಮಾಡುತ್ತಿದೆ. ಈ ಶೋಷಣೆಯ ವಿರುದ್ಧ ಜಾಗೃತಿಯಾಗಿರುತ್ತಿರುವುದು ಮತ್ತು ಶಿವು ಶಿಕ್ಷಣ ಕಲಿಯುತ್ತಿರುವುದು, ಹಾಗೆಯೇ ಪುಟ್ಟಗೌರಿಯ ನವಿಲಿನ ಚಿತ್ರವು ಈ ಆಳುವ ವರ್ಗದ ಶೋಷಣೆಯ ವ್ಯವಸ್ಥೆಯನ್ನು ಮೀರಿ ನಿಂತ ಪ್ರತಿಭೆಗಳಾಗಿ ಮೂಡಿ ಬಂದಿವೆ. ಹೀಗೆ ಭೂಮಾಲೀಕ ವರ್ಗ ಮತ್ತು ಪ್ರಭುತ್ವದ ದೌರ್ಜನ್ಯ, ಶೋಷಣೆಯನ್ನು ನೀಗಿಸಿಕೊಂಡು ಹೋಗುವ ಪಾತ್ರಗಳು ಇಲ್ಲಿ ಒಡಮೂಡಿರುವುದನ್ನು ಕಾಣುತ್ತೇವೆ.

'ಬೆಂಕಿಯ ಮಧ್ಯ' ಕಾದಂಬರಿಯಲ್ಲಿ ಭೂಮಾಲೀಕ ವರ್ಗದ ಶೋಷಣೆಯ ನಡುವೆಯು ಓದಿದ ಕೆಳವರ್ಗದ ಪ್ರತಿನಿಧಿಯಾದ ಮುನಿಯಪ್ಪ, ಭೂಮಾಲೀಕ ವ್ಯವಸ್ಥೆ ಶೋಷಣೆಯ ವಿರುದ್ಧ ಹೋರಾಟಕ್ಕೆ ಇಳಿಯುತ್ತಾನೆ. ಬಾಲ್ಯದಲ್ಲಿ ಕಬಡ್ಡಿ ಆಟದಲ್ಲಿ ತನ್ನ ಮಗನ ಕಾಲು ಎಳೆದಿದ್ದಕ್ಕಾಗಿ, ಅಪ್ಪನಿಂದಲೇ ಮಗನನ್ನು ಹೊಡೆಯಿಸಿದ ಪಾಳೇಗಾರಿ ವ್ಯವಸ್ಥೆಯ ಕ್ರೌರ್ಯವನ್ನು ಇಲ್ಲಿ ಕಾಣಬಹುದು. ಶಿಕ್ಷಣ ಪಡೆದು ಅಂಬೇಡ್ಕರ್ ಅವರ ಚಿಂತನೆಗಳನ್ನು ಅಧ್ಯಯನ ಮಾಡಿ, ದಲಿತ ಸಂಘರ್ಷ ಸಮಿತಿಯ ಮೂಲಕ ಶೋಷಕ ವ್ಯವಸ್ಥೆಯ ಶೋಷಣೆಯ ವಿರುದ್ಧ ಹೋರಾಡುವ ದುಡಿಯುವ ವರ್ಗದ ಪಾತ್ರವನ್ನು ಇಲ್ಲಿ ಕಾಣಬಹುದು. ಹಾಗೆಯೇ ಪಾವಸ್ಕರನ ತಂದೆ ಜೀತದಾಳು ಆಗಿದ್ದು, ಧಣಿ ಒಮ್ಮೆ ಸಣ್ಣ ತಪ್ಪಿಗೆ, ಅವನ ಕರ್ತವ್ಯ ನಿಷ್ಠೆಯನ್ನು ನೆನೆಯದೆ ಹೀನಾಮಾನ ಬೈಯ್ದರು. ಅಂದಿನಿಂದ ಯಾರು ಎಷ್ಟೇ ಹೇಳಿದರೂ ತಿರುಗಿ ಧಣಿಯ ಮನೆಗೆ ಹೋಗದೆ, ಜೋಡು ಹೊಲಿಯುವ ಕೆಲಸಕ್ಕೆ ತೊಡಗಿದ. ಇಲ್ಲಿ ದುಡಿಯುವ ಜನರ ಸ್ವಾಭಿಮಾನದ ಪ್ರಶ್ನೆಯನ್ನು ಕಾದಂಬರಿಯು ಎತ್ತಿಹಿಡಿಯುತ್ತದೆ.

ಬರಗೂರರ 'ಸೂರ್ಯ' ಕಾದಂಬರಿಯಲ್ಲಿ ಕರಿಯನು ಊರಗೌಡರ ಮನೆಯಲ್ಲಿ ಜೀತ ಮಾಡುತ್ತಿದ್ದನು. ಹಗಲು-ರಾತ್ರಿ ಈ ಭೂಮಾಲೀಕ ಮನೆಯಲ್ಲಿ ದುಡಿಯುತ್ತಿದ್ದ ಶ್ರಮಜೀವಿ. ಆದರೆ ಗೌಡನು ಇವನನ್ನು ಶೋಷಣೆ ಮಾಡುವುದರ ಮೂಲಕ ತನ್ನ ಹಿತಾಸಕ್ತಿಯನ್ನು ಈಡೇರಿಸಿಕೊಳ್ಳುತ್ತಿದ್ದನು. ಅಂದರೆ ಗೌಡನು ತನ್ನ ಸಿಟ್ಟು, ಬೈಗಳು, ಏಟು ಒದೆ ಎಲ್ಲವುಗಳನ್ನು ಹೊರಹಾಕಲು ಈ ದುಡಿಯುವ ಜನರನ್ನು ಮಾಧ್ಯಮವಾಗಿ ಬಳಸಿಕೊಳ್ಳುವ ಕ್ರೂರವಾದ ಶೋಷಣೆ ಇತ್ತು. ಇವನ ಜಮೀನ್ದಾರನ ಅಪ್ಪಣೆ ಇಲ್ಲದೆ ಒಂದು ಹುಲ್ಲು ಕಡ್ಡಿಯೂ ಅಲುಗಾಡುವ ಹಾಂಗಿಲ್ಲ. ಅಂಥ ಸ್ಥಿತಿಯಲ್ಲಿ ಈ ದುಡಿಯುವ ಜನರನ್ನು ಈ ಭೂಮಾಲೀಕ ವ್ಯವಸ್ಥೆ ನಡೆಸಿಕೊಳ್ಳುವುದನ್ನು ಚಿತ್ರಿಸುತ್ತದೆ. ಕರಿಯನ ಬೆಂಬಲಕ್ಕೆ ಗೌಡನ ಹೆಂಡತಿ ಸೀತಕ್ಕ

ನಿಂತಾಗ, ಗೌಡನು ಕರಿಯನ ಹೆಂಡತಿಯನ್ನು ಕೊಲೆ ಮಾಡುವನು. ಈ ಉಗ್ರವಾದ ಶೋಷಣೆ ಆಳುವ ವರ್ಗದ್ದು. ಇಲ್ಲಿ ದುಡಿಯುವ ವರ್ಗ ಮತ್ತು ಆಳುವ ವರ್ಗಗಳ ನಡುವೆ ಮಾಲೀಕ-ಆಳುಗಳ ಸಂಬಂಧ ಇದೆ. ಇಲ್ಲಿ ಕೆಳವರ್ಗದ ಕರಿಯ ಈ ಭೂಮಾಲೀಕರ ಶೋಷಣೆಯನ್ನು ಒಪ್ಪಿಕೊಂಡು ಹೋಗುತ್ತಾನೆ. ಆದರೆ ಇವನಿಗೆ ಗೌಡನ ಹೆಂಡತಿಯ ಬೆಂಬಲ ಇರುವುದರಿಂದ ಕರಿಯ ಗೌಡನ ವಿರುದ್ಧ ನೇರವಾಗಿ ಪ್ರತಿಭಟಿಸದೆ ಇದ್ದರೂ ಸೀತಕ್ಕನ ಮೂಲಕ ಪ್ರತಿಭಟನೆಗೆ ಅಸ್ತ್ರವಾಗುತ್ತಾನೆ. ಗೌಡನಿಗೆ ಕೆಳಜಾತಿಯ ಕರಿಯ ವರ್ಗಶತ್ರುವಾಗಿ ಕಾಣುತ್ತಾನೆ. ಹೀಗೆ ಕಾದಂಬರಿಯಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಆಳುವ ವರ್ಗವು ಕೆಳವರ್ಗವನ್ನು ವರ್ಗ ಶತ್ರುವಾಗಿ ಸ್ವೀಕಾರ ಮಾಡಿರುವುದು, ಅದೇ ರೀತಿ ಕರಿಯ ಮತ್ತು ಸೀತಕ್ಕನ ಸಂಬಂಧವು ಹೊಸ ಸಾಮಾಜಿಕ ಸಂಬಂಧವಾಗಿ ಈ ಊಳಿಗಮಾನ್ಯಶಾಹಿ ನೀತಿಗಳನ್ನು ಮುರಿಯುವ ಪಾತ್ರದಲ್ಲಿ ಕಾಣುತ್ತಾರೆ.

ಚೆನ್ನಣ್ಣ ವಾಲೀಕಾರರ 'ಒಂದು ಹೆಣ್ಣಿನ ಒಳಜಗತ್ತು' ಕಾದಂಬರಿಯಲ್ಲಿ ಸಂಗಣ್ಣಗೌಡ ಸರಕಾರ ತಂದ 'ಭೂಸೀಲಿಂಗ್' ಕಾಯ್ದೆಯಿಂದ ತನ್ನ ಜಮೀನು ಉಳಿಸಿಕೊಳ್ಳಲು, ಹತ್ತಿಪ್ಪತ್ತು ವರ್ಷಗಳಿಂದ ತನ್ನಲ್ಲಿ ದುಡಿಯುತ್ತಿದ್ದ ದುಡಿಯುವ ಜನರ ಹೆಸರಲ್ಲಿ ಖಾತೆ ಮಾಡಿಸುತ್ತಾನೆ. ಇದರಿಂದ ತನ್ನ ವಶದಲ್ಲಿ ಈ ಕೆಳವರ್ಗದ ಜಮೀನನ್ನು ಅಕ್ರಮವಾಗಿ ಸಂಪಾದನೆ ಮಾಡಿ ಅವರನ್ನು ಭೂಹೀನರಾಗಿ ಮಾಡುತ್ತಾನೆ. ಇಲ್ಲಿ ಮಾಲೀಕ-ಆಳುಗಳ ಸಂಬಂಧಗಳಿದ್ದರೂ ಮೇಲ್ವರ್ಗದ ಈ ಶೋಷಣೆಯು ಕೆಳವರ್ಗದವರಿಗೆ ಅರಿವಿಗೆ ಬರುವುದಿಲ್ಲ. ಮಲ್ಯಾ ಮತ್ತು ರತ್ನಳ ಸಂಬಂಧಗಳು ಸಹಿಸದೆ ಅವಳ ಅಣ್ಣ ಮಲ್ಯಾನನ್ನು ಉಪಾಯದಿಂದ ಕೊಲೆ ಮಾಡುತ್ತಾನೆ. ಆದರೆ ಈ ವಿಷಯವು ರತ್ನಳಿಗೆ ತಿಳಿದು ಅವಳು ನೀರಿಗೆ ಹಾರಿ ಸಾಯುವುದು ಅವರ ಪ್ರೀತಿಯ ಸಂಕೇತವಾಗಿ ಕಾಣಿಸುತ್ತದೆ. ಆದರೆ ಸಂಗಣ್ಣಗೌಡನಿಗೆ ಜಾತಿಯ ಚೌಕಟ್ಟು ಮೀರದಂತೆ ಕಾದಂಬರಿಯಲ್ಲಿ ನಿರೂಪಣೆಗೊಂಡಿದೆ.

ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಮಾದೇವ ಕುರುಂದವಾಡದ ರಾಜಕುಮಾರನಾಗಿ ಹುಟ್ಟಿ ಅರಮನೆಯಲ್ಲಿ ನಡೆದ ಆಂತರಿಕ ಸಂಘರ್ಷದ ಪರಿಣಾಮವಾಗಿ ವಡಗಾಂವ್‌ನ ಹೊಲಗೇರಿಯಲ್ಲಿ ಬೆಳೆದು ದೊಡ್ಡವನಾಗುತ್ತಾನೆ. ಇಲ್ಲಿ ಕೆಳವರ್ಗವಾದ ಹೊಲೆಯ ಸಮುದಾಯದ ಜೀವನಪದ್ಧತಿ ಅಳವಡಿಸಿಕೊಂಡು ಆ ಮೂಲಕ ಮೀಸಲಾತಿಯ ಮೂಲಕ ಶಿಕ್ಷಣ ಪಡೆದು ಮೇಲ್ಜಾತಿಯ ಶೋಷಣೆಯ ವಿರುದ್ಧ ಹೋರಾಡುತ್ತಾನೆ. ತಾನು ಹುಟ್ಟಿನಿಂದ ಕ್ಷತ್ರಿಯ ರಾಜಕುಮಾರ ಎಂದು ತಿಳಿದಾಗ, ಮಾದೇವ ಕೆಳವರ್ಗದ ಸಂಸ್ಕೃತಿಯನ್ನು ನಿರಾಕರಿಸಿ ಮೇಲ್ವರ್ಗದ ಸಂಸ್ಕೃತಿಯತ್ತ ಆಕರ್ಷಿತನಾಗುತ್ತಾನೆ. "ನಾನು ಅನುಭವಿಸಿದ ನೋವು ನೆನಪು, ಹತಾಶೆ, ದುಃಖ-ದುಮ್ಮಾನಗಳೆಲ್ಲ ಈ ಹೊಲಗೇರಿಯ ಜೊತೆಗೆ ಸುಟ್ಟು ಹೋಗಲಿ, ಮಾಣಿಕ್ಯವೇ ಅರಮನೆಯಲ್ಲಿರಬೇಕಾದ ನೀನು ಈ ತಿಪ್ಪೆಯಲ್ಲೇಕೆ ಬಿದ್ದಿರುವೆ"?[೨] ಇಲ್ಲಿ ಮಾದೇವ ತಾನು ಬೆಳೆದ ಹೊಲಗೇರಿಯ ಸಂಬಂಧವನ್ನು ನಿರಾಕರಿಸುತ್ತಿದ್ದಾನೆ. ತಾನು

ನಂಬಿದ ದುಡಿಯುವ ವರ್ಗದ ಆಲೋಚನೆಯನ್ನು ಬದಿಗೊತ್ತಿ ಆಳುವ ವರ್ಗದ ಆಚಾರ-ವಿಚಾರಗಳಿಗೆ ಮಾದೇವ ಬದ್ಧವಾಗುವುದನ್ನು ಕಾಣುತ್ತೇವೆ. ಮತ್ತೆ ಮಾದೇವ ಈ ಎರಡು ಸಂಸ್ಕೃತಿಗಳ ಮೌಲ್ಯಗಳ ತೂಕ ಮಾಡಿ ತನ್ನ ಮೂಲ ದುಡಿಯುವ ವರ್ಗದ ಸಂಸ್ಕೃತಿಗೆ ಪುನಃ ಬಂದು ಆಳುವ ವರ್ಗದ ಜಾತಿ, ವರ್ಗಶೋಷಣೆಯ ವಿರುದ್ಧ ಕ್ರಿಯಾಶೀಲವಾಗಿ ಹೋರಾಡುವುದು ಕಾಣುತ್ತೇವೆ.

ಈ ಕಾದಂಬರಿಯಲ್ಲಿ ಪಾಟೀಲರು, ಒಣಮುಕಳ್ಯಾರು, ಸಂಕಪ್ಪ ಭೂಮಿಯ ಒಡೆತನ ಹೊಂದಿದ್ದು, ಇವರ ಭೂಮಿಯಲ್ಲಿ ಕೆಳವರ್ಗದ ಹೊಲೆಮಾದಿಗರು, ಸಮಗಾರರು ದುಡಿಯುತ್ತಿದ್ದಾರೆ. ಹಾಗಾಗಿ ಆಳುವ ವರ್ಗ ಮತ್ತು ದುಡಿಯುವ ವರ್ಗದ ನಡುವೆ ಆಳು ಒಡೆಯನ ಸಂಬಂಧವಿದೆ. ಇಲ್ಲಿ ರಾಮಕ್ಕ, ಸುಮತಿ, ಸೀತವ್ವನ ಪಾತ್ರಗಳು ಜೀವನಕ್ಕಾಗಿ ಮೇಲುವರ್ಗದವರ ಭೂಮಿಯಲ್ಲಿ ದುಡಿಯುತ್ತಿದ್ದಾರೆ. ಜಾನೋಬಾ ಹಾಲು ಮಾರಿ ಬದುಕನ್ನು ರೂಪಿಸಿಕೊಂಡಿದ್ದಾನೆ. ಒಟ್ಟಾರೆ ಈ ಕಾದಂಬರಿಯಲ್ಲಿ ಆಳುವ ವರ್ಗವು ಜಾತಿಶೋಷಣೆ, ವರ್ಗಶೋಷಣೆ ಮಾಡುತ್ತಿರುವುದರ ವಿರುದ್ಧ ಕಾದಂಬರಿಯಲ್ಲಿ ದುಡಿಯುವ ಜನರು ಜಾಗೃತರಾಗಿ ತಮ್ಮ ಹಕ್ಕಿಗಾಗಿ ಪ್ರಭುತ್ವದ ದೌರ್ಜನ್ಯ, ಶೋಷಣೆಯ ವಿರುದ್ಧ ಹೋರಾಡುತ್ತಿರುವ ಮತ್ತು ಈ ಹೋರಾಟ ಮುಂದುವರಿಯುವುದನ್ನು ಬೆಂಡಿಗೇರಿ ಪ್ರಕರಣದಲ್ಲಿ ವಿರೋಧಿ ಪ್ರತಿಭಟನಾ ರ್‍ಯಾಲಿಯಲ್ಲಿ ಇಡೀ ಮಾದೇವ ಕುಟುಂಬ ಭಾಗವಹಿಸುವುದರ ಮೂಲಕ ಆಳುವ ವರ್ಗದ ವಿರುದ್ಧ ಸಂಘರ್ಷ ಮುಂದಾಗಿರುವುದನ್ನು ಕಾಣಬಹುದು.

ನವೋದಯ ಸಂದರ್ಭದ ಸಾಹಿತ್ಯ ರಚನೆಯ ಹಿಂದೆ ರಾಜಕೀಯ, ಆರ್ಥಿಕ ಕಾರಣಗಳು ಸಾಹಿತ್ಯದ ಆಶಯ ಮತ್ತು ವಸ್ತುವಿಷಯದಲ್ಲಿ ರೂಪುಗೊಂಡಿವೆ. ಈ ಕಾಲದ ಬರಹಗಳು ವರ್ಣ ಮತ್ತು ಜಾತಿಯ ಸಮಸ್ಯೆಗಳನ್ನು ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ. ಇದರ ಜೊತೆಗೆ ಈ ದುಡಿಯುವ ವರ್ಗ ಮತ್ತು ಆಳುವ ವರ್ಗದ ನಡುವಿನ ಸಂಬಂಧಗಳನ್ನು ಅಭಿವ್ಯಕ್ತಿಸಿವೆ. ಇಲ್ಲಿ ಈ ಎರಡು ವರ್ಗಗಳು ಪರಸ್ಪರ ಒಂದರ ಮೇಲೆ ಒಂದು ಅವಲಂಬನೆಯಾಗಿರುವುದನ್ನು ಕಾಣಬಹುದು. ಅದೇ ರೀತಿ ಈ ಎರಡು ವರ್ಗಗಳು ಒಂದನ್ನು ಬಿಟ್ಟು ಒಂದಕ್ಕೆ ಅಸ್ತಿತ್ವವಿಲ್ಲ ಎಂಬುದನ್ನು ಕೂಡ ಕಾದಂಬರಿಗಳು ನಿರೂಪಿಸಿವೆ. ಈ ಕಾಲದಲ್ಲಿ ಬರೆಯುತ್ತಿದ್ದ ಕುವೆಂಪು, ಕಾರಂತ ಮುಂತಾದ ಲೇಖಕರು ಕಾದಂಬರಿಯ ಒಳಗೆ ವರ್ಗ ಸಂಬಂಧಗಳನ್ನು ತಂದಿದ್ದಾರೆ.

### ೪.೨. ದುಡಿಯುವ ವರ್ಗದ ಸ್ಥಿತ್ಯಂತರಗಳು

ಸಮಾಜ ನಿಂತ ನೀರಲ್ಲ. ಅದು ನಿರಂತರವಾಗಿ ಬದಲಾಗುವ ಪ್ರಕ್ರಿಯೆಯನ್ನು ಹೊಂದಿದೆ. ಅದಕ್ಕೆ ಹೊರಗಿನ ಪ್ರಭಾವಗಳೂ ಒಳಗಿನ ಒತ್ತಡಗಳೂ ಕಾರಣವಾಗಿರುತ್ತದೆ. ಸಮಾಜ, ಕುಟುಂಬ, ದೇಶ, ಮಾನವರ ಸಂಬಂಧಗಳು ಸಾಮಾಜಿಕ ಮೌಲ್ಯಗಳು ಮುಂತಾದವು ಬದಲಾಗುತ್ತಿರುತ್ತವೆ. ಅದೇ ರೀತಿಯಲ್ಲಿ ದುಡಿಯುವ ವರ್ಗವು ಕೂಡ ಯಾವಾಗಲೂ

ಜಡವಾಗಿರುವುದಿಲ್ಲ. ಅದು ಹೊರಗಿನ ಪ್ರಭಾವಗಳಿಂದಲೂ ಮತ್ತು ಒಳಗಿನ ಒತ್ತಡಗಳಿಂದಲೂ ಆಂಶಿಕವಾಗಿ ಬದಲಾಗುತ್ತಲೇ ಹೋಗುತ್ತದೆ. ಅದರಲ್ಲಿಯೂ ದುಡಿಯುವ ವರ್ಗದ ಈ ಬದಲಾಗುವಿಕೆಯನ್ನು ಕಾದಂಬರಿಗಳು ಹೇಗೆ ಗ್ರಹಿಸಿವೆ ಮತ್ತು ದುಡಿಯುವ ವರ್ಗದ ಬದಲಾವಣೆಯ ಸ್ಥಿತಿಯ ಬಗೆಗೆ ಕಾದಂಬರಿಗಳ ಆಸಕ್ತಿಯ ಸ್ವರೂಪ ಯಾವುದು ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ದುಡಿಯುವ ವರ್ಗದ ಬದುಕಿನ ಮೂಲ ಕ್ರಿಯೆಯೇ ದುಡಿಮೆ ಮತ್ತು ಶ್ರಮ. ಮಾನವನ ವಿಕಾಸದಿಂದ ಅಂದರೆ ಗೆಡ್ಡೆ-ಗೆಣಸುಗಳನ್ನು ತಿಂದು ಬದುಕುವಾಗಲೂ ಶ್ರಮವೇ ಮುಖ್ಯವಾಗಿತ್ತು. ನಂತರದ ಬದುಕು, ಉತ್ಪಾದನೆ, ಶ್ರಮ ಮತ್ತು ಒಡೆತನದ ಸ್ವರೂಪ ಮತ್ತು ವಿನ್ಯಾಸಗಳು ನಾಗರಿಕತೆಯ ಎಲ್ಲ ಕಾಲದಲ್ಲೂ ಒಂದೇ ರೀತಿಯಾಗಿಲ್ಲ ಇಲ್ಲಿ ಶ್ರಮ ಮುಖ್ಯವಾದುದು. ದುಡಿಮೆಯಲ್ಲಿ ಅನೇಕ ಬದಲಾವಣೆಗಳು ಜರುಗಿವೆ. ಅದರಿಂದ ಅಂದಿನ ದುಡಿಯುವ ವರ್ಗ ಒಂದೇ ರೀತಿಯಾಗಿರಲು ಸಾಧ್ಯವಿಲ್ಲ? ವರ್ಗವ್ಯವಸ್ಥೆಯ ಉತ್ಪಾದನಾ ವಿಧಾನಗಳು, ಉತ್ಪಾದನೆಯ ಒಡೆತನಗಳು, ಉತ್ಪಾದನೆಯ ಕೌಶಲಗಳು ಬದಲಾದಂತೆಲ್ಲಾ ದುಡಿಯುವ ವರ್ಗದ ಸ್ವರೂಪಗಳು ಮತ್ತು ಅದರ ಒಳವಿನ್ಯಾಸಗಳೂ ಬದಲಾಗುತ್ತಲೇ ಇರುತ್ತವೆ. ಆದರೆ ಅಸಮಾನತೆ ಮತ್ತು ಶೋಷಣೆ, ಒಪ್ಪಿತ ಮೌಲ್ಯಗಳು ಯಥಾಸ್ಥಿತಿಯಾಗಿ ಮುಂದುವರಿದುಕೊಂಡು ಬರದೆ, ಹೊಸ ಹೊಸ ರೀತಿಯಲ್ಲಿ ಈ ಶೋಷಣೆಯನ್ನು ವಿಸ್ತರಿಸಿಕೊಂಡು ಆಳುವ ವರ್ಗವು ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ದುಡಿಯುವ ವರ್ಗದ ಮೇಲೆ ಶೋಷಣೆ ಮಾಡುವುದನ್ನು ಕಾಣುತ್ತೇವೆ. ಇಲ್ಲಿ ಸಂಪತ್ತಿನ ಅಸಮಾನತೆ ಮತ್ತು ಶೋಷಣೆಯು ಮುಂದುವರೆಯಲು ಕಾರಣವೇ ಭೂಮಿಯ ಖಾಸಗೀ ಒಡೆತನ. ಆದ್ದರಿಂದ ವರ್ಗಕ್ಕೂ ಮತ್ತು ಭೂಮಿಗೆ ಸಂಬಂಧವಿದೆ. ಜಾತಿಗೂ ಭೂಮಿಗೂ ಸಂಬಂಧ ಇದೆ. ಆದರೆ ಆ ಸಂಬಂಧಗಳು ಸೌಹಾರ್ದ ಸಂಬಂಧವಲ್ಲ. ವರ್ಗ ತಾರತಮ್ಯದ ಅಸಮಾನತೆಯ ಸಂಬಂಧಗಳು. ಆದ್ದರಿಂದ ಈ ವರ್ಗವೈರುಧ್ಯತೆಗಳಿಂದ ದುಡಿಯುವ ವರ್ಗ ಮತ್ತು ಆಳುವ ವರ್ಗದ ಸ್ಥಿತ್ಯಂತರಗಳನ್ನು ಒಂದು ಪ್ರಕ್ರಿಯೆಯಾಗಿ ಗುರುತಿಸಬಹುದು.

ಸಾಹಿತ್ಯ, ಸಂಸ್ಕೃತಿ, ಸಂಶೋಧನೆ, ವೈಚಾರಿಕ ಆಲೋಚನೆಗಳಲ್ಲೂ ಹೊರಗಿನ ಪ್ರಭಾವ ಮತ್ತು ಒಳಗಿನ ಒತ್ತಡಗಳಿಂದ ಜರುಗುತ್ತಿವೆ. ಈ ಬದಲಾವಣೆಯನ್ನು ಸಾಹಿತ್ಯ ಕೃತಿಗಳು ಭಿನ್ನ ಭಿನ್ನವಾಗಿ ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ. ಸಾಹಿತ್ಯವು ಎಲ್ಲಾ ಕಾಲಘಟ್ಟದಲ್ಲಿಯೂ ಈ ಪ್ರಕ್ರಿಯೆಯನ್ನು ಅಳವಡಿಸಿಕೊಂಡು ರಚನೆಯಾಗುತ್ತ ಬಂದಿದೆ. ಬರಹಗಾರರು ಸಾಮಾಜಿಕ ವ್ಯವಸ್ಥೆಯನ್ನು ನೋಡುವ ದೃಷ್ಟಿಕೋನದಲ್ಲಿ ಅವರ ರಾಜಕೀಯ ಚಿಂತನೆಗಳು ಕೃತಿಯಲ್ಲಿ ಕಾಣಸಿಗುತ್ತವೆ. ಭೌತಿಕವಾಗಿ ವಸ್ತುಜಗತ್ತಿನಲ್ಲಿ ಆದ ಬದಲಾವಣೆಗಳು ದುಡಿಯುವ ವರ್ಗದ ಮೇಲೆ ಯಾವ ರೀತಿಯಲ್ಲಿ ಪ್ರಭಾವಿಸುತ್ತವೆ ಎಂಬುದನ್ನು ಸಾಹಿತ್ಯ ಕೃತಿಗಳು ಕಟ್ಟಿಕೊಟ್ಟಿವೆ. ದುಡಿಯುವ ವರ್ಗವನ್ನು ಅವರ ದುಡಿಮೆ ಮತ್ತು ಬದುಕನ್ನು ಹೊರಗಿನಿಂದ ನೋಡುವ

ದೃಷ್ಟಿಕೋನಕ್ಕೂ ಸಾಹಿತ್ಯ ಕೃತಿಯೊಂದು ಚಿತ್ರಿಸುವ ಧೋರಣೆಗೆ ಬಹಳ ಭಿನ್ನತೆಗಳಿವೆ. ಇಲ್ಲಿ ಹೊರಗಿನಿಂದ ನೋಡುವುದು ಸರಳವಾದ ಚಿತ್ರಣವಾದರೆ ಸಾಹಿತ್ಯ ಕೃತಿಯು ಹೊರಗಿನಿಂದ ನೋಡುವುದಿಲ್ಲ. ಅದು ಸಮಾಜದ ಎಲ್ಲಾ ವರ್ಗಗಳ ಬದುಕಿನ ನಾನಾ ಸಮಸ್ಯೆಗಳನ್ನು ವರ್ಗಗಳ ನಡುವಿನ ವೈರುಧ್ಯತೆಗಳನ್ನು ಸೂಕ್ಷ್ಮವಾಗಿ ನಿರೂಪಿಸುತ್ತಿರುತ್ತದೆ. ಸಮಾಜ, ರಾಜಕೀಯ, ಆರ್ಥಿಕ, ಮಾರುಕಟ್ಟೆ ಮುಂತಾದ ಅಂಶಗಳನ್ನು ಸೂಕ್ಷ್ಮವಾಗಿ ತನ್ನ ಧೋರಣೆಯಲ್ಲಿ ತರುತ್ತದೆ. ಆದರೆ ಹೊರಗಿನ ಮತ್ತು ಒಳಗಿನ ಒತ್ತಡ ಮತ್ತು ಪ್ರಭಾವಗಳು ದುಡಿಯುವ ವರ್ಗವನ್ನು ಅಥವಾ ಸಮಾಜವನ್ನು ಜಡವಾಗಿ ಇರಲು ಬಿಡದೆ ಅದನ್ನು ಬದಲಾಯಿಸುತ್ತಿರುತ್ತದೆ. ಸಾಹಿತ್ಯ ಕೃತಿಯನ್ನು ಗಮನಿಸಿದಾಗ ವರ್ಗಗಳ ನಡುವೆ ಭಿನ್ನಮತ, ಸಹಮತ ಮತ್ತು ಸಂಘರ್ಷಗಳು ನಡೆಯುತ್ತಲೇ ಇರುತ್ತದೆ. ಇದಕ್ಕೆ ಕಾರಣವಾದ ಅಂಶಗಳು ಅಸಮಾನತೆ ಮತ್ತು ಯಜಮಾನಿಕೆ ವ್ಯವಸ್ಥೆಯು ಕಾರಣವಾಗಿರುತ್ತದೆ.

ಕಾದಂಬರಿ ಸಾಹಿತ್ಯವನ್ನು ಕುರಿತು ಹೇಳುವುದಾದರೆ, ಎಲ್ಲಾ ಕಾದಂಬರಿಗಳು ಒಂದೇ ರೀತಿಯಾದ ದುಡಿಯುವ ವರ್ಗವನ್ನು ಚಿತ್ರಿಸಿರುವುದಿಲ್ಲ. ಅವು ಪಾತ್ರಗಳ ಮೂಲಕ ದುಡಿಯುವ ವರ್ಗವನ್ನು ತಂದರು. ಅವುಗಳ ವ್ಯಕ್ತಿ ಮತ್ತು ಕಾದಂಬರಿಕಾರರ ಧೋರಣೆಯು ಆ ಕೃತಿಯಲ್ಲಿ ದುಡಿಯುವ ವರ್ಗವನ್ನು ಅನೇಕ ರೀತಿಯಲ್ಲಿ ಚಿತ್ರಿಸಿದ್ದಾರೆ. ಅದೇ ರೀತಿಯಲ್ಲಿ ಒಂದೇ ಕಾದಂಬರಿಯ ಒಳಗೆ ದುಡಿಯುವ ವರ್ಗದ ಸ್ವರೂಪದಲ್ಲಿ ಬದಲಾವಣೆಗಳು ಕಾಣುತ್ತವೆ. ಇವುಗಳನ್ನು ಮುಖ್ಯವಾಗಿ ಗಮನಿಸಿ ದುಡಿಯುವ ವರ್ಗದ ಬದಲಾಗುವಿಕೆಯ ಸ್ವರೂಪ, ಅದರ ಒಳವಿನ್ಯಾಸಗಳ ಮತ್ತು ಆಳುವ ವರ್ಗ ಮತ್ತು ದುಡಿಯುವ ವರ್ಗಗಳ ನಡುವೆ ಸಂಬಂಧಗಳ ಮೂಲಕ ದುಡಿಯುವ ವರ್ಗದ ಸ್ಥಿತ್ಯಂತರಗಳನ್ನು ಇಲ್ಲಿ ಚರ್ಚಿಸಲಾಗುವುದು.

'ಚೋಮನ ದುಡಿ' ಕಾದಂಬರಿಯಲ್ಲಿ ಅಸಮಾನತೆ ಮತ್ತು ಶೋಷಣೆಗಳಿಂದ ಕೂಡಿರುವ ಸಮಾಜದ ಚಿತ್ರಣ ಇದೆ. ಇಲ್ಲಿ ಚೋಮನ ಕುಟುಂಬವು ತನ್ನ ಹಕ್ಕುಗಳನ್ನು ಕಳೆದುಕೊಂಡು ಮೇಲ್ವರ್ಗ, ಮೇಲ್ಜಾತಿಯ ಶೋಷಣೆ ಒಳಗಾಗಿರುವುದನ್ನು ಕಾಣುತ್ತೇವೆ. ಇವರು ಜೀವನ ನಿರ್ವಹಿಸಿಕೊಳ್ಳಲು ದುಡಿಮೆ ಮತ್ತು ಉತ್ಪಾದನೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಆದರೆ ಇವರ ದುಡಿಮೆಯ ಪ್ರತಿಫಲವನ್ನು ವಂಚಿಸಿರುವ ಭೂಮಾಲೀಕ ವ್ಯವಸ್ಥೆಯು ಇವರನ್ನು ನಿರಂತರವಾಗಿ ಶೋಷಣೆ ಮಾಡುತ್ತಿದೆ. ಈ ಮೂಲಕ ಆಳುವ ವರ್ಗವು ತನ್ನ ಅಸ್ತಿತ್ವದ ಉಳಿವಿಗಾಗಿ ಪ್ರಯತ್ನ ಮಾಡುತ್ತದೆ. ಆದರೆ ದುಡಿಯುವ ವರ್ಗವು ತನ್ನ ಹಕ್ಕುಗಳನ್ನು ಕಳೆದುಕೊಂಡು ಭೂಮಾಲೀಕ ವರ್ಗದೊಂದಿಗೆ ವರ್ಗಸಂಧಾನದ ನೆಲೆಯಲ್ಲಿ ಇರುವುದನ್ನು ಕಾಣಬಹುದು. ಶ್ರೀಮಂತ ವರ್ಗದ ಪ್ರತಿನಿಧಿಗಳಾದ ಸಂಕಪ್ಪಯ್ಯನ ಶೋಷಣೆಯನ್ನು ಎದುರಿಸಲು ಸಾಧ್ಯವಾಗದೇ ಅವರೊಂದಿಗೆ ನಯ ವಿನಯದಿಂದ ನಡೆದುಕೊಳ್ಳುವ ಅವರು ಹೇಳಿದಂತೆ ಕೇಳುವ ತನ್ನ ಮೇಲಿನ ಶೋಷಣೆಯ ಅರಿವು ಗೊತ್ತಿದ್ದರೂ ಅದನ್ನು ಪ್ರತಿಭಟಿಸದೆ ಮುಗ್ಧನಾಗಿ ಇರುವ ಚೋಮನನ್ನು ಇಲ್ಲಿ ಗುರುತಿಸಬಹುದು.

ಕಾದಂಬರಿಯಲ್ಲಿ ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾಗಿರುವ ದುಡಿಯುವ ವರ್ಗವು ತನ್ನದೇ ಆದ ತುಂಡುಭೂಮಿಗಾಗಿ ಆಸೆಪಟ್ಟು ಅದನ್ನು ಗೇಣಿರೂಪದಲ್ಲಿ ಪಡೆದುಕೊಳ್ಳಲು ಪ್ರಯತ್ನಿಸಿ ಸೋಲುವುದನ್ನು ಕಾಣುತ್ತೇವೆ. ಇಲ್ಲಿ ಚೋಮನು ತನ್ನ ಜಾತಿಯನ್ನು ಮೀರಿ ಭೂಮಿಯನ್ನು ಪಡೆದುಕೊಳ್ಳುವ ಪ್ರಯತ್ನ ಮಾಡುತ್ತಾನೆ. ಆದರೆ ಕ್ರಿಶ್ಚಿಯನ್ ಧರ್ಮವನ್ನು ಸ್ವೀಕರಿಸಲು ಹೊರಟ ಚೋಮನು ಭೂತಕ್ಕೆ ಹೆದರಿ ತನ್ನ ನಿರ್ಧಾರವನ್ನು ಬದಲಾಯಿಸಿಕೊಳ್ಳುತ್ತಾನೆ. ಆದರೆ ಗೇಣಿ ಕೇಳುವುದನ್ನು ಮಾತ್ರ ನಿಲ್ಲಿಸುವುದಿಲ್ಲ. ಆದರೆ ಅವನ ನಂತರದ ತಲೆಮಾರು ಈ ಹಿಂದೂಧರ್ಮದ ಚೌಕಟ್ಟನ್ನು ಮೀರಿ 'ಮತಾಂತರ' ಹೊಂದಿಯಾದರೂ ಭೂಮಿಯ ಹಕ್ಕನ್ನು ಪಡೆದುಕೊಂಡರು. ಇಲ್ಲಿ ವರ್ಗವೈರುಧ್ಯತೆಗಳು ಎಷ್ಟೇ ಇದ್ದರೂ, ಇತರರೊಂದಿಗೆ ಮಾನವರಂತೆ ಜೀವಿಸಲು ಅಪೇಕ್ಷಿಸುವುದನ್ನು ಕಾಣುತ್ತೇವೆ. ಇಲ್ಲಿ ಜಾತಿಶೋಷಣೆಯಿಂದ ಹೊರಬರುವ ದುಡಿಯುವ ವರ್ಗದ ತುಡಿತ ಇದೆ. ಅದೇ ಹೊತ್ತಿನಲ್ಲಿ ಜಾತಿಶೋಷಣೆಯ ಒಳಗೆ ಇಡೀ ದುಡಿಯುವ ವರ್ಗವನ್ನು ಬಂಧಿಸಿ, ಅವರ ಹಕ್ಕುಗಳನ್ನು ವಂಚಿಸುವ ಭೂಮಾಲೀಕ ವರ್ಗದ ಆರ್ಥಿಕ ಅಜೆಂಡ ಇದೆ. ಇಲ್ಲಿ ದುಡಿಯುವ ವರ್ಗವು ಊಳಿಗಮಾನ್ಯ ವ್ಯವಸ್ಥೆಯ ಶೋಷಣೆಯಿಂದ ಬಿಡುಗಡೆ ಹೊಂದುವ ಚೋಮನ ನಂತರದ ತಲೆಮಾರು. ಹಾಗೆಯೇ ತನ್ನ ಹಕ್ಕುಗಳನ್ನು ಪಡೆದುಕೊಳ್ಳಲಾರದೆ ಇರುವ ಚೋಮನ ಸ್ಥಿತಿಯನ್ನು ಕಾಣುತ್ತೇವೆ. ಇಲ್ಲಿ ಹೊರಗಿನ 'ಮತಾಂತರ' ಪ್ರಕ್ರಿಯೆ ದುಡಿಯುವ ಜನರಲ್ಲಿ ಭೂಮಿಯ ಉಳುಮೆ ಮಾಡುವ ಆಸೆಯನ್ನು ಹುಟ್ಟು ಹಾಕಿದೆ. ಅದೇ ರೀತಿಯಲ್ಲಿ ಚೋಮನ ಕೂಡ ತನ್ನ ಒಳಗಿನ ಆಸೆಯು ಭೂಮಿಯನ್ನು, ಉಳುಮೆ ಮಾಡುವ ಒತ್ತಾಸೆಯನ್ನು ಮುಂದಿಡುವುದನ್ನು ಕಾಣುತ್ತೇವೆ. ಆದರೆ ಕಥಾಸಾಹಿತ್ಯವು ಈ ದುಡಿಯು ವರ್ಗದ ಆಸೆ, ಒತ್ತಾಸೆಯನ್ನು ಮುಂದೆ ತಂದಿದೆ ಹೊರತು ಅವರ ಕಳೆದುಕೊಂಡಿರುವ ಹಕ್ಕುಗಳನ್ನು ವರ್ಗಪ್ರಜ್ಞೆಯ ಭಾಗವಾಗಿ ಪಡೆದುಕೊಳ್ಳಲಾರದ ದುಡಿಯುವ ವರ್ಗದ ಚಿತ್ರಣವನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ.

'ಕುಡಿಯರ ಕೂಸು' ಕಾದಂಬರಿಯಲ್ಲಿ ಬರುವ ಕುಡಿಯ ಸಮುದಾಯ ಆಧುನಿಕ ಪ್ರವೇಶ ಮತ್ತು ಭೂಮಾಲೀಕ ವರ್ಗದೌರ್ಜನ್ಯದಿಂದ ತನ್ನ ಹಕ್ಕುಗಳನ್ನು ಕಳೆದುಕೊಂಡು ಜೀತದ ಆಳುಗಳಾಗಿ ದುಡಿಯುತ್ತಿರುವುದನ್ನು ಕಾದಂಬರಿ ಚಿತ್ರಿಸುತ್ತದೆ. ಈ ಕುಡಿಯ ಸಮುದಾಯ ತಲತಲಾಂತರದಿಂದ ಹೊಂದಿದ ಭೂಮಿಯ ಹಕ್ಕು. ಇದು ಭೂಮಾಲೀಕ ವರ್ಗವು ವಂಚಿಸಿ ತನ್ನ ಆಧೀನದಲ್ಲಿ ಇಟ್ಟುಕೊಂಡಿರುವ ದುಡಿಯುವ ವರ್ಗವನ್ನು ಕಾಣುತ್ತೇವೆ. ಕುಮರಿ ಭೂಮಿಯಲ್ಲಿ ಸಾಮೂಹಿಕವಾಗಿ ದುಡಿದು ಜೀವನ ನಡೆಸುತ್ತಿದ್ದ ಇವರು ಭೂಮಾಲೀಕ ತಿರುಮಲಭಟ್ಟ ಶೋಷಣೆ ಮತ್ತು ದೌರ್ಜನ್ಯದಿಂದ ತನ್ನ ಹಕ್ಕುಗಳನ್ನು ಕಳೆದುಕೊಂಡು ಬದುಕುವಂತಹ ಸ್ಥಿತಿಯನ್ನು ಆಳುವ ವರ್ಗ ನಿರ್ಮಾಣ ಮಾಡಿದೆ. ಅದೇ ಹೊತ್ತಿನಲ್ಲಿ ಈ ಮಾಲೀಕ ವರ್ಗವು ಕಾಡಿಗೆಲ್ಲ ಏಲಕ್ಕಿ ಕೃಷಿಯನ್ನು ವಿಸ್ತರಿಸಿದ್ದರಿಂದ ಈ ಕುಡಿಯ ಸಮುದಾಯ ಅವನ ಮೇಲೆ ಅವಲಂಬಿತವಾಗಿ ದುಡಿಯುವಂತಾಯಿತು. ವರ್ಷಕ್ಕೊಂದು ಬಟ್ಟೆ, ಉಪ್ಪು, ಹೀಗಾಗಿ ವರ್ಷವೆಲ್ಲ

ದುಡಿಸಿಕೊಳ್ಳುವ ಆಳುವ ವರ್ಗವನ್ನು ಕಾಣುತ್ತೇವೆ. ಇಲ್ಲಿ ಆಧುನಿಕತೆ ಮತ್ತು ಭೂಮಾಲೀಕ ವರ್ಗದ ದೌರ್ಜನ್ಯದಿಂದ ದುಡಿಯುವ ವರ್ಗವು ತನ್ನ ಮೂಲ ನೆಲೆಗೆ ಧಕ್ಕೆಯಾಗಿ ಜೀತದ ಆಳುಗಳಾಗಿ ಬದಲಾಗಿದ್ದರೆ ಹಾಗೂ ಈ ಭೂಮಾಲೀಕ ವರ್ಗದ ನಿರಂತರ ಶೋಷಣೆಗೆ ಒಳಗಾಗಿರುವ ಈ ಶ್ರಮ ಜೀವಿಗಳು ತನ್ನ ಶೋಷಣೆಯ ವಿರುದ್ಧ ಜಾಗೃತರಾಗುತ್ತಿರುವುದನ್ನು ಗುರುತಿಸಬಹುದು. ಕುಲದ ವಿಷಯದಲ್ಲಿ ಮಾಲೀಕ ವರ್ಗದ ರಾಜಕೀಯ ಕೈವಾಡವನ್ನು ವಿರೋಧಿಸುತ್ತಿದ್ದಾರೆ ಮತ್ತು ಗಿಡ್ಡಿ ಪ್ರಕರಣದಲ್ಲಿ ಬೆಳ್ಳಿಯ ಪ್ರಕರಣದಲ್ಲಿ ಮಾಲೀಕ ವರ್ಗದ ವಿರುದ್ಧ ಸಂಘರ್ಷಕ್ಕೆ ಇಳಿಯುವ ವರ್ಗಜಾಗೃತಿಯು ಇವರಲ್ಲಿ ಬೆಳೆಯುತ್ತಿದೆ. ಆದರೆ ಆರ್ಥಿಕ ಅಸಮಾನತೆ, ಭೂಮಿಯ ಹಕ್ಕಿನ ಪ್ರಶ್ನೆಗಳನ್ನು ಕಾದಂಬರಿಯು ನಯವಾಗಿ ಮುಚ್ಚಿಡುತ್ತದೆ. ಆಧುನಿಕತೆಯ ಹೊರಗಿನ ಒತ್ತಡಗಳನ್ನು ಗಂಭೀರವಾಗಿ ಪರಿಗಣಿಸುವ ಕಾದಂಬರಿಯು ಕುಡಿಯರು ಕಳೆದುಕೊಂಡಿರುವ ಭೂಮಿಯ ಹಕ್ಕನ್ನು ಕುರಿತು ವಿಶ್ಲೇಷಣೆಯು ಯಾಂತ್ರಿಕ ಸ್ವರೂಪದ್ದಾಗಿದೆ.

'ಹೇಮಾವತಿ' ಕಾದಂಬರಿಯಲ್ಲಿ ಹೊಲೆಯ ಸಮುದಾಯ ಶ್ರೀನಿವಾಸ ಪೆರುಮಾಳರ ಮನೆಯ ಖಾಯಂ ಜೀತಗಾರ ವೃತ್ತಿಯನ್ನು ಇದಕ್ಕೆ ನಿದರ್ಶನವಾಗಿ ಮಾಡುತ್ತಿದೆ. ಕಾದಂಬರಿಯಲ್ಲಿ ಬರುವ ಕಾಳನ ಪಾತ್ರವನ್ನು ಗಮನಿಸಬಹುದು. ಮೇಲ್ವರ್ಗ ಮತ್ತು ಮೇಲ್ಜಾತಿಗಳ ಶೋಷಣೆಗೆ ಒಳಗಾಗಿರುವ ಈ ಹೊಲೆಯ ಸಮುದಾಯವನ್ನು ಸ್ವಾತಂತ್ರ್ಯದ ಸಂದರ್ಭದ ಅನೇಕ ಚಿಂತನೆಗಳು ಪ್ರಭಾವಿಸುತ್ತವೆ. ಆ ಸೂಕ್ಷ್ಮತೆಯನ್ನು ಕಾದಂಬರಿಯಲ್ಲಿ ಕಾಣಬಹುದು. ಗಾಂಧೀವಾದ, ಅಂಬೇಡ್ಕರ್ ವಾದಗಳ ಮುಖ್ಯ ಕಾಳಜಿಯನ್ನು ಇಲ್ಲಿ ಗುರುತಿಸಬಹುದು. ಅಸ್ಪೃಶ್ಯರು ದೇವಾಲಯ ಪ್ರವೇಶದ ಹಕ್ಕನ್ನು ಕೊಡಬೇಕು ಎನ್ನುವ ಗಾಂಧೀವಾದ ಚಿಂತನೆ ಇಲ್ಲಿ ಮೇಲ್ಜಾತಿಯ ಜನರ ಮನಸ್ಸನ್ನು ಬದಲಿಸಿದೆ. ಆ ಕಾರಣದಿಂದ "ದಲಿತೋದ್ಧಾರದ ಕಾಳಜಿಯನ್ನು ಹೊತ್ತ ಸವರ್ಣೀಯ ಪಾತ್ರಗಳು ಅಸ್ಪೃಶ್ಯತೆಯ ನಿವಾರಣೆಗಾಗಿ ದುಡಿಯುವುದು ಈ ಕಾಲದ ಕಾದಂಬರಿಗಳಲ್ಲಿ ಆದರ್ಶವೆಂಬಂತೆ ಮೂಡಿಬಂದಿದೆ."[೨] ಆದ್ದರಿಂದ ಹೊಲೆಯರ ಚೆನ್ನಿ ಸಂಗೀತಾಭ್ಯಾಸ ಕಲಿಯಲು ಸಾಧ್ಯವಾಗಿದೆ. ಆದರೆ ಮೇಲ್ಜಾತಿಗಳ ಮನಃಪರಿವರ್ತನೆ ಪ್ರಭಾವದಿಂದ ದುಡಿಯುವ ವರ್ಗದಲ್ಲಿ ಬದಲಾವಣೆಗಳು ಸುಳಿಯುತ್ತವೆ.

ಆದರೆ ದುಡಿಯುವ ವರ್ಗದ ಆರ್ಥಿಕ ಶೋಷಣೆಯಲ್ಲಿ ಯಾವ ಬದಲಾವಣೆಗಳೂ ಜರುಗುವುದಿಲ್ಲ. ಭೂಮಿಯ ಒಡೆತನ ಹೊಂದಿರುವವರು ಶೋಷಣೆಯನ್ನು ಮುಂದುವರಿಸಿದ್ದಾರೆ. ಹಾಗೆಯೇ ಕಾದಂಬರಿಯಲ್ಲಿ ಈ ಎರಡು ವರ್ಗಗಳ ನಡುವೆ ಮಾನಸಿಕ ಮತ್ತು ಭಾವನಾತ್ಮಕ ಸಂಬಂಧಗಳು ಇವೆಯೇ ಹೊರತು ಈ ಸಂಬಂಧಗಳು ದುಡಿಯುವ ವರ್ಗದ ಬದಲಾವಣೆಯ ಸೂಚನೆಗಳಾಗಿ ಬಳಕೆಯಾಗಿವೆ. ಹೀಗೆ ಕಾದಂಬರಿಯು ವರ್ಗ ಸಂಘರ್ಷಗಳನ್ನು ಮುಚ್ಚಿಟ್ಟಿದೆ. ಜೊತೆಗೆ ಸುಧಾರಣೆಯ ಹೆಸರಲ್ಲಿ ದುಡಿಯುವ ವರ್ಗದ ಬದಲಾವಣೆಯನ್ನು ಮೇಲ್ವರ್ಗದ ಪ್ರಜ್ಞೆಯ ಭಾಗವಾಗಿ ಗ್ರಹಿಸಿರುವುದನ್ನು ಕಾಣುತ್ತೇವೆ.

ಕುವೆಂಪು ಅವರ 'ಕಾನೂರು ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ಹೊಲೆಯ ಸಮುದಾಯವನ್ನು ದುಡಿಯುವ ವರ್ಗವಾಗಿ ಗುರುತಿಸಿದೆ. ಬ್ರಾಹ್ಮಣರೂ ಗೌಡರೂ ಶೆಟ್ಟರೂ ಈ ಹೊಲೆಯ ಸಮುದಾಯವನ್ನು ನಿರಂತರವಾಗಿ ಶೋಷಣೆ ಮಾಡುತ್ತಿದ್ದಾರೆ. ಇಲ್ಲಿ ಬರುವ ದಲಿತ ವರ್ಗವು ಯಾವುದೇ ಭೂಮಿಯ ಹಕ್ಕನ್ನು ಹೊಂದಿರುವುದಕ್ಕೆ ಸೂಚನೆಗಳು ಕೂಡ ಕಾಣಿಸುತ್ತಿಲ್ಲ. ಹಾಗಾಗಿ ಈ ಸಮುದಾಯ ಭೂಮಾಲೀಕ ವರ್ಗದವರ ಭೂಮಿಯಲ್ಲಿ ದುಡಿದು ಬದುಕುತ್ತಿರುವುದನ್ನು ಕಾಣುತ್ತೇವೆ. ಇವರ ದುಡಿಮೆಯ ಪ್ರತಿಫಲವನ್ನು ಆಳುವ ವರ್ಗ ವಂಚಿಸಿರುವುದರಿಂದ ಇವರು ದುಡಿಯುವ ವರ್ಗವಾಗಿ ಮುಂದುವರಿಯುತ್ತಿದ್ದಾರೆ. ಆಳುವ ವರ್ಗ ಶೋಷಕವರ್ಗವಾಗಿ ಕಾಣಿಸುತ್ತಾರೆ. ಕಾದಂಬರಿಯಲ್ಲಿ ಜಾತಿಯ ಕೀಳಾಗಿ ಭಾವಿಸಿರುವ ಕಾರಣಕ್ಕಾಗಿ ಕೀಳಾಗಿ ನೋಡುವ ಮೇಲ್ವರ್ಗ, ಮೇಲ್ಜಾತಿಗಳು ಅಧಿಕಾರ, ಸ್ಥಾನಮಾನ, ಆರ್ಥಿಕ ಸಂಪನ್ಮೂಲಗಳಿಗಾಗಿ ಜಾತಿಯ ಸಮಸ್ಯೆಯನ್ನು ಸಮಸ್ಯೆಯಾಗಿ ನೋಡದೆ ಅದನ್ನು ವರವಾಗಿ ಸ್ವೀಕರಿಸಿದೆ. ಆದರೆ ದುಡಿಯುವ ವರ್ಗಕ್ಕೆ ಇದು ಶಾಪವಾಗಿದ್ದರೂ ಕಾದಂಬರಿಯು ಈ ಜಾತಿಯ ಸಮಸ್ಯೆಯನ್ನು ಮತ್ತಷ್ಟು ವಿಭಾಗಿಸಿ ನೋಡಲು ಪ್ರಯತ್ನಿಸುತ್ತಿದೆಯೇ ಹೊರತು ಅದರಿಂದ ಬಿಡುಗಡೆಯ ಸೂಚನೆ ಇಲ್ಲಿ ಕಾಣಿಸುವುದಿಲ್ಲ.

ಹೀಗೆ ದುಡಿಯುವ ವರ್ಗವನ್ನು ಎಂದೆಂದಿಗೂ ಒಂದಾಗದ ಹಾಗೆ ನೋಡಿಕೊಳ್ಳುವ ಆಳುವ ವರ್ಗ ತನ್ನ ಅಸ್ತಿತ್ವಕ್ಕಾಗಿ ದುಡಿಯುವ ಜನರ ಜಾಗೃತಿಯನ್ನು, ಅವರ ಸುಧಾರಣೆ, ಬದಲಾವಣೆಯನ್ನು ಬಯಸುವುದಿಲ್ಲ. ಈ ದುಡಿಯುವ ವರ್ಗದವರನ್ನು 'ಹೊನ್ನಾಳಿ ಹೊಡ್ತ'ದ ಹೆಸರಲ್ಲಿ ನಿಯಂತ್ರಿಸುತ್ತಾರೆ. ಆದರೆ ಕಾದಂಬರಿಯು ದುಡಿಯುವ ವರ್ಗದವರ ಮೇಲೆ ಮೇಲ್ವರ್ಗದವರು ಮಾಡುವ ಶೋಷಣೆಯ ಪ್ರಭಾವದಿಂದ ಉಂಟಾಗುವ ಆರ್ಥಿಕ ಚಿಂತನೆಗಳಲ್ಲಿ ಯಾವುದೇ ಬದಲಾವಣೆಗಳನ್ನು ಸೂಚಿಸುವುದಿಲ್ಲ. ಆದರೆ ಹೊಲೆಯರವನಾದ ನಾಯಿಗುತ್ತಿಯ ಪೊಲೀಸರಿಂದ ತಪ್ಪಿಸಿಕೊಂಡು ಹೋಗುತ್ತಿರುವಾಗ ತನ್ನ ಸ್ಥಿತಿಯನ್ನು ಕುರಿತು ಯೋಚಿಸುತ್ತಾ "ನಾನು ಹೊಲೆಯರವನಲ್ಲದೆ ಬ್ಯಾರೆ ಜಾತಿಗೆ ಸೇರಿದವನಾಗಿದ್ದರೆ ಹೀಗಾಗುತ್ತಿತ್ತೆ"[7] ಎಂದು ಕೇಳುತ್ತಾನೆ. ಇಲ್ಲಿ ಜಾತಿಯ ಶೋಷಣೆಯ ವಿರುದ್ಧ ಜಾಗೃತಿಯನ್ನು ಕಾಣುತ್ತೇವೆಯೇ ಹೊರತು ಅದು ಪ್ರಯೋಗಶೀಲವಾಗಿ ಕಾದಂಬರಿಯಲ್ಲಿ ನಿರೂಪಣೆಗೊಂಡಿಲ್ಲ. ಹೀಗೆ ದುಡಿಯುವ ವರ್ಗದ ಮೇಲೆ ದಬ್ಬಾಳಿಕೆ, ದೌರ್ಜನ್ಯಗಳು ನಡೆಯುತ್ತಿವೆ. ಆದರೆ ಆ ಶೋಷಣೆಯನ್ನು ಎದುರಿಸಿ ನಿಲ್ಲುವ ಯಾವ ಪ್ರತಿರೋಧವು ಕಾದಂಬರಿಯ ನಿರೂಪಣೆಯಲ್ಲಿ ಕಾಣುವುದಿಲ್ಲ. ಆದ್ದರಿಂದ ದಲಿತ ವರ್ಗದವರ ಬದಲಾವಣೆಗೆ ಈ ಭೂಮಾಲೀಕ ವರ್ಗವೇ ಅಡ್ಡಿಯಾಗಿದೆ ಎಂದು ಚಿತ್ರಿಸುತ್ತಿದೆ.

ನಿರಂಜನರ 'ಚಿರಸ್ಮರಣೆ' ಕಾದಂಬರಿಯಲ್ಲಿ ದುಡಿಯುವ ವರ್ಗದ ಪಾತ್ರಗಳು ತನ್ನ ಶೋಷಣೆಯ ವಿರುದ್ಧ ಜಾಗೃತರಾಗಿರುವುದನ್ನು ಚಿತ್ರಿಸುತ್ತದೆ. ಭೂಮಾಲೀಕ ವರ್ಗವನ್ನು ಪ್ರತಿನಿಧಿಸುವ

ನಂಬೂದರಿ ಮತ್ತು ನಂಬಿಯಾರ ರೈತರ ಭೂಮಿಯನ್ನು ಅಕ್ರಮವಾಗಿ ಕಿತ್ತುಕೊಂಡು ಅವರನ್ನು ಶೋಷಣೆ ಮಾಡುತ್ತಿದ್ದಾರೆ. ಹೀಗೆ ಶೋಷಣೆಗೆ ಒಳಗಾಗಿರುವ ದುಡಿಯುವ ಸಮುದಾಯದಲ್ಲಿ ಹೊರಗಿನ ಪ್ರಭಾವ ಮತ್ತು ಒಳಗಿನ ಒತ್ತಡಗಳಿಂದ ಜಾಗೃತರಾಗಿ ವರ್ಗ ಹೋರಾಟಕ್ಕೆ ಮುಂದಾಗಿದ್ದಾರೆ. "ಇವತ್ತಿನಿಂದ ನಾವು ಜಮೀನ್ದಾರರ ಒಕ್ಕಲು", "ಜಮೀನ್ದಾರ ಇಷ್ಟು ಕ್ರೂರಿಯಾಗ್ಬಹುದೂಂತ ನಾನು ಭಾವಿಸಿರಿಲ್ಲ ಕಲ್ಯಾಣಿ", "ನಿನ್ನೆ ನಾವು ಸ್ವಂತ ಆಸ್ತಿ ಇದ್ದ ರೈತರು ಊರಲ್ಲಿ ನಮಗೆ ಮಾನ ಮರ್ಯಾದೆ ಸಿಗ್ತಿತ್ತೇ ಇವತ್ತು ನಾವು ಧನಿಗಳ ಒಕ್ಕಲು ಗುಲಾಮರ"[೫] ಎಂದು ಚಿರಕುಂಡನ ತಂದೆಯ ಮಾತು ಮೇಲ್ವರ್ಗವು ದೌರ್ಜನ್ಯದಿಂದ ಭೂಮಿಯನ್ನು ವಶಪಡಿಸಿಕೊಂಡು ಅವರನ್ನು ಜೀತದ ಆಳುಗಳಾಗಿ ದುಡಿಸಿಕೊಳ್ಳುತ್ತಿರುವ ಸಾಮಾಜಿಕ ಚಿತ್ರಣವನ್ನು ಇಲ್ಲಿ ಕಾಣಬಹುದು. ಈ ಕಾರಣದಿಂದ ದುಡಿಯುವ ವರ್ಗವು ತನ್ನ ಹಕ್ಕಿಗಾಗಿ ಹೋರಾಟದ ಪ್ರಜ್ಞೆಯನ್ನು ಬೆಳೆಸಿಕೊಂಡಿದೆ. ಅದರಲ್ಲಿಯೂ ಈ ಕಾದಂಬರಿಯ ರಚನೆಯ ಕಾಲದ ದೇಶಪ್ರೇಮದ ಪ್ರಶ್ನೆ ಮತ್ತು ಮಾರ್ಕ್ಸ್‌ವಾದದ ಪ್ರಭಾವ ಈ ಕೃತಿಯ ಮೇಲೆ ನಡೆದಿದೆ. ಇಲ್ಲಿ ದುಡಿಯುವ ಜನರನ್ನು ಈ ಕಮ್ಯೂನಿಸ್ಟ್ ಸಿದ್ಧಾಂತದ ಅಡಿಯಲ್ಲಿ ಸಂಘಟಿತರಾಗಿ ವರ್ಗಶತ್ರುವಾದ ಬಂಡವಾಳಶಾಹಿ ಮತ್ತು ಭೂಮಾಲೀಕ ವರ್ಗದ ವಿರುದ್ಧ ಹೋರಾಡುವ ಮನೋಭಾವನ್ನು ದುಡಿಯುವ ವರ್ಗ ಅನುಸರಿಸಿದೆ. ಇಲ್ಲಿ ಸಮಾಜದ ಸೂಕ್ಷ್ಮವಾದ ರಾಜಕೀಯ ಚಿಂತನೆಗಳು ದುಡಿಯುವ ವರ್ಗದ ಸಾಮಾಜಿಕ ಹಕ್ಕುಗಳನ್ನು ಸಮಾನತೆಯ ಹಾದಿಯಲ್ಲಿ ಕೇಳುವುದು ತಾವು ಕಳೆದುಕೊಂಡಿರುವ ಭೂಮಿಯನ್ನು ಪಡೆದುಕೊಳ್ಳುವ ಹಂಬಲ ಈ ದುಡಿಯುವ ವರ್ಗದವರದು. ಹಾಗೆಯೇ ದುಡಿಯುವ ಜನರ ಕೈಯಲ್ಲಿ ಅಧಿಕಾರ ಬರಲೇಬೇಕು ಎಂಬುದನ್ನು ಒತ್ತಾಯಿಸುತ್ತದೆ.

ಹೀಗೆ ಕಾದಂಬರಿಯಲ್ಲಿ ದುಡಿಯುವ ವರ್ಗವು ಜಡವಾಗಿ ಇರದೇ ಅನೇಕ ಕಾರಣಗಳಿಂದ ಬದಲಾಗುತ್ತಿದೆ. ಶೋಷಣೆಯನ್ನು ಒಪ್ಪಿಕೊಂಡು ಹೋಗುವ ಈ ದುಡಿಯುವ ವರ್ಗ ಅವರ ವಿರುದ್ಧ ಪ್ರತಿಭಟನೆ ಶಕ್ತಿಯಾಗಿ ವರ್ಗಹೋರಾಟದಲ್ಲಿ ಧುಮುಕಿ ಸಮಾನ ಹಕ್ಕಿಗಾಗಿ ಹೋರಾಡುತ್ತದೆ. ಸಂಪತ್ತಿನ ಅಸಮಾನತೆ, ಅನ್ಯಾಯ, ಶೋಷಣೆ, ದಬ್ಬಾಳಿಕೆ ವಿರುದ್ಧ ಹೋರಾಡುತ್ತವೆ. ಸಮಾಜವನ್ನು ಸಮಾನತೆಯ ಹಾದಿಯಲ್ಲಿ ಶೋಷಣೆಯು ಇಲ್ಲದ ಸಮಾಜದ ಕಲ್ಪನೆಯನ್ನು ತರುತ್ತದೆ. ಕಾದಂಬರಿಯಲ್ಲಿ ದುಡಿಯುವವರು ತನ್ನ ಹಕ್ಕುಗಳನ್ನು ಪಡೆದುಕೊಳ್ಳುವುದರ ಜೊತೆಗೆ ವರ್ಗರಹಿತ ಸಮಾಜವನ್ನು ಅಂದರೆ ಕಾರ್ಮಿಕ ರಾಜ್ಯದ ಬೇಡಿಕೆಯನ್ನು ಮುಂದಿಟ್ಟು ಹೋರಾಡುವ ದುಡಿಯುವ ವರ್ಗವನ್ನು ಇಲ್ಲಿ ಕಾಣುತ್ತೇವೆ. ಹೀಗೆ ಸಮಾಜದ ಸೂಕ್ಷ್ಮವಾದ ಪ್ರಭಾವಗಳು ದುಡಿಯುವ ಜನರನ್ನು ಬದಲಾಯಿಸಿರುವುದನ್ನು ಕಾಣುತ್ತೇವೆ.

'ಗ್ರಾಮಾಯಣ' ಕಾದಂಬರಿಯಲ್ಲಿ ಆಸ್ತಿ ಹಾಗೂ ಅಧಿಕಾರಕ್ಕೆ ಕಿತ್ತಾಟಗಳು ನಡೆಯುತ್ತವೆ. ಆಳುವ ವರ್ಗಗಳ ನಡುವಿನ ಆಂತರಿಕ ವೈರುಧ್ಯತೆಯ ಹೇಗೆ ಇಡೀ ಪಾದಳ್ಳಿಯ ಅವನತಿಗೆ

ಕಾರಣವಾಗಿದೆ ಎಂಬುದನ್ನು ಇಲ್ಲಿ ಚಿತ್ರಿಸಲಾಗಿದೆ. ಪಾದಳ್ಳಿಯ ಗದ್ದೆ, ಹೊಲಗಳು, ವಾಡೆ, ಮಠಗಳನ್ನು ನಿರ್ಮಿಸಿರುವವರು ಇಲ್ಲಿನ ದುಡಿಯುವ ಸಮುದಾಯ. ಈ ಸಮುದಾಯವು ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾಗಿದೆ. ಇದರಿಂದ ಭೂಮಾಲೀಕ ವರ್ಗದವರ ಭೂಮಿಯಲ್ಲಿ ಕೆಲಸ ಮಾಡುವ ದುಡಿಯುವ ವರ್ಗ ಅವರ ಅಧೀನವಾಗಿ ಬದುಕುತ್ತಿದೆ. ಇಂತಹ ಸಂದರ್ಭದಲ್ಲಿ ತೆಲಂಗಾಣ ಹೋರಾಟವು ದುಡಿಯುವ ಜನರ ಹಕ್ಕನ್ನು ಹೊಂದುವುದನ್ನು ರುಜುವಾತು ಮಾಡುತ್ತದೆ. ಈ ಹೋರಾಟದ ಪ್ರಭಾವದಿಂದ ಅಂದರೆ ದುಡಿಯುವ ಜನರ ಹಕ್ಕಿನ ನಿರೂಪಣೆಯಿಂದ ಹೊರಗುಳಿಯಲು ಪ್ರಯತ್ನಿಸುತ್ತದೆ. ಜೊತೆಗೆ ದುಡಿಯುವ ಜನರ ಹಕ್ಕಿನ ಹೋರಾಟಕ್ಕೆ ಸಂಪೂರ್ಣವಾಗಿ ಬೆನ್ನು ಮಾಡಿದಂತೆ ಕಾಣುತ್ತದೆ. ಆ ಕಾರಣದಿಂದ ಕಾದಂಬರಿಗೆ ಆಳುವ ವರ್ಗಗಳ ನಡುವಿನ ಆಸ್ತಿ ಅಧಿಕಾರದ ಕಲಹ ಮುಖ್ಯವಾಗಿದೆಯೇ ಹೊರತು ದುಡಿಯುವ ಜನರ ಹಕ್ಕಿನ ಪ್ರಶ್ನೆ ಇಲ್ಲಿ ಗೌಣಗೊಳಿಸಿದೆ. ಹೀಗಾಗಿ "ದುಡಿಯುವ ಜನರು ಎಚ್ಚರಗೊಂಡ ಪ್ರಜ್ಞೆ ಮತ್ತು ಅವರ ಸಂಘಟನಾ ಶ್ರಮವು ಸಮಾಜದಲ್ಲಿ(ಆಮೂಲಾಗ್ರ) ಬದಲಾವಣೆ ಮಾಡಬಲ್ಲದು ಎಂಬ ರಾಜಕೀಯ ಎಚ್ಚರಿಕೆ ಗ್ರಾಮಾಯಣದ ಸೃಜನಶೀಲತೆಯ ಹಿಂದೆ ಗುಪ್ತವಾಗಿ ಕೆಲಸ ಮಾಡಿದೆ".[೬]

ಹೀಗಾಗಿ ದುಡಿಯುವ ಜನರು ಇಲ್ಲಿ ಭೂಮಿಯ ಹಕ್ಕನ್ನು ಕೇಳುವುದಿಲ್ಲ ಅಥವಾ ಮೇಲ್ವರ್ಗದ ಶೋಷಣೆಯ ಅರಿವು ಕೂಡ ಅವರ ವರ್ಗಪ್ರಜ್ಞೆಯ ಭಾಗದಲ್ಲಿ ಸುಳಿಯುವುದಿಲ್ಲ. ಅವರನ್ನು ಯಥಾಸ್ಥಿತಿಯಲ್ಲಿ ಮುಂದುವರೆಸಿಕೊಂಡು ಹೋಗುವುದಕ್ಕೆ ಕಾದಂಬರಿಯು ಪ್ರಯತ್ನಿಸಿದೆ. ಆದರೆ ಕಾದಂಬರಿಯಲ್ಲಿ ಇರುವ ದುಡಿಯುವ ವರ್ಗವು ಶೋಷಣೆಯನ್ನು ಅನುಭವಿಸುತ್ತಿದೆ. ಆ ಕಾರಣದಿಂದ ಶೋಷಕ ವ್ಯವಸ್ಥೆಯ ದೌರ್ಜನ್ಯದ ವಿರುದ್ಧ ಜಾಗೃತಿಯು ಬೆಳೆಯುತ್ತಿರುವುದನ್ನು 'ದಾದಾ' ಪ್ರತಿಭಟನೆ ಮೂಲಕ ಅರ್ಥೈಸಿಕೊಳ್ಳಬಹುದು. ಹೀಗೆ ಹೊರಗಿನ ಪ್ರಭಾವಗಳನ್ನು ಕಾದಂಬರಿಯು ನಿಯಂತ್ರಿಸುತ್ತದೆ. ಆದರೆ ಭೂಮಿಯ ವಸ್ತುವಿಷಯದಲ್ಲಿ ಇದು ಆಳುವ ವರ್ಗದ ಪ್ರಭಾವಕ್ಕೆ ಒಳಗಾಗಿ ದುಡಿಯುವ ಜನರ ವರ್ಗಪ್ರಜ್ಞೆಯ ಭಾಗವಾಗಿಲ್ಲ. ಜೊತೆಗೆ ಇಲ್ಲಿ ಖಚಿತವಾದ ವರ್ಗಚಹರೆಗಳು ಈ ಕಾದಂಬರಿಯಲ್ಲಿ ಚಿತ್ರಣಗೊಳ್ಳದೆ ಇರುವುದನ್ನು ಕಾಣುತ್ತೇವೆ.

ಬಸವರಾಜ ಕಟ್ಟೀಮನಿಯವರ 'ಹರಿಜನಾಯಣ' ಕಾದಂಬರಿ ದುಡಿವ ಜನರ ಸಂಘಟಿತ ಹೋರಾಟದ ವಿವಿಧ ಆಯಾಮಗಳನ್ನು ಚಿತ್ರಿಸಿದೆ. ಇಲ್ಲಿ ಬರುವ ದುಡಿಯುವ ವರ್ಗವೆಂದರೆ ದಲಿತ ವರ್ಗದವರು. ಹೆಚ್ಚಿನವರು ಜೀತಗಾರರಾಗಿ ಇಲ್ಲವೇ ಕೂಲಿಗಳಾಗಿ ಶ್ರೀಮಂತವರ್ಗದ ಹೊಲಗಳಲ್ಲಿ ದುಡಿಯುವವರು. ಕೆಲವರಿಗೆ ಅಲ್ಪ ಸ್ವಲ್ಪ ತುಂಡು ಭೂಮಿಯಿದ್ದರೂ ಆರ್ಥಿಕ ಮುಗ್ಗಟ್ಟಿನಿಂದಾಗಿ ಸವರ್ಣೀಯ ಭೂಮಾಲೀಕರಲ್ಲಿ ಒತ್ತೆಯಿಡುತ್ತಾರೆ. ಹೀಗೆ ಭೂಮಾಲೀಕ ವರ್ಗ ಶೋಷಣೆಯಿಂದ ತನ್ನ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡಿರುವ ದಲಿತವರ್ಗ, ಶಿಕ್ಷಣದ

ಅರಿವಿನಿಂದ ತನ್ನ ಸಮುದಾಯದ ಏಳಿಗೆಗಾಗಿ ದುಡಿಯುತ್ತಾರೆ ಹಾಗೂ ಶಿಕ್ಷಣ ಕಲಿತ ಯುವಕರು ಸಾಮಾಜಿಕ ಜಾಗೃತಿಯನ್ನು ಮೂಡಿಸಿದ್ದಾರೆ. ಜೊತೆಗೆ ದಲಿತ ಚಳುವಳಿಯ ಪ್ರಭಾವದಿಂದ ಇಲ್ಲಿ ತನ್ನ ಹಕ್ಕುಗಳಿಗಾಗಿ ಹೋರಾಟ ನಡೆಸುವುದರ ಮೂಲಕ ದಲಿತ ಬಿಡುಗಡೆಯ ಪ್ರಯತ್ನ ಮಾಡಿರುವುದನ್ನು ಕಾಣಬಹುದು. ದಲಿತವರ್ಗವನ್ನು ಹೊರಗಿನ ಹೋರಾಟಗಳು ಅವರಲ್ಲಿ ದುಡಿಯುವ ವರ್ಗದ ರಾಜಕೀಯ ಪ್ರಜ್ಞೆಯನ್ನು ಬೆಳೆಸಿದೆ. ಹಾಗೆಯೇ ಊಳಿಗಮಾನ್ಯ ವ್ಯವಸ್ಥೆಯು ಈ ದಲಿತ ವರ್ಗಗಳಿಗೆ ಭೂಮಿಯ ಒಡೆತನವನ್ನು ನಿರಾಕರಿಸಿತು. ಆದರೆ ಈ ವ್ಯವಸ್ಥೆಯ ಒತ್ತಡಗಳು ಅವರಲ್ಲಿ ಪ್ರತಿಭಟಿಸುವ ಗುಣವನ್ನು ಬೆಳೆಸಿತ್ತು. ಕಳೆದುಕೊಂಡಿರುವ ದುಡಿಯುವ ವರ್ಗವು ಎಷ್ಟೆಲ್ಲ ಹೋರಾಟ, ಬಲಿದಾನ ಮಾನಹಾನಿಯಂಥ ಬೆಲೆ ತೆರಬೇಕಾಗುತ್ತದೆ ಎಂಬುದನ್ನು ಈ ಕಾದಂಬರಿ ಮುಂದಿಡುತ್ತದೆ. ಹೀಗೆ ಸಮಾಜದಲ್ಲಿನ ವರ್ಗಶೋಷಣೆಯ ವಿರುದ್ಧ ವೈಚಾರಿಕ ನಿಲುವು ಮತ್ತು ಹೋರಾಟಗಳ ಪ್ರಭಾವದಿಂದ ದಲಿತ ವರ್ಗ ಜೀತಪದ್ಧತಿಯಂತಹ ಅಮಾನವೀಯ ಕೆಲಸಗಳಿಂದ ತನ್ನ ಹಕ್ಕುಗಳಿಗಾಗಿ ಸಂಘಟಿತ ಪ್ರಯತ್ನಗಳು ನಡೆಯಲು ಸಾಮಾಜಿಕ ಒತ್ತಡಗಳು ಮತ್ತು ಪ್ರಭಾವಗಳು ಕಾರಣವಾಗಿ, ಈ ಮೂಲಕ ದುಡಿಯುವ ಜನರ ಬದಲಾಗುವಿಕೆಯನ್ನು ಇಲ್ಲಿ ಕಾಣಬಹುದು.

'ಭಾರತೀಪುರ' ಕಾದಂಬರಿಯಲ್ಲಿ ಬರುವ ಹೊಲೆಯ ಸಮುದಾಯ ಭೂರಹಿತರೇ ಆಗಿದ್ದರೆ, ಇಲ್ಲಿ ಎಲ್ಲ ಹೊಲೆಯ ಸಮುದಾಯ ಸವರ್ಣೀಯರ ಭೂಮಿಯಲ್ಲಿ ಜೀತಗಾರರಾಗಿ, ಇಲ್ಲವೇ ಮಲ ಹೊರುವ ಕೆಲಸದಲ್ಲಿ ಕಾಣಿಸಿಕೊಳ್ಳುತ್ತಾರೆ. ಆದರೆ ಈ ವರ್ಗದ ಜಾಗೃತಿಗಾಗಿ ಮೇಲ್ವರ್ಗದ ಜಗನ್ನಾಥನ ಪ್ರಯತ್ನ ಪಡುತ್ತಾನೆ. ಅವರಿಗೆ ಶಿಕ್ಷಣ ಕಲಿಸುವುದು ಮತ್ತು ದೇವಾಲಯಗಳ ಪ್ರವೇಶಕ್ಕಾಗಿ ಅವರಿಗೆ ಜಾಗೃತಿಯ ಮನೋಭಾವನೆಯನ್ನು ಒತ್ತಡದಿಂದ ಕಲಿಸುತ್ತಾನೆ. ಈ ಮೂಲಕ ಮೇಲು-ಕೀಳು ಎಂಬ ಭಾವನೆಗಳನ್ನು ತೊಡೆದುಹಾಕಲು ಪ್ರಯತ್ನಿಸಿರುವುದನ್ನು ಕಾಣುತ್ತೇವೆ. ಭೂಮಾಲೀಕ ವರ್ಗದ ಮೇಲೆ ಅವಲಂಬಿತರಾಗಿರುವ ದುಡಿಯುವ ವರ್ಗವನ್ನು ಇಲ್ಲಿ ಗುರುತಿಸುತ್ತಿದ್ದಾರೆ ಹೊರತು ದುಡಿಯುವ ವರ್ಗವನ್ನು ಶೋಷಣೆ ಮಾಡುವುದರ ಮೂಲಕ ಈ ಭೂಮಾಲೀಕ ವ್ಯವಸ್ಥೆ ನಿಂತಿದೆ ಎಂಬ ಭಾವನೆಯನ್ನು ಕಾದಂಬರಿಯು ತಾಳುವುದಿಲ್ಲ. ಆದ್ದರಿಂದ ಮೇಲ್ವರ್ಗದ ವ್ಯಕ್ತಿಗಳು ಈ ದುಡಿಯುವ ವರ್ಗದ ಜಾಗೃತಿಯ ಹೆಸರಲ್ಲಿ ಶಿಕ್ಷಣ ಕಲಿಸುವುದು, ದೇವಾಲಯ ಪ್ರವೇಶಕ್ಕೆ ಒತ್ತಾಯಿಸುವುದರ ಮೂಲಕ ಆರ್ಥಿಕ ಅಸಮಾನತೆಯನ್ನು ಯಥಾವತ್ತಾಗಿ ಇರುವಂತೆ ನೋಡಿಕೊಳ್ಳಲು ಪ್ರಯತ್ನಿಸುತ್ತಾರೆ. ಜಗನ್ನಾಥನ ಶ್ರಮವು ಸುಧಾರಣೆಯೇ ಹೊರತು ಅದು ಅವರ ಬದಲಾವಣೆಯ ಸಂಕೇತವಾಗಿ ಕಾಣುವುದಿಲ್ಲ. ಆದ್ದರಿಂದ ದುಡಿಯುವ ಪಾತ್ರಗಳಿಗೆ ಸ್ವತಂತ್ರವಾದ ಆಲೋಚನೆಯ ಪ್ರಜ್ಞೆಯು ಬೆಳೆಯುವುದಿಲ್ಲ. ತನ್ನ ವರ್ಗದ ಮೇಲೆ ನಡೆಯುತ್ತಿರುವ ಶೋಷಣೆಯ ಅರಿವು ಕೂಡ ಅವರಲ್ಲಿ ಸುಳಿಯುವುದಿಲ್ಲ. ಆ ಕಾರಣದಿಂದ ಅವರ ಹಕ್ಕಿನ ಪ್ರಶ್ನೆಯು ಗೌಣಗೊಂಡಿದೆ. ಪರಂಪರೆಯ ಶೋಷಣೆಯ ಮೌಲ್ಯಗಳು ಸಮಾಜದಲ್ಲಿ ಮುಂದುವರಿಯುವ ಸೂಚನೆಗಳು ಕಾಣಿಸುತ್ತವೆ. ಹೀಗೆ ಹೊರಗಿನ

ಪ್ರಭಾವಗಳು ಅವರನ್ನು ರಾಜಕೀಯ ನಿಲುವಿನಲ್ಲಿ ಬಂಧಿಸಿ, ಆಳುವ ವರ್ಗದ ಸಮಾಜ ಪರವಾಗಿ ಮಾಡಿಕೊಂಡರೆ, ಒಳಗಿನ ಒತ್ತಡಗಳು ಅವರಲ್ಲಿ ಶಿಕ್ಷಣ ದೇವಾಲಯ ಪ್ರವೇಶದ ಪ್ರಯತ್ನಗಳು ಅವರ ಬದಲಾಗುವಿಕೆಯ ಸೂಚನೆಯಾಗಿ ಕಾದಂಬರಿಯಲ್ಲಿ ಕಾಣುತ್ತೇವೆ.

'ಬಂಡಾಯ' ಕಾದಂಬರಿಯಲ್ಲಿ ಶ್ರಮಜೀವಿ ವರ್ಗವಾದ ಕಾರ್ಮಿಕವರ್ಗವು ಮಾಲೀಕ ವರ್ಗದ ಶೋಷಣೆಯನ್ನು ವಿರೋಧಿಸಿ ಮತ್ತು ಪ್ರಮುಖ ಬೇಡಿಕೆಗಳನ್ನು ಇಟ್ಟುಕೊಂಡು ಹೋರಾಟವನ್ನು ಮಾಡುತ್ತಾರೆ. ಇಲ್ಲಿ ಸಂಘಟಿತ ವರ್ಗವಾದ ಕಾರ್ಮಿಕವರ್ಗವು ವರ್ಗ ಶೋಷಣೆಯ ವಿರುದ್ಧ ಬಂಡೆದ್ದರೆ ತನ್ನ ಅಸ್ತಿತ್ವಕ್ಕೆ ಧಕ್ಕೆ ಬರುತ್ತದೆ ಎಂದು ಆಳುವ ವರ್ಗವು ಈ ಕಾರ್ಮಿಕ ಚಳವಳಿಯನ್ನು ನಾಶ ಮಾಡುವ ಕೆಲಸಕ್ಕೆ ಮುಂದಾಗುತ್ತಾರೆ. ಕಾರ್ಮಿಕ ವರ್ಗದ ನಾಯಕರ ನಡುವೆ ಭಿನ್ನಾಭಿಪ್ರಾಯವನ್ನು ಹುಟ್ಟು ಹಾಕಿ, ಕಾರ್ಮಿಕ ಹೋರಾಟ ಮಾಲೀಕವರ್ಗದ ಹಿತಾಸಕ್ತಿಗಾಗಿ ದುಡಿಯುವಂತಹ ವಾತಾವರಣವನ್ನು ಆಳುವ ವರ್ಗ ಮಾಡುತ್ತಿರುವುದರ ಚಿತ್ರಣ ಇದೆ. ಇಲ್ಲಿ ದುಡಿಯುವ ವರ್ಗವು ಒಂದು ಕಡೆ ಕಾರ್ಮಿಕ ಚಳುವಳಿಯ ಪ್ರಭಾವದಿಂದ ಸಂಘಟಿತ ಹೋರಾಟ ಮಾಡುವುದರ ಮೂಲಕ ತನ್ನ ಮೂಲಭೂತ ಹಕ್ಕುಗಳಿಗೆ ಹೋರಾಡುತ್ತದೆ. ಈ ಹೋರಾಟವು ಕ್ರಾಂತಿಯಾಗಿ ಪರಿವರ್ತನೆಯಾಗಿ ಆಳುವ ವರ್ಗದ ನಾಶದ ಸಂಕೇತವಾಗುತ್ತದೆ ಎಂದು ಹೆದರಿ ಮಾಲೀಕವರ್ಗವು ಅವರ ಬೇಡಿಕೆಗಳನ್ನು ಈಡೇರಿಸಿಕೊಡುತ್ತದೆ. ಆದರೆ ಕಾರ್ಮಿಕವರ್ಗದ ಶೋಷಣೆ ಮುಂದುವರೆಯುವ ಸೂಚನೆ ಇದೆ. ಅದೇ ಹೊತ್ತಿನಲ್ಲಿ ಕಾರ್ಮಿಕವರ್ಗದ ಹೋರಾಟವು ಅಸಮಾನತೆ ಮತ್ತು ವರ್ಗಶೋಷಣೆಯನ್ನು ತೊಡೆದುಹಾಕುವ ಪ್ರಯತ್ನವನ್ನು ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಇಲ್ಲಿ ಮುಖ್ಯವಾಗಿ ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಕಾರ್ಮಿಕವರ್ಗದ ಹೋರಾಟವು ಬರೀ ಮೂಲಭೂತ ಸೌಲಭ್ಯ, ನಾನಾ ಬೇಡಿಕೆಗಳಿಗೆ ಮಾತ್ರ ಸೀಮಿತವಾಗಿಲ್ಲ. ಈ ನಿರೂಪಣೆಯ ಆಳದಲ್ಲಿ ಕಾರ್ಮಿಕವರ್ಗ ಅಧಿಕಾರಕ್ಕಾಗಿ, ವರ್ಗರಹಿತ ಸಮಾಜಕ್ಕಾಗಿ ಹಾತೊರೆಯುತ್ತಿರುವುದನ್ನು ಇಲ್ಲಿ ಗಮನಿಸಬಹುದು. ಹೀಗೆ ಈ ಕಾದಂಬರಿಯು ದುಡಿಯುವ ವರ್ಗವು ಹೇಗೆ ವರ್ಗ ಶತ್ರುಗಳ ವಿರುದ್ಧ ಸಂಘಟಿತ ಹೋರಾಟದ ಪ್ರತಿಫಲದ ಹಕ್ಕುಗಳನ್ನು ಪಡೆದುಕೊಳ್ಳಲು ಕಾರ್ಮಿಕ ವರ್ಗ ರಾಜಕೀಯ ಸಿದ್ಧಾಂತಗಳು ಪ್ರಭಾವವಾಗಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಹಾಗೆಯೇ ಮಾಲೀಕವರ್ಗದ ಶೋಷಣೆಯನ್ನು ಸಹಿಸಿಕೊಂಡು ಬರುವ ಕಾರ್ಮಿಕವರ್ಗ ಮತ್ತು ಈ ಶೋಷಣೆಯ ವಿರುದ್ಧ ಪ್ರತಿಭಟಿಸುವ ಕಾರ್ಮಿಕವರ್ಗಕ್ಕೆ, ಆರ್ಥಿಕ ಶೋಷಣೆಯು ಒತ್ತಡಗಳು ಕಾರಣವಾಗಿವೆ. ಇದರಿಂದ ಇಲ್ಲಿ ದುಡಿಯುವ ವರ್ಗ ಬದಲಾಗುವಿಕೆ ಘಟಿಸಿದೆ.

'ಒಡಲಾಳ' ಕಾದಂಬರಿಯಲ್ಲಿ ದುಡಿಯುವ ವರ್ಗವಾದ ಸಾಕವ್ವನ ಕುಟುಂಬವು ನಾಕು ಕಂಬದ ತೊಟ್ಟಿ ಮನೆಯಾಗಿತ್ತು. ಒಂದು ಕಾಲಕ್ಕೆ ಹಂಚು ಹೊಂದಿಸಿದ ಮನೆಯಾಗಿತ್ತು. "ವರ್ಷದಿಂದ ವರ್ಷಕ್ಕೆ ಹಂಚು ಕಡಿಮೆ ಬಿದ್ದು, ಅದನ್ನು ತರಲಾಗದೆ, ಖಾಲಿ ಬಿದ್ದಲ್ಲಿಗೆ ಹುಲ್ಲು, ತೆಂಗಿನ ಗರಿಗಳನ್ನು ಹೊದಿಸಿ, ಈಗ ಹಂಚು, ಹುಲ್ಲು ಮತ್ತು ತೆಂಗಿನ ಗರಿಗಳು

ಅನ್ಯೋನ್ಯವಾಗಿಬಿಟ್ಟಿವೆ. ಹಟ್ಟಿಯನ್ನು ಹೊತ್ತು ನಿಂತಂಥ ಕಂಬಗಳು, ಕಮಾನುಗಳು ತೊಲೆಗಳು ಕುಗ್ಗಿ ಬಗ್ಗಿ ತಮ್ಮ ನೆರಳಡಿ ಉಸಿರಾಡುತ್ತಿದ್ದ ಜೀವಿಗಳ ಬಗ್ಗೆ ದಯೆ ತೋರಿ ನಿಂತಿದ್ದವು"[೭] ಎಂದು ಹೇಳುವ ಚಿತ್ರಣವು ಈ ಕುಟುಂಬದ ಬಡತನವನ್ನು ಎತ್ತಿ ತೋರಿಸುತ್ತದೆ. ಅದೇ ರೀತಿಯಲ್ಲಿ ಆ ಕುಟುಂಬದ ಮುಗ್ಧತೆ, ಜಗಳಗಂಟಿತನ, ದಿಟ್ಟತನವನ್ನು ಗಮನಿಸಿ ಆ ಕುಟುಂಬದ ಆರ್ಥಿಕ ಶೋಷಣೆಯನ್ನು ನಿರ್ಧರಿಸಲು ಸಾಧ್ಯವಿದೆ. ಸಾಕವ್ವನು ಹಳೆಯ ಕಾಲದ ಊಳಿಗಮಾನ್ಯಶಾಹಿ ವ್ಯವಸ್ಥೆಯ ಪಾಲನೆಯ ಮೂಲಕ ಬದುಕಿರುವುದನ್ನು ನೋಡುತ್ತೇವೆ. ಇಲ್ಲಿ ಮಾಲೀಕವರ್ಗ ಶೋಷಣೆಯನ್ನು ಸಾಕವ್ವನ ಪಾತ್ರ ವಿರೋಧಿಸುವುದಿಲ್ಲ. ಆದರೆ, ನಂತರ ಕಾಲಘಟ್ಟದ ದುಡಿಯುವ ವರ್ಗದ ಪಾತ್ರಗಳು ವ್ಯವಸ್ಥೆಯ ವಿರುದ್ಧ ಜಾಗೃತಿಯಾಗುತ್ತಿರುವುದನ್ನು ಕಾದಂಬರಿಯಲ್ಲಿ ಗಮನಿಸಲು ಸಾಧ್ಯವಿದೆ. 'ಇನ್ಸ್‌ಪೆಕ್ಟರ್ ರೂಲುಗೋಲು ಪುಟಗೌರಿ ಗಲ್ಲವನ್ನು ಸವುರುತ್ತಿತ್ತು. ಪುಟಗೌರಿ ಮಾತುಗಳು ಹೊಟ್ಟ ಒಳ್ಗ ಅವುತುಕೊಳ್ಳುತ್ತಿದ್ದವು. ಗುರುಸಿದ್ದು ಇನ್ಸ್‌ಪೆಕ್ಟರ್‌ನನ್ನು ದುರುಗಟ್ಟಿ ನೋಡುವುದು ಜಾಗೃತಿಯ ಸಂಕೇತವಾಗಿದೆ. ಇಲ್ಲಿ ಊಳಿಗಮಾನ್ಯಶಾಹಿ ಶೋಷಣೆಯನ್ನು ಪ್ರತಿಭಟಿಸುವ ದುಡಿಯುವ ವರ್ಗದ ಜಾಗೃತಿಗೆ ದಲಿತ ಸಂಘಟನೆಯ ಪ್ರಭಾವ ಒಂದು ಕಡೆಯಾದರೆ ಮತ್ತೊಂದು ಕಡೆ ದುಡಿಯುವ ವರ್ಗವು ತನ್ನ ಶೋಷಣೆಯ ವಿರುದ್ಧ ಹೋರಾಡಲು ತಯಾರಿಯಲ್ಲಿ ಇರುವುದನ್ನು ಕಾದಂಬರಿಯಲ್ಲಿ ಆಳವಾದ ಬದಲಾವಣೆ ಯಾಗಿ ಕಾದಂಬರಿಯಲ್ಲಿ ಗುರುತಿಸಲಾಗಿದೆ.

'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯಲ್ಲಿ ಬರುವ ಹೊಲೆಯ ಸಮುದಾಯವು ಮೇಲ್ವರ್ಗದ ಶೋಷಣೆಗೆ ನಿರಂತರವಾಗಿ ಒಳಗಾಗುತ್ತಿರುವುದನ್ನು ಕಾದಂಬರಿಯು ಚಿತ್ರಿಸುತ್ತದೆ. ಬಸುರಾಜುನ ಪಾತ್ರವು ಈ ಶೋಷಣೆಯ ವಿರುದ್ಧ ಸಂಘರ್ಷ ಮಾಡುವುದರ ಮೂಲಕ ದುಡಿಯುವ ವರ್ಗವನ್ನು ಜಾಗೃತಿಗೊಳಿಸುವುದನ್ನು ಕಾಣಬಹುದು. ಸಮಾಜದಲ್ಲಿ ಆಳವಾಗಿ ಬೇರೂರಿರುವ ಜಾತಿಶೋಷಣೆ ಮತ್ತು ವರ್ಗ ಅಸಮಾನತೆಯ ವಿರುದ್ಧ ದುಡಿಯುವ ವರ್ಗದ ಪ್ರತಿಭಟನೆ ಇಲ್ಲಿ ವ್ಯಕ್ತವಾಗಿದೆ. ಆಳುವ ವರ್ಗದ ಶೋಷಣೆಯನ್ನು ಬಲದಿಂದಲೇ ನಾಶ ಮಾಡಬೇಕು ಎಂಬುದನ್ನು ಇಲ್ಲಿ ಬಸುರಾಜುನ ಪಾತ್ರವು ಚಿತ್ರಿಸುತ್ತದೆ. ಈ ಕಾಲದಲ್ಲಿ ಮುಖ್ಯವಾಗಿ ದಲಿತವರ್ಗಗಳ ಶೋಷಣೆಯನ್ನು ನಿಲ್ಲಿಸುವ ಅವರಿಗೆ ಎಲ್ಲಾ ಹಕ್ಕುಗಳನ್ನು ಪಡೆದುಕೊಳ್ಳುವ ಜಾಗೃತಿಯನ್ನು ಮೂಡಿಸಿದ್ದು ದಲಿತ ಚಳುವಳಿ. ಈ ದಲಿತ ಸಂಘರ್ಷ ಸಮಿತಿಯ ಪ್ರಭಾವ ಈ ಕಾದಂಬರಿ ಮೇಲಾಗಿದೆ. "ಎಲ್ಲಾ ಜಾತಿ ಬಡವರೂಗೂವಿ ಒಳ್ಳೇದು ಮಾಡು ಮಾತಾಯಿ ಮಾಳುಗವ್ವ" ಎಂದು ಬೇಡುವುದನ್ನು ಇಲ್ಲಿ ಆರ್ಥಿಕ ಅಸಮಾನತೆ ಮತ್ತು ಶೋಷಣೆಯ ಸ್ಥಿತಿಯನ್ನು ಇಲ್ಲಿ ಚಿತ್ರಿಸುತ್ತಲೇ. ಸಮಾನತೆಯ ತುಡಿತಕ್ಕಾಗಿ ಕಾದಂಬರಿಯು ಪ್ರಯತ್ನಿಸುತ್ತಿರುವುದನ್ನು ಕಾಣುತ್ತೇವೆ. ಇಲ್ಲಿ ದುಡಿಯುವ ವರ್ಗವು ಜಾತಿ, ವರ್ಗಶೋಷಣೆಯ ವಿರುದ್ಧ ಜಾಗೃತಿಯಾಗಿ ಪ್ರತಿಭಟಿಸುತ್ತಿರುವುದನ್ನು ಇಲ್ಲಿ ಗುರುತಿಸಬಹುದು.

'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ದುಡಿಯುವ ವರ್ಗ ಮತ್ತು ಆಳುವ ವರ್ಗಗಳ ನಡುವೆ ಮುಖಾಮುಖಿಯಾಗಿಸುತ್ತಾ ಕಾದಂಬರಿಯು ಬೆಳೆಯುತ್ತದೆ. ಇಲ್ಲಿ ಬರುವ ದಲಿತ ಪಾತ್ರಗಳು ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾಗಿರುವರು. ಆದರೆ ಅವರೆಲ್ಲ ಸ್ವಾಭಿಮಾನಿಗಳು, ಶ್ರಮಜೀವಿಗಳು, ತಮ್ಮದಲ್ಲದ, ರಾಜನ ಕುಡಿಯನ್ನು ಜೋಪಾನ ಮಾಡಿದ ಸ್ವಂತ ಮಗನಿಗಿಂತ ಹೆಚ್ಚಾಗಿ ಬೆಳೆಸಿದ ಜಾನುಬಾ, ಹೀರಾಬಾಯಿ, ಅಂಬೇಡ್ಕರ್ ಫೋಟೋಗೆ ಆಗುವ ಅಪಚಾರವನ್ನು ವಿರೋಧಿಸುವ ಸುಮತಿಯನ್ನು ಕಾಣುತ್ತೇವೆ. ಇಲ್ಲಿ ಬರುವ ಮಾದೇವನ ಪಾತ್ರ ಹುಟ್ಟಿನಿಂದ ಕ್ಷತ್ರಿಯನಾದರೂ ಹೊಲೆಯರ ಜೊತೆಯೇ ಬೆಳೆಯುತ್ತಾನೆ. ಒಂದೇ ಜಾತಿಯವವೆಂದು ತಿಳಿದು ಸುಮತಿಯನ್ನು ಮದುವೆ ಆಗುತ್ತಾನೆ. ಆದರೆ ಜಾತಿ ಬೇರೆಬೇರೆ ಎಂದು ಗೊತ್ತಾದಾಗ ಜಾತಿಶೋಷಣೆ ವಿರುದ್ಧ ಅವನ ಪ್ರತಿಭಟನೆ ಮತ್ತೆ ಪುನಃ ಜಾತಿ ತಾರತಮ್ಯದ ಕಡೆ ಚಲಿಸುತ್ತದೆ. ಆತ ಒಂದು ಸಂಸ್ಕೃತಿಯಿಂದ ಇನ್ನೊಂದು ಸಂಸ್ಕೃತಿಗೆ ರೂಪಾಂತರಗೊಳ್ಳಲು ಪ್ರಯತ್ನಿಸುತ್ತಾನೆ. ಅಂಬೇಡ್ಕರ್ ಚಿಂತನೆ ಮತ್ತು ವಿಚಾರಗಳಿಂದ ಪ್ರಭಾವಿತನಾದ ಮಾದೇವ ಮೇಲ್ವರ್ಗದ ಆಚರಣೆಯನ್ನು ಅನುಕರಣೆ ಮಾಡಲು ಪ್ರಯತ್ನಿಸುತ್ತಾನೆ. ಅವನಿಗೆ ಹಿಂದೆ ಇಷ್ಟವಾದ ವಸ್ತುಗಳು ಇಂದು ಬೇಡವಾಗುತ್ತವೆ. ಆದರೆ ಈ ರೀತಿಯ ಕ್ರಿಯೆಯನ್ನು ಸುಮತಿ ಪ್ರತಿಭಟಿಸುತ್ತಾಳೆ. "ಇದ್ದ ರಾಜರೆಲ್ಲ ಮುಕಳ್ಯಾಗ ಮಣ್ಣ ಹಕ್ಕಾಂಡು ಹ್ವಾದ್ರು, ಈಗ ನೀವು ರಾಜಾ ಆಗಾಕ ಕನಸ ಕಾಣಾಕತ್ತೀರಿ"[೮] ಎನ್ನುವ ಅನಕ್ಷರಸ್ಥ ಸುಮತಿ ಪ್ರಭುತ್ವ ವ್ಯವಸ್ಥೆಯನ್ನು ಧಿಕ್ಕರಿಸುತ್ತಾಳೆ. ಹೀಗೆ ಕೆಳವರ್ಗದ ಮಹಿಳೆಯ ಜಾಗೃತಿಯನ್ನು ಇಲ್ಲಿ ಗಮನಿಸಬಹುದು. ಇದು ಕುಟುಂಬಗಳ ನಡುವೆ ಆಂತರಿಕ ವೈರುಧ್ಯತೆಗಳು ಅವರ ಜಾಗೃತಿಗೆ ಕಾರಣವಾಗಿವೆ. ಅದೇ ರೀತಿಯಲ್ಲಿ ಅಂಬೇಡ್ಕರ್ ಚಿಂತನೆ, ದಲಿತ ಸಂಘರ್ಷ ಸಮಿತಿಯ ಚಳುವಳಿಗಳು ಇಲ್ಲಿ ದುಡಿಯುವ ವರ್ಗ ಬದಲಾವಣೆಗೆ ಪ್ರಯತ್ನಿಸಿರುವ ಇಲ್ಲಿ ಗುರುತಿಸಲು ಸಾಧ್ಯವಾಗಿದೆ.

ನವೋದಯದ ಕಾಲದಲ್ಲಿ ರಚನೆಯಾದ ಕುವೆಂಪು, ಕಾರಂತ ಮುಂತಾದವರ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಸಮಸ್ಯೆಗಳು ಸಮಸ್ಯೆಗಳಾಗಿ ಇವರಿಗೆ ಕಾಡಲೇ ಇಲ್ಲ. ಕುವೆಂಪು ಅವರ 'ಕಾನೂರ ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ಶೂದ್ರಪ್ರಜ್ಞೆ ಪ್ರಮುಖ ಜೀವಾಳವಾದರೂ ಕಾದಂಬರಿಯಲ್ಲಿ ದಲಿತವರ್ಗದ ಪಾತ್ರಗಳನ್ನು ವೈಚಾರಿಕವಾಗಿ ಬಳಸಿಕೊಂಡಿಲ್ಲ. ಹೀಗಾಗಿ ಕೃಷ್ಣಪ್ಪನವರು "ದಲಿತ ಪಾತ್ರಗಳು ಕೇವಲ ಹೆಂಡ-ಮಾಂಸ-ಕಾಮ ಇತ್ಯಾದಿ ಮಣ್ಣಿನ ಸ್ತರದಲ್ಲಿಯೇ ಬದುಕನ್ನು ಪ್ರತಿಭಟಿಸದೆ, ಘರ್ಷಿಸದೆ, ಅರ್ಥೈಸಿಕೊಳ್ಳದೆ ಹೋಗುತ್ತವೆ. ಕುವೆಂಪು ಒಡೇರದಿಣ್ಣೆ ಮೇಲೆ ನಿಂತು ದಲಿತರ ಬದುಕನ್ನು ನೋಡಲು ಸಾಧ್ಯವೇ ಹೊರತು, ಹೊಲೆಯರ ಗುಡಿಸಿಲಿನಲ್ಲಿ ಕುಳಿತು ನೋಡಲಾರರು"[೯] ಎನ್ನುತ್ತಾರೆ. ಇಲ್ಲಿ ಕಾದಂಬರಿಯಲ್ಲಿ ಮೇಲ್ವರ್ಗದ ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗಳು ಗುರುತಿಸುವ ಕಾದಂಬರಿಕಾರ ದುಡಿಯುವ ವರ್ಗದ ಮೇಲೆ ಆಗುವ ಪರಿಣಾಮವನ್ನು ಆಳುವ ವರ್ಗದ ನೆಲೆಯಲ್ಲಿ ನಿರೂಪಿಸಲು

ಪ್ರಯತ್ನಿಸುತ್ತಾರೆ. ಆದರೆ ಈ ಶೋಷಣೆ ದೌರ್ಜನ್ಯಗಳು ಅವರಿಗೆ ಯಾವುದೇ ಬದಲಾವಣೆಗೆ ಸಹಕಾರಿಯಾಗಿಲ್ಲ ಮತ್ತು ಹೊರಗಿನ ಪ್ರಭಾವಗಳು ಕೂಡ ಇಲ್ಲಿನ ದುಡಿಯುವ ವರ್ಗಕ್ಕೆ ಪ್ರಭಾವಿಸಿರುವುದನ್ನು ಗುರುತಿಸದೇ ಅವರ ಇರುವ ಸ್ಥಿತಿಯನ್ನು ಸಹಜವಾಗಿ ಹೇಳುವುದರ ಮೂಲಕ ಆರ್ಥಿಕ ಮತ್ತು ಸಾಮಾಜಿಕ ಶೋಷಣೆಯನ್ನು ಇಲ್ಲಿ ನಿರೂಪಿಸದೇ ಇರುವುದು ಕಾಣುತ್ತೇವೆ. ಆ ಕಾರಣದಿಂದ ದುಡಿಯುವ ವರ್ಗದ ಜಾಗೃತಿಯನ್ನು ಅವರ ಬದಲಾಗುವ ಸ್ಥಿತಿಯನ್ನು ಕಾದಂಬರಿಗಳು ನಿರಾಕರಿಸಿವೆ.

ಆದರೆ ಕಾರಂತರ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಬಗೆಗೆ ಒಂದು ರೀತಿಯಾದ ಸುಧಾರಣೆಯ ಪ್ರಜ್ಞೆ ಕಾಣಿಸುತ್ತದೆ. ಸಮಾಜದಲ್ಲಿ ಇರುವ ಜಾತಿ ಅಸಮಾನತೆ ಮತ್ತು ಭೂಮಿಯ ಅಸಮಾನತೆಯ ಮೂಲ ಸಂಬಂಧಗಳನ್ನು ಕುರಿತು ನಿರೂಪಣೆ ಇವೆ. 'ಚೋಮನ ದುಡಿ'ಯಲ್ಲಿ ಚೋಮನಿಗೆ ಭೂಮಿ ದಕ್ಕದೆ ಇದ್ದರೂ ಈ ದುಡಿಯುವ ವರ್ಗವು ಭೂಮಿಯ ಆಸೆಯನ್ನು ಮುಂದಿಟ್ಟಿದ್ದು ಮತ್ತು ಭೂಮಿಗಾಗಿ ಪ್ರಯತ್ನಿಸಿರುವ ದುಡಿಯುವ ವರ್ಗದ ಪಾತ್ರಗಳು ಕಾಣಿಸುತ್ತವೆ. ಇಲ್ಲಿ ಕ್ರಿಶ್ಚಿಯನ್ ಮತಕ್ಕೆ ಸೇರಿದರೆ ಭೂಮಿ ಸಿಗುತ್ತದೆ ಎಂಬ ಅರಿವು ಕೆಳವರ್ಗದ ಜನರಲ್ಲಿ ಪ್ರಜ್ಞೆಯನ್ನು ಉಂಟುಮಾಡಿದೆ. ಇಲ್ಲಿ ದುಡಿಯುವ ವರ್ಗವು ಯಾವ ಸಿದ್ಧಾಂತದ ಪ್ರಭಾವ ಇಲ್ಲದೆ ಶೋಷಣೆ, ಹಸಿವಿನ ಒತ್ತಡಗಳು ಅವನಿಗೆ ಭೂಮಿಯ ಆಸೆಯನ್ನು ಸೃಷ್ಟಿಸಿದೆ. ಆದರೆ ಆಳುವ ವರ್ಗವನ್ನು ಮುಖಾಮುಖಿಯಾಗುವ ಅಥವಾ ವರ್ಗಪ್ರಜ್ಞೆಯ ಭಾಗವಾಗಿ ತಮ್ಮ ಹಕ್ಕುಗಳನ್ನು ಕೇಳುವಲ್ಲಿ ಕಾದಂಬರಿಗೆ ಆಸಕ್ತಿ ಇಲ್ಲದಾಗಿದೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 'ಹೇಮಾವತಿ'ಯಲ್ಲಿ ಅಸ್ಪೃಶ್ಯರನ್ನು ಕುರಿತ ಘಟನೆ ಕಾದಂಬರಿಯ ಕೊನೆಯ ಘಟ್ಟದಲ್ಲಿ ಸಾಧಾರಣ ಘಟನೆಯಾಗಿ ಮಾತ್ರ ಬರುತ್ತದೆ. ಅಂತರ್‌ಜಾತಿ ಮದುವೆಯು ಸಾಮಾಜಿಕ ಸಂಘರ್ಷವನ್ನೇ ವಸ್ತುವನ್ನಾಗುಳ್ಳ ಈ ಕಾದಂಬರಿ ಕೆಳವರ್ಗದಲ್ಲಿ ಸಾಮಾಜಿಕ ಜಾಗೃತಿಯನ್ನು ಬಯಸುತ್ತಿದೆ. ಇಲ್ಲಿ ಗಾಂಧೀವಾದದ ಪ್ರಭಾವವೇ ಹೆಚ್ಚಾಗಿದೆ. ಆದ್ದರಿಂದ ಇಲ್ಲಿ ದಲಿತವರ್ಗದ ಸುಧಾರಣೆಯನ್ನು ಕಾಣುತ್ತೇವೆ ಹೊರತು ಬದಲಾವಣೆಯಲ್ಲ. ಇದು ಈ ಕಾದಂಬರಿಯ ಮಿತಿಯಾಗಿ ಕಾಣಿಸುತ್ತದೆ.

'ಗ್ರಾಮಾಯಣ' ಕಾದಂಬರಿಯಲ್ಲಿ ದುಡಿಯುವ ವರ್ಗದ ಖಚಿತತೆ ಸ್ಪಷ್ಟವಾಗಿ ಇಲ್ಲ. ದುಡಿಯುವ ಸಮುದಾಯಕ್ಕೆ ಯಾವುದೇ ಹಕ್ಕುಗಳ ಪ್ರಶ್ನೆ ಇಲ್ಲಿ ಕಾಣಿಸುವುದಿಲ್ಲ. ಈ ಸಮುದಾಯ ಆಳುವ ವರ್ಗದ ಅಧೀನವಾಗಿ ಬದುಕುತ್ತಿದ್ದಾರೆ. ಆಸ್ತಿ, ಅಧಿಕಾರಕ್ಕಾಗಿ ನಡೆಯುವ ಕಲಹಗಳಲ್ಲಿ ಭೂಮಾಲೀಕವರ್ಗದ ಪರವಾಗಿ ಕೆಲಸ ಮಾಡುವುದನ್ನು ಇಲ್ಲಿ ಗುರುತಿಸಬಹುದು. ಮೇಲ್ವರ್ಗದ ಶೋಷಣೆ ನಿರಂತರವಾಗಿ ನಡೆದರೂ ಅವರು ಪ್ರತಿಭಟಿಸುವುದಿಲ್ಲ. 'ದಾದಾ'ನ ಪಾತ್ರವು ಕೂಡ ವ್ಯಕ್ತಿಕೇಂದ್ರಿತ ನೆಲೆಯಲ್ಲಿ ಪ್ರತಿಭಟಿಸುವುದು ಕಾಣಿಸುತ್ತದೆ ಹೊರತು ಅದು ವರ್ಗಪ್ರಜ್ಞೆಯ ಭಾಗವಾಗಿ ಮೂಡಿಬಂದಿಲ್ಲ. ದುಡಿಯುವ ವರ್ಗಕ್ಕೆ ವರ್ಗಜಾಗೃತಿಯ ಅರಿವು ಕೂಡ

ಸುಳಿಯುವುದಿಲ್ಲ. ಕಾದಂಬರಿಯ ರಚನೆಯ ಸಂದರ್ಭದಲ್ಲಿ 'ತೆಲಂಗಾಣ'ದ ಭೂಹೋರಾಟ ನಡೆದು ಇದರ ಪ್ರಭಾವ ರಾಷ್ಟ್ರವ್ಯಾಪಿ ವಿಸ್ತಾರಗೊಂಡಿತು. ಆದರೆ ಇದರ ಪ್ರಭಾವ ಕಾದಂಬರಿಯಲ್ಲಿ ಕಾಣಿಸುವುದಿಲ್ಲ. ಇಲ್ಲಿ 'ಭೂಮಿಯ ಹಕ್ಕಿನ' ಬಗೆಗೆ ಮಾತನಾಡುತ್ತದೆ. ಆದರೆ ದುಡಿಯುವ ಜನರ ಭೂಮಿಯ ಹಕ್ಕನ್ನು ಕುರಿತು ಮಾತನಾಡದೆ ಮೌನವಾಗಿಸುತ್ತದೆ. ಯಾಕೆಂದರೆ ದುಡಿಯುವ ಜನರು ಭೂಮಿಯ ಹಕ್ಕಿಗಾಗಿ ಹಂಬಲಿಸುತ್ತಿರುವ ವಸ್ತುವಿಷಯವನ್ನು ಚರ್ಚಿಸದೆ ಆಳುವ ವರ್ಗಗಳ ನಡುವಿನ ಆಸ್ತಿ, ಅಧಿಕಾರದ ಪಲ್ಲಟಕ್ಕೆ ಹೆಚ್ಚು ಒತ್ತು ಕೊಟ್ಟಿರುವುದನ್ನು ಇಲ್ಲಿ ಕಾಣಬಹುದು. ಆದ್ದರಿಂದ ಆ ಕಾಲದ ಅನೇಕ ಬರಹಗಾರರು ದುಡಿಯುವ ವರ್ಗದ ವರ್ಗದೃಷ್ಟಿಕೋನಗಳನ್ನು ಮುಚ್ಚಿಡುವ ಪ್ರಯತ್ನ ಮಾಡಿದ್ದಾರೆ ಅಥವಾ ಈ ದುಡಿಯುವ ವರ್ಗದ ರಾಜಕೀಯ ಹೋರಾಟವನ್ನು ದಿಕ್ಕು ತಪ್ಪಿಸಲು ಪ್ರಯತ್ನಿಸಿರುವುದು ಇಂತಹ ನಿರೂಪಣೆಗಳಿಂದ ಗೊತ್ತಾಗುತ್ತದೆ. ಒಟ್ಟಾರೆ ನವೋದಯ ಕಾಲದ ಕಾದಂಬರಿಕಾರರಿಗೆ ವರ್ಗ ಪ್ರಜ್ಞೆಯ ಭಾಗವಾಗಿ ನಿರೂಪಣೆಗೊಳ್ಳದೆ ಇರುವುದು ಈ ಕಾಲದ ಕಾದಂಬರಿಗಳ ದೊಡ್ಡ ಮಿತಿಯಾಗಿದೆ.

ಪ್ರಗತಿಶೀಲದ ಸಂದರ್ಭದ ಬರಹಗಳು ನವೋದಯಕ್ಕಿಂತ ಭಿನ್ನವಾಗಿ ನಿರೂಪಣೆಯಾಗಿವೆ. ಇಲ್ಲಿ ದುಡಿಯುವ ವರ್ಗವನ್ನು ಬಿಡುಗಡೆಗೊಳಿಸುವ ಅಂಬೇಡ್ಕರ್ ವಿಚಾರಧಾರೆ ಮತ್ತು ವರ್ಗನೆಲೆಯ ಮಾರ್ಕ್ಸ್ ವಿಚಾರಧಾರೆಯ ಪ್ರಭಾವಗಳು ಅನೇಕ ಕೃತಿಗಳಲ್ಲಿ ಕಾಣಿಸುತ್ತದೆ. ಬಸವರಾಜ ಕಟ್ಟೀಮನಿ ಅವರ 'ಹರಿಜನಾಯಣ', ನಿರಂಜನರ 'ಚಿರಸ್ಮರಣೆ' ಮುಂತಾದ ಕಾದಂಬರಿಗಳಲ್ಲಿ ದುಡಿಯುವ ವರ್ಗವನ್ನು ಕುರಿತು ವಿವರಿಸಿದರೆ ಇದಕ್ಕೆ ಕಾರಣ ಈ ಕಾಲದ ಲೇಖಕರು ಮಾರ್ಕ್ಸ್‌ವಾದದಿಂದ ಪ್ರಭಾವಿತರಾಗಿರುವುದು ಮತ್ತು ಅಂಬೇಡ್ಕರ್ ಅಸ್ಪೃಶ್ಯರಿಗಾಗಿ ಹೋರಾಟ ಮಾಡಿರುವುದು. ಅದರಲ್ಲಿಯೂ ಅಸ್ಪೃಶ್ಯರು ದೇವಾಲಯ ಪ್ರವೇಶ, ನೀರು ಮುಟ್ಟುವುದು, ಮೀಸಲಾತಿ, ಭೂಮಿಯ ಹಕ್ಕನ್ನು ಹೊಂದುವ ವಿಷಯ. ಹೀಗೆ ದುಡಿಯುವ ವರ್ಗದ ಬಿಡುಗಡೆಗೆ ಪ್ರಯತ್ನಿಸಿರುವ ಅಂಶಗಳನ್ನು ಕಾದಂಬರಿಗಳು ವಸ್ತುವಾಗಿ ಸ್ವೀಕರಿಸಿವೆ. ಈ ಮೂಲಕ ಸಾಹಿತ್ಯದ ಮೂಲಕ ಸಮಾಜದಲ್ಲಿ ಇರುವ ಅಸಮಾನತೆ ಮತ್ತು ಶೋಷಣೆ, ದೌರ್ಜನ್ಯ, ಅಪಮಾನಗಳಂತಹ ವಸ್ತು ವಿಷಯದ ಕುರಿತು ಸಾಮಾಜಿಕ ಅರಿವನ್ನು ಈ ಪ್ರಗತಿಶೀಲ ಬರಹಗಾರರು ಮಾಡಿರುವುದನ್ನು ಕಾಣುತ್ತೇವೆ. ಆದರೆ ಇಲ್ಲಿ ಆಳುವ ವರ್ಗದ ಶೋಷಣೆಯ ವಿರುದ್ಧ ಧ್ವನಿ ದೊಡ್ಡದಾದರೂ ಅದನ್ನು ನಿರೂಪಿಸುವ ನೆಲೆಯಲ್ಲಿ ವರ್ಗಪ್ರಜ್ಞೆಯನ್ನು ಮುಖಾಮುಖಿಯಾಗಿಸುವಲ್ಲಿ ಭಿನ್ನತೆ ಕಾಣಿಸುತ್ತದೆ.

ನವ್ಯ ಪಂಥವು ವೈಯಕ್ತಿಕ ಅನುಭವಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟಿದೆ. ಈ ಸಂದರ್ಭದಲ್ಲಿ ದುಡಿಯುವ ವರ್ಗದ ಬಿಡುಗಡೆಗೆ ಪ್ರಯತ್ನಿಸಿದ ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ವಿಚಾರಗಳ ಪ್ರಭಾವ ಎಷ್ಟೇ ಇದ್ದರೂ ಸಾಹಿತ್ಯ ಕೃತಿಗಳು ಈ ವಿಚಾರಗಳನ್ನು ಬಿಡಿಬಿಡಿಯಾಗಿ ಗ್ರಹಿಸಿರುವ ಅಥವಾ ಕೆಲವು ಕೃತಿಗಳು ಈ ದೃಷ್ಟಿಕೋನದಲ್ಲಿ ರಚನೆಯಾಗಿವೆ. ಆದರೆ ಅವುಗಳ

ಮೂಲ ಆಶಯವು ದುಡಿಯುವ ವರ್ಗದ ಆರ್ಥಿಕ ಸ್ಥಿತಿಗತಿಗಳನ್ನು ಅವರು ಎದುರಿಸುತ್ತಿರುವ ಮೂಲ ಅಸಮಾನತೆ ಅಥವಾ ಶೋಷಣೆಯು ಸಮಾಜದಲ್ಲಿ ಈ ರೀತಿಯಲ್ಲಿ ಇದೆ ಎಂಬ ತೆಳುವಾದ ನಿರೂಪಣೆ ಕಾಣಿಸುತ್ತದೆ. 'ಭಾರತೀಪುರ', 'ಬಂಡಾಯ', 'ದಾಟು' ಮುಂತಾದ ಕಾದಂಬರಿಗಳು ಜಾತಿಯ ಶೋಷಣೆ ಮತ್ತು ವರ್ಗ ಅಸಮಾನತೆಯ ಸಮಾಜದ ಬಗೆಗೆ ತಿಳುವಳಿಕೆಯನ್ನು ಮೂಡಿಸುತ್ತವೆ. ಆದರೆ ಅದರ ಪರಿಣಾಮಗಳನ್ನು ಆಳುವ ವರ್ಗ ಮತ್ತು ದುಡಿಯುವ ವರ್ಗದ ರಾಜಕೀಯವನ್ನು ಮುಖಾಮುಖಿಯಾಗಿ ತರುವುದಿಲ್ಲ. 'ದಾಟು' ಕಾದಂಬರಿಗಳಲ್ಲಿ ದೇವಸ್ಥಾನದ ಪ್ರವೇಶ, ಸತ್ಯಭಾಮ ಜನಿವಾರ ಬಿಸುಡುವುದು ಇವೆಲ್ಲ ಪ್ರಗತಿಪರವೆನ್ನುವಂತಹ ಸಂಗತಿಗಳಾಗಿ ಕಾಣಿಸುತ್ತವೆ. ಜೊತೆಗೆ ಎರಡು ಜನಾಂಗಗಳ ನಾಯಕರ ನಡುವಿನ ಭಿನ್ನ ನಿಲುವುಗಳ ಜಾತಿ, ಅಸಮಾನತೆಯ ವಿಚಾರಗಳಾಗಿವೆ. ಆದರೆ 'ಭಾರತೀಪುರ'ದಲ್ಲಿ ಇದೇ ಮಾದರಿಯ ಪಾತ್ರಗಳು ಇವೆ. ಜಗನ್ನಾಥ ಶ್ರೀಮಂತಿಕೆಯ ಕಾರಣದಿಂದ ಎಲ್ಲವನ್ನು ತನ್ನ ಅಹಂಕಾರದ ತೃಪ್ತಿಗಾಗಿ ಬಳಸಿಕೊಳ್ಳುತ್ತಾನೆ.

'ಬಂಡಾಯ' ಕಾದಂಬರಿ ಇದಕ್ಕಿಂತ ಭಿನ್ನವಾದುದು. 'ಬಂಡಾಯ'ದಲ್ಲಿ ಬರುವ ಕಾರ್ಮಿಕವರ್ಗವು ತನ್ನ ವರ್ಗಶೋಷಣೆಯನ್ನು ಪ್ರತಿಭಟಿಸುವುದನ್ನು ಕಾಣುತ್ತೇವೆ. ಈ ಪ್ರತಿಭಟನೆಯ ಪ್ರಭಾವ ಆಳುವ ವರ್ಗದ ನಾಶಕ್ಕೆ ಕಾರಣವಾಗುತ್ತದೆ ಎಂದು ವರ್ಗಶತ್ರುಗಳು ಕಾರ್ಮಿಕರು ಮತ್ತು ನಾಯಕರ ನಡುವೆ ಭಿನ್ನತೆಗಳನ್ನು ಸೃಷ್ಟಿಸಿ ವರ್ಗಚಳುವಳಿ, ವರ್ಗಹೋರಾಟವನ್ನು ದಿಕ್ಕು ತಪ್ಪಿಸುವ ಆಳುವ ವರ್ಗ ರಾಜಕೀಯವನ್ನು ಇಲ್ಲಿ ನಿರೂಪಿಸಿದ್ದಾರೆ. ಹೀಗೆ ಈ ಸಂದರ್ಭದ ಸಾಹಿತ್ಯ ಬರಹಗಾರರ ಮೇಲೆ ಅನೇಕ ಕ್ರಾಂತಿಕಾರಕ ವಿಚಾರಗಳು ಪ್ರಭಾವ ಬೀರಿದರೂ ಅವುಗಳ ಪ್ರಭಾವಗಳನ್ನು ಗೌಣಗೊಳಿಸಿ, ವ್ಯಕ್ತಿ ನಿರೂಪಣೆಗೆ ಹೆಚ್ಚು ಒತ್ತು ಕೊಡುವುದರ ಮೂಲಕ ದುಡಿಯುವ ವರ್ಗದ ಆಂತರಿಕ ಒತ್ತಡಗಳು ಮತ್ತು ಈ ವರ್ಗದ ಮೇಲೆ ಆಗಿರುವ ರಾಜಕೀಯ ಚಿಂತನೆಗಳನ್ನು ಗೌಣಗೊಳಿಸುವ ಕಾರ್ಯ ನಡೆದಿದೆ ಅನಿಸುತ್ತದೆ. ಹಾಗಾಗಿ ಇಲ್ಲಿ ಗಾಂಧೀ, ಲೋಹಿಯಾವಾದದ ದಟ್ಟ ಪ್ರಭಾವ ಸಾಹಿತ್ಯದ ಬರಹಗಳಲ್ಲಿ ಕಾಣಿಸುವುದನ್ನು ಕಾಣುತ್ತೇವೆ.

ದಲಿತ ಬಂಡಾಯದ ಬರಹಗಾರರು ಮುಖ್ಯವಾಗಿ ವರ್ಗಶೋಷಣೆ ಮತ್ತು ಜಾತಿಶೋಷಣೆಯ ಪರಿಣಾಮಗಳನ್ನು ಸಂಕೀರ್ಣವಾಗಿ ವಿಶ್ಲೇಷಿಸಿದ್ದಾರೆ. ಈ ಸಂದರ್ಭದ ಬರಹಗಾರರು ಸಾಮಾಜಿಕ ಅಸಮಾನತೆ, ಸಂಪತ್ತಿನ ಅಸಮಾನತೆ, ಜಾತಿಯ ಶೋಷಣೆ, ವರ್ಗಶೋಷಣೆಯ ಎಂತಹ ಗಂಭೀರ ವಿಷಯಗಳನ್ನು ದುಡಿಯುವ ವರ್ಗದ ರಾಜಕೀಯ ನೆಲೆಯಲ್ಲಿ ವಿಶ್ಲೇಷಿಸುವುದನ್ನು ಗುರುತಿಸಲು ಸಾಧ್ಯ. ಯಾಕೆಂದರೆ ಇಲ್ಲಿನ ಅನೇಕ ಬರಹಗಾರರು ಸಮಾಜದ ಸೂಕ್ಷ್ಮವಾದ ವಸ್ತುವಿಷಯವನ್ನು ಸಾಹಿತ್ಯದಲ್ಲಿ ಅಭಿವ್ಯಕ್ತಿಸಿದ್ದಾರೆ. ಅದರಲ್ಲಿಯೂ ಅಂಬೇಡ್ಕರ್ ಮತ್ತು ಮಾರ್ಕ್ಸ್ ಅವರ ಚಿಂತನೆಗಳ ಪ್ರಭಾವದಿಂದ ಬಂದಂತಹ ಅನೇಕ ಬರವಣಿಗೆ ಮತ್ತು ಹೋರಾಟದ

ಪ್ರಭಾವ, ಹಾಗೆಯೇ ದಲಿತ ಸಂಘರ್ಷ ಸಮಿತಿಯ ಹೋರಾಟಗಳು ಅನೇಕ ಲೇಖಕರನ್ನು ಹುಟ್ಟು ಹಾಕಿದೆ ಮತ್ತು ಸಾಹಿತ್ಯವನ್ನು ಜನಮುಖಿಯಾಗಿಸುವ ಪ್ರಯತ್ನವನ್ನು ಈ ಕಾಲದ ಹೋರಾಟಗಳು ಮಾಡಿವೆ. ಅದರ ಪರಿಣಾಮವಾಗಿಯೇ ಈ ಕಾಲಘಟ್ಟದಲ್ಲಿ ಅವಮಾನ, ಅನ್ಯಾಯ, ಹಸಿವು, ಬಡತನ, ಶೋಷಣೆಯಂತಹ ಅನೇಕ ವಿಷಯಗಳನ್ನು ವಸ್ತುವಾಗಿ ಸ್ವೀಕರಿಸಿ ಸಾಹಿತ್ಯ ಬರಹಗಳು ಬಂದಿರುವುದನ್ನು ಕಾಣಬಹುದು. ದೇವನೂರ ಮಹಾದೇವ, ಮ.ನ. ಜವರಯ್ಯ, ಚೆನ್ನಣ್ಣ ವಾಲೀಕಾರ, ಅರವಿಂದ ಮಾಲಗತ್ತಿ, ಮುಳ್ಳೂರು ನಾಗರಾಜ, ಶಿವರುದ್ರ ಕಲ್ಲೋಳಿಕರ ಮುಂತಾದ ಅನೇಕ ದಲಿತ ಬರಹಗಾರರು ದುಡಿಯುವ ವರ್ಗದ ಸಮಸ್ಯೆಗಳನ್ನು ಸಾಹಿತ್ಯದಲ್ಲಿ ಒಡಮೂಡಿಸಿದ್ದಾರೆ. ಅಸಮಾನತೆ, ಶೋಷಣೆ, ಭೂಮಿಯ ಹಕ್ಕಿನ ಪ್ರಶ್ನೆ, ಕೂಲಿಯ ಪ್ರಶ್ನೆ, ಬಡತನ, ಹಸಿವು, ಮೇಲ್ವರ್ಗದ ದೌರ್ಜನ್ಯ ಹೀಗೆ ದುಡಿಯುವ ವರ್ಗವು ಎದುರಿಸುತ್ತಿರುವ ಗಂಭೀರ ಸಮಸ್ಯೆಗಳನ್ನು ಕಾದಂಬರಿಯಲ್ಲಿ ನಿರೂಪಿಸಿದ್ದಾರೆ.

ಹಾಗೆಯೇ ದುಡಿಯುವ ವರ್ಗದ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳ ಪರಿಣಾಮಗಳು ಶ್ರಮಿಕವರ್ಗದ ಮೇಲೆ ಯಾವ ರೀತಿಯಲ್ಲಿ ಪ್ರಭಾವ ಬೀರುತ್ತವೆ. ಈ ಸಂಕಷ್ಟಗಳನ್ನು ಸಮಾಜದಲ್ಲಿ ದಿನನಿತ್ಯ ಆಳುವ ವರ್ಗ ಹರಡುತ್ತಿರುತ್ತದೆ. ಇದನ್ನು ಎದುರಿಸಿ ದುಡಿಯುವ ವರ್ಗ ತನ್ನ ವರ್ಗದ ಶೋಷಣೆಯನ್ನು ಎದುರಿಸುವುದನ್ನು ಕಾದಂಬರಿಯಲ್ಲಿ ವಿವರಿಸಿರುವುದನ್ನು ನೋಡಬಹುದು. ಒಂದು ಕಡೆ ಆಳುವ ವರ್ಗವು ತನ್ನ ಅಸ್ತಿತ್ವಕ್ಕಾಗಿ ದುಡಿಯುವ ಜನರನ್ನು ಶೋಷಣೆ ಮಾಡುವುದೇ ಅದರ ವೃತ್ತಿಯಾಗಿಸಿಕೊಂಡಿದೆ. ಆದರೆ ಶ್ರಮಿಕವರ್ಗ ಈ ಆಳುವ ವರ್ಗದ ಶೋಷಣೆಯ ವಿರುದ್ಧ ಸಂಘಟಿತರಾಗದೆ ಜಾಗೃತಿಯು ಮನೋಭಾವದಲ್ಲಿ ಇರುವುದನ್ನು ಕಾದಂಬರಿಗಳ ಮೂಲಕ ಕಾಣಿಸುತ್ತದೆ. ಒಂದು ವರ್ಗವಾಗಿ ಆಳುವ ವರ್ಗವನ್ನು ಸೋಲಿಸುವ ಹಾದಿಯನ್ನು ದುಡಿಯುವ ವರ್ಗ ಕಂಡುಕೊಳ್ಳದೆ ಇರುವುದನ್ನು ಕಾಲದ ಬರಹಗಳಲ್ಲಿ ಕಾಣಿಸುತ್ತದೆ. ಅಂದರೆ ದುಡಿಯುವ ವರ್ಗಕ್ಕೆ ಅಗತ್ಯವಾಗಿ ಬೇಕಾಗಿರುವುದನ್ನು ಕಾದಂಬರಿಯಲ್ಲಿ ನಿರೂಪಿಸಿರುವುದನ್ನು ಕಾಣುತ್ತೇವೆ. ಭೂಮಿಯಿಂದ ವಂಚಿತರಾದವರಿಗೆ ಭೂಮಿಯ ಹಕ್ಕಿನ ಪ್ರಶ್ನೆ, ಭೂಮಿಗಾಗಿ ಹಂಬಲಿಸುವ ಸಮುದಾಯದ ಸ್ಥಿತಿಗತಿ, ಅಸಮಾನ, ಅನ್ಯಾಯಕ್ಕೆ ಒಳಗಾದ ಜನರ ಸಂಕಷ್ಟಗಳು, ಬಡತನ, ಹಸಿವು ಕುರಿತು ಇಲ್ಲಿ ಅನೇಕ ಕೃತಿಗಳು ರಚನೆಯಾಗಿವೆ. ದುಡಿಯುವ ಜನರ ಬಿಡುಗಡೆಯ ಪ್ರಯತ್ನಕ್ಕಾಗಿ ರಚನೆಯಾದ ಅನೇಕ ಬರಹಗಳು ಈ ಕಾಲಘಟ್ಟದ ಪ್ರಧಾನ ಆಶಯವಾಗಿ ಮೂಡಿಬಂದಿದೆ. ಅದರಲ್ಲಿಯೂ ದುಡಿಯುವ ವರ್ಗದ ಆಶಯಕ್ಕೆ ಹೆಚ್ಚು ಒತ್ತು ಕೊಟ್ಟಿರುವುದು ಈ ಸಂದರ್ಭದ ಸಾಹಿತ್ಯದ ಸೃಜನಶೀಲತೆಯ ಆಗಿದೆ. ಹೀಗೆ ದುಡಿಯುವ ಜನರ ಬದಲಾವಣೆ ಕಾಣಿಸುತ್ತದೆ.

ಕನ್ನಡ ಕಾದಂಬರಿಗಳು ದುಡಿಯುವ ವರ್ಗದ ಬದಲಾವಣೆಯನ್ನು ಎಲ್ಲಾ ಕಾಲದಲ್ಲಿ ಗುರುತಿಸುತ್ತಾ ಬಂದಿವೆ. ಅದರಲ್ಲಿಯೂ ಕಾದಂಬರಿಗಳಲ್ಲಿ ದುಡಿಯುವ ವರ್ಗವನ್ನು ಜಾತಿ

ಆಧಾರಿತವಾಗಿ, ವರ್ಗ ಆಧಾರಿತವಾಗಿ ಗುರುತಿಸಿರುವುದು. ಹಾಗೆಯೇ ಇಡೀ ಉತ್ಪಾದನಾ ಸಂಬಂಧ ಮತ್ತು ಉತ್ಪಾದನೆಯ ಮೇಲಿನ ಹಿಡಿತದ ಕಾರಣದಿಂದ ಶ್ರಮಿಕವರ್ಗವನ್ನು ಕಾದಂಬರಿ ಸಾಹಿತ್ಯ ಗುರುತಿಸಿದೆ. ಎಲ್ಲಾ ಕಾದಂಬರಿಗಳ ಒಳಗೆ ಒಂದೇ ತೆರನಾದ ದುಡಿಯುವ ವರ್ಗದ ಚಿತ್ರಣ ಬರುವುದಿಲ್ಲ. ಅದೇ ರೀತಿಯಲ್ಲಿ ಹಲವು ಕಾದಂಬರಿಗಳ ವಿವಿಧ ಪಾತ್ರಗಳು ಕೂಡ ಭಿನ್ನಭಿನ್ನವಾದ ದುಡಿಯುವ ವರ್ಗದ ಚಿತ್ರಣವನ್ನು ನೀಡುತ್ತವೆ. ನವೋದಯದ ಸಂದರ್ಭದಲ್ಲಿ ರಚನೆಯಾದ ಕಾದಂಬರಿಗಳು ಜಾತಿ ಆಧಾರಿತವಾಗಿ ದುಡಿಯುವ ವರ್ಗವನ್ನು ಗುರುತಿಸಿವೆ. ಕೀಳು ಜಾತಿ ಎಂದು ಪರಿಗಣಿಸಿರುವ ಊಳಿಗಮಾನ್ಯಶಾಹಿ ಮೌಲ್ಯಗಳ ಮೂಲಕ ದುಡಿಯುವ ವರ್ಗವನ್ನು ಗುರುತಿಸಿರುವುದು ಕಾಣುತ್ತೇವೆ. ಇಲ್ಲಿ ದುಡಿಯುವ ವರ್ಗವು ಆಳುವ ವರ್ಗದ ಶೋಷಣೆಯನ್ನು ಒಪ್ಪಿಕೊಂಡ ಹೋರಾಟವನ್ನು ಕಾಣುತ್ತೇವೆ.

ಕುವೆಂಪು, ಕಾರಂತರು ಮುಂತಾದ ಲೇಖಕರು ಶ್ರಮಿಕವರ್ಗವನ್ನು ಜಾತಿಯ ಚೌಕಟ್ಟಿನಲ್ಲಿ ಗ್ರಹಿಸಿರುವುದು ಮತ್ತು ಈ ಮೂಲಕ ದುಡಿಯುವ ವರ್ಗದ ಮುಖ್ಯವಾದ ಸಮಸ್ಯೆಗಳನ್ನು ಜಾತಿಯ ನೆಲೆಗಟ್ಟಿನಲ್ಲಿ ಗ್ರಹಿಸಿರುವುದರಿಂದ ಭೂಮಿಯ ಪ್ರಶ್ನೆ, ಅಸಮಾನತೆ, ಶೋಷಣೆಯನ್ನು ವರ್ಗಪ್ರಜ್ಞೆಯ ಭಾಗವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಹೊರಗಿನ ಪ್ರಭಾವಗಳು ದುಡಿಯುವ ಜನರ ಜಾಗೃತಿಗೆ ಕಾರಣವಾಗಿರುವ ಚರಿತ್ರೆ ಇದ್ದರೂ ಸಾಹಿತ್ಯ ಕೃತಿಗಳು ದುಡಿಯುವ ವರ್ಗದ ರಾಜಕೀಯ ಪ್ರಜ್ಞೆಯನ್ನು ಗೌಣಗೊಳಿಸಿವೆ. ಈ ಮಾತನ್ನು ಪ್ರಗತಿಶೀಲ ಮತ್ತು ದಲಿತ ಸಾಹಿತ್ಯವನ್ನು ಹೊರತುಪಡಿಸಿ ಎಲ್ಲಾ ಕಾಲಘಟ್ಟಕ್ಕೂ ಅನ್ವಯಿಸಬಹುದು.

ಅಸಮಾನತೆ, ಶೋಷಣೆಯ ವಿರುದ್ಧ ಅನೇಕ ಪ್ರತಿಭಟನೆಗಳು ನಡೆದರೂ ಅದರ ಪ್ರಭಾವವನ್ನು ಸಾಹಿತ್ಯದ ಓದು ನಿಯಂತ್ರಿಸುತ್ತಾ ಬಂದಿದೆ. ಹಾಗೆಯೇ ವರ್ಗವೈವಿಧ್ಯತೆಯ ಪರಿಣಾಮ ದುಡಿಯುವ ಜನರ ಮೇಲೆ ಪ್ರಭಾವ ಬೀರಿತು. ಅವರು ಈ ಆಳುವ ವರ್ಗದ ವಿರುದ್ಧ ಸ್ವಯಂ ಪ್ರತಿಭಟನೆಗೆ ಇಳಿದಿದ್ದಾರೆ. ಆದರೆ ಹೊರಗಿನ ಒತ್ತಡಗಳು ಇದ್ದರೂ ಸಾಹಿತ್ಯ ಬರಹಗಾರರು ವರ್ಗಪ್ರಜ್ಞೆಯನ್ನು ಮುಚ್ಚಿಟ್ಟು ಜಾತಿ ಆಧಾರಿತವಾಗಿ ದುಡಿಯುವ ಜನರ ದೃಷ್ಟಿಕೋನವನ್ನು ನಿರೂಪಿಸುವುದರಿಂದ ಇದು ಆಳುವ ವರ್ಗದ ಕೃತಕ ಪೋಷಕವಾಗಿ ಕಾಣಿಸುತ್ತದೆ ಹೊರತು ದುಡಿಯುವ ಜನರ ಶ್ರಮದ ಮೇಲೆ ಆಳುವ ವರ್ಗ ನಿಂತಿದೆ, ಅದನ್ನು ನಿಲ್ಲಿಸಲು ವರ್ಗಸಂಘರ್ಷ ಒಂದೇ ದಾರಿ ಎನ್ನುವ ನಿಲುವಿಗೆ ಸಾಹಿತ್ಯದ ನಿರೂಪಣೆಯು ಮುಂದಾಗುವುದಿಲ್ಲ. ಆದ್ದರಿಂದ ಹೊರಗಿನ ಮತ್ತು ಒಳಗಿನ ಒತ್ತಡಗಳು, ಪ್ರಭಾವಗಳು ದುಡಿಯುವ ಜನರ ಬದಲಾಗುವಿಕೆಗೆ ಕಾರಣವಾಗಿದೆ.

**೪.೩. ದುಡಿಯುವ ವರ್ಗದ ಸ್ವಾವಲಂಬಿ ಬದುಕಿನ ಸಾಧ್ಯತೆಗಳು**

ಕಾದಂಬರಿ ಸಾಹಿತ್ಯವು ದುಡಿಯುವ ವರ್ಗ ಮತ್ತು ಆಳುವ ವರ್ಗದ ಆಲೋಚನೆಗಳನ್ನು ಪ್ರತಿಬಿಂಬಿಸುತ್ತದೆ. ಆದರೆ ಕಾದಂಬರಿಗಳು ದುಡಿಯುವ ವರ್ಗವನ್ನು ಗ್ರಹಿಸಿರುವ ವಿಧಾನಗಳು

ಹಾಗೂ ಸ್ವರೂಪಗಳು ಯಾವುದು ಎಂಬುದರ ಕೇಂದ್ರ ಚರ್ಚೆಯೇ ಪ್ರಸ್ತುತ ಪ್ರಬಂಧದ ಸಾಮಾನ್ಯ ಉದ್ದೇಶ. ಈ ಹಿನ್ನೆಲೆಯಲ್ಲಿ ದುಡಿಯುವ ವರ್ಗವನ್ನು ಸ್ವಾವಲಂಬಿ ಬದುಕಿನ ಹಿನ್ನೆಲೆಯಲ್ಲಿ ಕಾದಂಬರಿಗಳು ಚಿತ್ರಿಸುತ್ತವೆಯೋ ಅಥವಾ ಪರಾವಲಂಬಿ ಬದುಕಿನ ಹಿನ್ನೆಲೆಯಲ್ಲಿ ಚಿತ್ರಿಸುತ್ತವೆಯೋ ಎಂಬ ಮುಖ್ಯ ಪ್ರಶ್ನೆಯನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಚಿತ್ರಣವನ್ನು ಗಮನಿಸಿ ಮತ್ತು ದುಡಿಯುವ ವರ್ಗದ ಪಾತ್ರಗಳ ವರ್ತನೆ, ಸ್ವಭಾವಗಳನ್ನು ಪರಿಗಣಿಸಿ ದುಡಿಯುವ ವರ್ಗವನ್ನು ಯಾವ ರೀತಿಯಲ್ಲಿ ನಿರೂಪಿಸಲಾಗಿದೆ ಎಂಬುದನ್ನು ಕಂಡುಕೊಳ್ಳಲಾಗುವುದು. ಒಂದು ಕಾದಂಬರಿಯ ಒಳಗೆ ದುಡಿಯುವ ವರ್ಗದ ಪಾತ್ರಗಳ ಚಿತ್ರಣ ಬಂದಲ್ಲಿ ತನಗೆ ತಾನೇ ಒಂದು ಶೋಷಿತ ವರ್ಗದ ಪರವಾದ ಹಿತಾಸಕ್ತಿಯುಳ್ಳ ಬರವಣಿಗೆ ಎಂಬ ನಿರ್ಧಾರ ಅಥವಾ ನಿಲುವಿಗೆ ಬಂದಿರುವ ವಿಮರ್ಶಾ ವಲಯವನ್ನು ಕಾಣುತ್ತೇವೆ. ಆದರೆ ಕಾದಂಬರಿಯ ಇಡಿಯಾದ ಚಿತ್ರಣದಲ್ಲಿ ಅದಕ್ಕೆ ವಿರುದ್ಧವಾದ ನಿಲುವುಗಳನ್ನು ಸಹ ಗುರುತಿಸಲು ಸಾಧ್ಯ ಕಾದಂಬರಿಯು ದುಡಿಯುವ ವರ್ಗವನ್ನು ನಿರೂಪಿಸುವಾಗ ಸಮಾಜದಲ್ಲಿ ಇರುವ ಸ್ಥಿತಿಯನ್ನು ಯಥಾಸ್ಥಿತಿಯಲ್ಲಿ ಚಿತ್ರಿಸಿರುವುದಿಲ್ಲ. ಬದಲಿಗೆ ತನಗೆ ಅನುಕೂಲವಾಗುವ ರೀತಿಯಲ್ಲಿ ಬಹಳ ಸೂಕ್ಷ್ಮವಾಗಿ ಅಭಿವ್ಯಕ್ತಿಸಿರುವುದನ್ನು ಕಾಣುತ್ತೇವೆ.

ಕೆಳವರ್ಗದ ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳಿಗೆ ಹೆಚ್ಚು ಒತ್ತುಕೊಟ್ಟು ಬರೆದಿರುವ ಕೃತಿಗಳು ಅಭಿವ್ಯಕ್ತಿಸಿರುವ ದುಡಿಯುವ ವರ್ಗದ ಚಿತ್ರಣವೇ ಒಂದು ರೀತಿಯಲ್ಲಿ ಇದ್ದರೆ, ದುಡಿಯುವ ವರ್ಗದ ಸಾಮಾಜಿಕ ಸಮಸ್ಯೆಗಳ ಕುರಿತು ಬಂದಿರುವ ಬರವಣಿಗೆಯಲ್ಲಿ ಇದಕ್ಕಿಂತ ಭಿನ್ನವಾದ ತಿಳುವಳಿಕೆ ಇರುತ್ತದೆ. ಇಲ್ಲಿ ಸಾಮಾಜಿಕ ಸಮಸ್ಯೆಗಳಿಂದ ದುಡಿಯುವ ವರ್ಗವು ಎದುರಿಸುತ್ತಿರುವ ಸಂಕಷ್ಟಗಳ ವಿವರಣೆಗಳನ್ನು ಹೆಚ್ಚು ಹೆಚ್ಚು ಕಾಣುತ್ತೇವೆ. ಆದರೆ ದುಡಿಯುವ ವರ್ಗದ ನೆಲೆಯಿಂದ ನೋಡಿದಾಗ ವರ್ಗ ಅಸಮಾನತೆ, ವರ್ಗಶೋಷಣೆಯ ಪರಿಣಾಮದಿಂದ ಉಂಟಾಗಬಹುದಾದ ಪರಿಣಾಮಗಳನ್ನು ನಿರೂಪಿಸುವಲ್ಲಿ ಅನೇಕ ಕಾದಂಬರಿಗಳಲ್ಲಿ ಆಸಕ್ತಿ ಕಾಣಿಸುವುದಿಲ್ಲ. ಆದರೂ ಅವುಗಳಲ್ಲಿ ಬಿಡಿಬಿಡಿಯಾಗಿ ಬಂದಿರುವ ಅಸಮಾನತೆ, ಶೋಷಣೆಗಳನ್ನು ಪರಿಗಣಿಸಿ ದುಡಿಯುವ ವರ್ಗದ ಸ್ವಾಲಂಬಿ ಅಥವಾ ಪರಾವಲಂಬಿ ಬದುಕಿನ ಚಿತ್ರಣವನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ವರ್ಗ ಶ್ರೇಣೀಕರಣ, ವರ್ಗ ಅಸಮಾನತೆ, ವರ್ಗ ಶೋಷಣೆಯ ನೇರವಾದ ನಿರೂಪಣೆ ಕಾಣಿಸುವುದಿಲ್ಲ. ಬದಲಿಗೆ ಅಸಮಾನತೆ, ಭೂಮಿ ಅಸಮಾನತೆ, ಜಾತಿಯ ಶ್ರೇಣೀಕರಣ, ಶೋಷಣೆ ಮುಂತಾದ ಆರ್ಥಿಕ ಶೋಷಣೆಗಳನ್ನು ಪ್ರಧಾನವಾಗಿ ಪರಿಗಣಿಸಿ ದುಡಿಯುವ ವರ್ಗದ ಸ್ವಾವಲಂಬಿ ಬದುಕಿನ ಸಾಧ್ಯತೆಗಳನ್ನು ಕಟ್ಟಿಕೊಡಲಾಗುವುದು.

ಕುವೆಂಪು ಅವರ ಎರಡೂ ಕಾದಂಬರಿಗಳಲ್ಲಿ ದಲಿತ ಸಮುದಾಯವೇ ದುಡಿಯುವ ವರ್ಗವಾಗಿರುವುದನ್ನು ಕಾಣುತ್ತೇವೆ. ಇಲ್ಲಿ ಬರುವ ದಲಿತ ವರ್ಗದ ಪಾತ್ರಗಳು ಇನ್ನೂ ಶಿಕ್ಷಣ ಪಡೆಯದ ಆಧುನಿಕತೆಯ ಪ್ರಜ್ಞೆಯನ್ನು ಮೈಗೂಡಿಸಿಕೊಳ್ಳದ ಊಳಿಗಮಾನ್ಯಶಾಹಿ ದಬ್ಬಾಳಿಕೆಗೆ

ಹೊಂದಿಕೊಂಡು ಹೋಗುವಂತಹ ಪಾತ್ರಗಳು. ಇಲ್ಲಿ ಕಾಣಿಸಿಕೊಳ್ಳುವ ದುಡಿಯುವ ವರ್ಗವು ಭೂಮಾಲೀಕ ವರ್ಗದ ಅಧೀನವಾಗಿ ಬದುಕುತ್ತಿರುವ ಚಿತ್ರಣ ಹೊಂದಿದೆ. ಭೂಮಾಲೀಕ ವ್ಯವಸ್ಥೆಯ ಮೇಲೆ ಅವಲಂಬಿತವಾಗಿರುವ ದಲಿತ ಪಾತ್ರಗಳಾಗಿ ಈ ಕಾದಂಬರಿಗಳಲ್ಲಿ ಚಿತ್ರಿಸಲಾಗಿದೆ. ಈ ದಲಿತ ವರ್ಗವು ಗದ್ದೆ, ತೋಟಗಳಲ್ಲಿ ದುಡಿಮೆ ಮಾಡಿ ಬದುಕುತ್ತಿದ್ದಾರೆ. ಆಳುವ ವರ್ಗವು ಇವರ ದುಡಿಮೆಯ ಪ್ರತಿಫಲವನ್ನು ವಂಚಿಸುವುದರಿಂದ ತನ್ನ ವರ್ಗದ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಿದ್ದಾರೆ. ಈ ಸತ್ಯಾಂಶ ಕಾದಂಬರಿಯಲ್ಲಿ ಇಡಿಯಾಗಿ ಕಂಡರೂ ಕಾದಂಬರಿಕಾರರು ಎಲ್ಲಿಯೂ ಸಹ ದುಡಿಯುವ ವರ್ಗದ ಶ್ರಮದ ಪ್ರತಿಫಲದಿಂದ ಭೂಮಾಲೀಕ ವ್ಯವಸ್ಥೆ ನಿಂತಿದೆ ಎಂಬ ನಿರೂಪಣೆಯನ್ನು ಮಾಡುವುದಿಲ್ಲ. ಆದ್ದರಿಂದ ಅವರು ದುಡಿಯುವ ವರ್ಗ ಇದೆ ಎಂದು ನಿರೂಪಿಸುವ ಬದಲು, ಅವರ ಜಾತಿಯ ಪ್ರಶ್ನೆಗಳನ್ನು ಮುಂದೆ ತಂದು ಆರ್ಥಿಕ ಶೋಷಣೆಯನ್ನು ಗೌಣಗೊಳಿಸುವ ಪ್ರಯತ್ನವನ್ನು ಕಾದಂಬರಿಯಲ್ಲಿ ಮಾಡಿದ್ದಾರೆ. ಹಾಗಾಗಿಯೆ ದಲಿತ ವರ್ಗದ ಸ್ಥಿತಿಗತಿಯನ್ನು ಯಾಂತ್ರಿಕವಾಗಿ ಅಂದರೆ ರೊಮ್ಯಾಂಟಿಕ್ ಆಗಿ ಚಿತ್ರಿಸಲಾಗಿದೆ. ಮಾಲೀಕರ ಆಶ್ರಯದಲ್ಲಿ ದುಡಿಯುವ ವರ್ಗವಿದೆ. ಮಾಲೀಕ ವರ್ಗದ ಅವಲಂಬನೆಯಲ್ಲಿ ದುಡಿಯುವ ವರ್ಗ ನಿಂತಿದೆ. ಮಾಲೀಕ ವರ್ಗವಿಲ್ಲದೆ ಹೋದರೆ ದುಡಿಯುವ ವರ್ಗಕ್ಕೆ ಕೆಲಸವೂ ಇಲ್ಲ ಎಂಬ ಆಳುವ ವರ್ಗದ ಆಲೋಚನೆ ಹಾದಿಯಲ್ಲಿ ಕಾದಂಬರಿಯ ನಿರೂಪಣೆ ಸಾಗಿದೆ. ಆ ಕಾರಣದಿಂದ ಮಾಲೀಕ ವರ್ಗಕ್ಕೂ ಮತ್ತು ದುಡಿಯುವ ವರ್ಗಕ್ಕೂ ಪೋಷಕ-ಪೋಷಿತ ಸಂಬಂಧದ ಹಿನ್ನೆಲೆಯಲ್ಲಿ ಅಭಿವ್ಯಕ್ತಿಸಲಾಗಿದೆ. ಆದರೆ ದುಡಿಯುವ ವರ್ಗದ ಪ್ರಜ್ಞೆಯ ಭಾಗವಾಗಿ ನೋಡುವುದಾದರೆ, ದುಡಿಯುವ ವರ್ಗವನ್ನು ದೌರ್ಜನ್ಯ, ದಬ್ಬಾಳಿಕೆ, ಶೋಷಣೆಯನ್ನು ಮಾಡುತ್ತಾ ನಿರಂತರವಾಗಿ ದುಡಿಸಿಕೊಳ್ಳುತ್ತಾ ಮಾಲೀಕ ವರ್ಗ ನಿಂತಿದೆ.

ಹೀಗೆ ಕಾದಂಬರಿಯಲ್ಲಿ ದುಡಿಯುವ ವರ್ಗವನ್ನು ಮತ್ತು ಆಳುವ ವರ್ಗದ ಸ್ಥಿತಿಗತಿಗಳನ್ನು ತಿಳಿಸಲು ಇವರನ್ನು ಜಾತಿಯ ಆಧಾರಿತವಾಗಿ ತರಲಾಗಿದೆ. ಆ ಕಾರಣದಿಂದ ಎಲ್ಲಿಯೂ ಕಾದಂಬರಿಗಳಲ್ಲಿ ದುಡಿಯುವ ವರ್ಗ ಮತ್ತು ಆಳುವ ವರ್ಗದ ನಡುವೆ ಸಂಘರ್ಷಗಳು ನಡೆಯುವುದಿಲ್ಲ. ಬದಲಿಗೆ ದುಡಿಯುವ ಜನರನ್ನು 'ಹೊನ್ನಾಳಿ ಹೊಡೆತ' ಮೂಲಕ ತನ್ನ ಅಧೀನದಲ್ಲಿಟ್ಟುಕೊಳ್ಳುತ್ತಿದ್ದ ಕ್ರೂರವಾದ ಸ್ಥಿತಿಗತಿಯನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಆದ್ದರಿಂದ ದುಡಿಯುವ ವರ್ಗದ ಸ್ವಾವಲಂಬಿ ಬದುಕಿನ ಸಾಧ್ಯತೆಗಳು ಎಲ್ಲಿಯೂ ಗೋಚರಿಸುವುದಿಲ್ಲ. ಅವರಿಗೆ ಜಾತಿಯ ಶೋಷಣೆಗಳ ಅರಿವು ಆಗಿದೆ ಹೊರತು ಅದರಿಂದ ಅವರಿಗೆ ಬಿಡುಗಡೆಯ ಸೂಚನೆಗಳಿಲ್ಲ. ಶ್ರಮಶೋಷಣೆಯಿಂದ ಶೋಷಕ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ ಕಾಣುವುದಿಲ್ಲ. ತನ್ನ ಹಕ್ಕುಗಳನ್ನು ಕಳೆದುಕೊಂಡು ತನ್ನದಲ್ಲದ ಭೂಮಿಯಲ್ಲಿ ದುಡಿಯುವ ಶ್ರಮಜೀವಿಗಳಾಗಿ ಆಳುವ ವರ್ಗದ ಶೋಷಣೆಯನ್ನು ಒಪ್ಪಿಕೊಂಡು ಹೋಗುವ ದುಡಿಯುವ ವರ್ಗವನ್ನು ಚಿತ್ರಿಸಿರುವುದು ಕಾದಂಬರಿಯ ಮಿತಿಯಾಗಿ ಕಾಣಿಸುತ್ತದೆ.

ಆದರೆ ಅದೇ ಕಾಲಘಟ್ಟದ ಕಾರಂತರ ಕಾದಂಬರಿಗಳಲ್ಲಿ ದುಡಿಯುವ ವರ್ಗದ ಚಿತ್ರಣಗಳು ಭಿನ್ನವಾಗಿ ನಿರೂಪಣೆಗೊಂಡಿವೆ. 'ಚೋಮನ ದುಡಿ'ಯಲ್ಲಿ ಬರುವ ಹೊಲೆಯ ಸಮುದಾಯವು

ಭೂಮಿಯ ಹಕ್ಕಿಗಾಗಿ ಹಂಬಲಿಸುತ್ತಿರುವುದನ್ನು ಕಾಣುತ್ತೇವೆ. ಇವರು ಭೂಮಾಲೀಕರ ಭೂಮಿಯಲ್ಲಿ ಕೃಷಿಕಾರ್ಮಿಕರಾಗಿ ದುಡಿದು ಜೀವನ ಕಟ್ಟಿಕೊಂಡಿದ್ದಾರೆ. ಆದ್ದರಿಂದ ಈ ಮಾಲೀಕ ವರ್ಗದವರಿಗೆ ಅಧೀನವಾಗಿರುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಆಳುವ ವರ್ಗವಾದ ಭೂಮಾಲೀಕ ವರ್ಗ ನಿರಂತರವಾಗಿ ಅವರ ಮೇಲೆ ದೌರ್ಜನ್ಯ, ದಬ್ಬಾಳಿಕೆಯನ್ನು ಮಾಡುತ್ತಾ ಬಂದಿದೆ. ಈ ಮೂಲಕ ಆಳುವ ವರ್ಗವು ಅಸಮಾನತೆಯ ಸಮಾಜವನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಿದೆ. ಅದೇ ಹೊತ್ತಿನಲ್ಲಿ ಶೋಷಣೆಗೆ ಒಳಗಾದ ಈ ದುಡಿಯುವ ವರ್ಗವು ಅದರಿಂದ ಬಿಡುಗಡೆಗೆ ಪ್ರಯತ್ನಿಸುತ್ತಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಚೋಮನು ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾದರೂ ಅವನಿಗೆ ಗೇಣಿಗಾಗಿ ಭೂಮಿಯ ಕೇಳಿ ಪಡೆದುಕೊಳ್ಳುವ ಹಂಬಲ ಇದೆ. ಹಾಗೆಯೇ ಇವನ ನಂತರ ತಲೆಮಾರಿನ ಜನರು 'ಮತಾಂತರ' ಆಗುವುದರ ಮೂಲಕ ಭೂಮಿಯನ್ನು ಪಡೆದುಕೊಳ್ಳುವ ಪ್ರಯತ್ನ ಮಾಡುತ್ತಿದ್ದಾರೆ. ಈ ಮೂಲಕ ಶೋಷಣೆಯಿಂದ ಬಿಡುಗಡೆಯನ್ನು ಬಯಸುವುದು ಕಾಣುತ್ತೇವೆ. ಆದರೆ ಕಾದಂಬರಿಯ ಕೇಂದ್ರ ಚರ್ಚೆಯು ದುಡಿಯುವ ಜನರಿಗೆ ಭೂಮಿಯ ಹಕ್ಕನ್ನು ಕುರಿತು ನಿರೂಪಿಸುವುದರ ಜೊತೆಗೆ ಆಳುವ ವರ್ಗವು ಭೂಮಿಯ ಹಕ್ಕನ್ನು ದುಡಿಯುವ ಜನರಿಗೆ ದಕ್ಕದ ಹಾಗೆ ನೋಡಿಕೊಳ್ಳುವಲ್ಲಿ ಯಶಸ್ವಿಯಾಗಿರುವುದನ್ನು ಸಹ ಇಲ್ಲಿ ಗುರುತಿಸಬಹುದು.

ಭೂಮಿಯ ಹಕ್ಕಿಗಾಗಿ ಹಂಬಲಿಸುವ ಸಮುದಾಯಕ್ಕೆ ಭೂಮಿಯ ಹಕ್ಕನ್ನು ಅವರ ಜೀವನ ಬದಲಾವಣೆಯ ಸ್ವರೂಪದಲ್ಲಿ ತರುವುದಿಲ್ಲ. ಬದಲಿಗೆ ಗೇಣಿಗಾಗಿ ಭೂಮಿಯನ್ನು ಕೇಳಿಸುವುದರ ಮೂಲಕ ಭೂಮಿಯ ಹಕ್ಕಿನ ಪ್ರಶ್ನೆಯನ್ನು ಸಂಕುಚಿತಗೊಳಿಸುತ್ತದೆ. ದುಡಿಯುವ ಜನರಿಗೆ 'ಭೂಮಿಯ ಹಕ್ಕೆ' ಅವರ ಬಿಡುಗಡೆಗೆ ದಾರಿಯಾಗಬೇಕಿತ್ತು. ಅವರ ಹಸಿವು, ಬಡತನದ ನಿವಾರಣೆಗೆ ಸಾಧ್ಯವಾಗಬೇಕಿತ್ತು. ಆದರೆ ಸಂಪತ್ತಿನ ಹಕ್ಕಿನ ಪ್ರಶ್ನೆಯು ಇಲ್ಲಿ ಯಾಂತ್ರಿಕವಾಗಿ ನಿರೂಪಣೆಗೊಂಡಿದೆ. ಅದರ ಬದಲಿಗೆ ಮೌರ್ಯ ಪ್ರಕ್ರಿಯೆ ದುಡಿಯುವ ಜನರಿಗೆ ಇಲ್ಲಿ ಮುಖ್ಯವಾದ ಸಾಮಾಜಿಕ ಬದಲಾವಣೆಯ ಸೂಚನೆಯಾಗಿ ಕಾಣಿಸುತ್ತವೆ. ಆದರೆ ಊಳಿಗಮಾನ್ಯ ಶಾಹಿ ವ್ಯವಸ್ಥೆಯು ದುಡಿಯುವ ಜನರ ಶ್ರಮಶೋಷಣೆ ಮಾಡುವುದರ ಮೂಲಕ ತನ್ನ ಅಸ್ತಿತ್ವವನ್ನು ಬರಮಾಡಿಕೊಂಡು ಕೆಳವರ್ಗದ ಜನರನ್ನು ಶೋಷಣೆ ಮಾಡುವುದು ಅವರ ವೃತ್ತಿಯಾಗಿ ಬಂದಿದೆ. ಆದ್ದರಿಂದ ದುಡಿಯುವ ಜನರ ಸ್ವಾವಲಂಬಿ ಬದುಕಿನ ಸಾಕ್ಷಿಗಳಾಗಿ ಭೂಮಿಯ ಹಕ್ಕು ದುಡಿಯುವ ಜನರಿಗೆ ದಕ್ಕಬೇಕು. ಅದನ್ನು ಮತಾಂತರದ ಮೂಲಕವಾದರೂ ಪಡೆದುಕೊಳ್ಳುವ ಸಾಧ್ಯತೆಯನ್ನು ಕಾದಂಬರಿ ಮುಂದಿಡುತ್ತದೆ. ಆದರೆ ದುಡಿಯುವ ಜನರ ವರ್ಗಶೋಷಣೆ, ವರ್ಗ ಅಸಮಾನತೆಯಿಂದ ಬಿಡುಗಡೆ ಪ್ರಯತ್ನವನ್ನು ತರುವಲ್ಲಿ ಕಾದಂಬರಿಗೆ ಆಸಕ್ತಿ ಇಲ್ಲ. ಆ ಕಾರಣದಿಂದ ವರ್ಗದ ಪ್ರಜ್ಞೆಯನ್ನು ಗೌಣಗೊಳಿಸಿ, ವ್ಯಕ್ತಿಕೇಂದ್ರಿತವಾಗಿ ಚೋಮನ ಸಮಸ್ಯೆಗೆ ಒಂದಿಷ್ಟು ಸುಧಾರಣೆಯನ್ನು ಕಾದಂಬರಿಯು ಬಯಸುತ್ತದೆ.

'ಗ್ರಾಮಾಯಣ' ಕಾದಂಬರಿಯಲ್ಲಿ ಭೂಮಿ ಮತ್ತು ಅಧಿಕಾರ ಭೂಮಾಲೀಕ ವರ್ಗದ ಅಧೀನದಲ್ಲೇ ಮುಂದುವರಿಸುವ ಆಳುವ ವರ್ಗದ ರಾಜಕೀಯ ತಂತ್ರವನ್ನು ನಿರೂಪಿಸುತ್ತಿದೆ.

ರಾಣೋಜಿರಾಯನ ಮರಣದ ನಂತರ ಶುರುವಾದ ಆಸ್ತಿ ಮತ್ತು ಅಧಿಕಾರದ ಕಲಹವು ಇಡೀ ಪಾದಳ್ಳಿಯ ಜೀವನಕ್ರಮದ ಮೇಲೆ ಪರಿಣಾಮವನ್ನು ಉಂಟುಮಾಡುತ್ತದೆ. ತನ್ನ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡು ದುಡಿಯುವ ಸಮುದಾಯಗಳು ಮತ್ತಷ್ಟು ಸಂಕಷ್ಟಗಳಿಗೆ ಸಿಲುಕಿಕೊಳ್ಳುತ್ತವೆ. ಈ ಸಮುದಾಯಗಳು ಭೂಮಿಗಾಗಿ, ಅಧಿಕಾರಕ್ಕಾಗಿ ಹಂಬಲಿಸುವುದಿಲ್ಲ. ಬದಲಿಗೆ ಆಳುವ ವರ್ಗದ ಆಂತರಿಕ ಕಲಹಗಳ ಪರಿಣಾಮಗಳನ್ನು ಎದುರುನೋಡುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಆದರೆ ಯಾವ ಸಮುದಾಯಗಳು ತನ್ನ ಹಕ್ಕಿಗಾಗಿ ಹಂಬಲಿಸ ಬೇಕಿತ್ತೋ ಆ ಸಮುದಾಯ ಮೌನ ವಹಿಸುವುದನ್ನು ಕಾಣಬಹುದು. ಈ ಬಗೆಯ ಆ ವ್ಯಕ್ತಿಯ ಕ್ರಮವು ಆಳುವ ವರ್ಗದ ರಾಜಕೀಯ ತಂತ್ರವಾಗಿ ಮೂಡಿಬಂದಿದೆ. ಯಾವ ವರ್ಗವು ಭೂಮಿ ಮತ್ತು ಅಧಿಕಾರಕ್ಕಾಗಿ ಹಂಬಲಿಸುತ್ತಿತ್ತೋ ಆ ವರ್ಗದ ಪ್ರಧಾನವಾದ ಬೇಡಿಕೆಗಳನ್ನು ಇಲ್ಲಿ ಮುಚ್ಚಿಡಲಾಗಿದೆ. ಕೃಷಿ ಭೂಮಿಯಲ್ಲಿ, ವಾಡೆಯಲ್ಲಿ ದುಡಿದ ದುಡಿಯುವ ಸಮುದಾಯವು ಯಾವ ಆಸೆಯನ್ನೂ ವ್ಯಕ್ತಪಡಿಸುವುದಿಲ್ಲ. ಭೂಮಾಲೀಕ ವರ್ಗದ ಶೋಷಣೆ ನಡೆದರು. ಅದರ ವಿರುದ್ಧ ಪ್ರತಿಭಟನೆ ಇಲ್ಲ. ಇದು ಕಾದಂಬರಿಕಾರರು ಉದ್ದೇಶಪೂರ್ವಕವಾಗಿ ಹುಟ್ಟುಹಾಕಿರುವ ಮನೋಭಾವ. ಆದರೆ ಯಾವ ವರ್ಗ ಶೋಷಣೆಯನ್ನು ಅನುಭವಿಸುತ್ತಿತ್ತೋ ಅದು ಆ ವಸ್ತುಸ್ಥಿತಿಯ ವಿರುದ್ಧ ಪ್ರತಿಭಟಿಸುವ ಗುಣವನ್ನು ಹೊಂದಿರುತ್ತದೆ. ಹಾಗೆಯೇ ಹಕ್ಕುಗಳನ್ನು ಕಳೆದುಕೊಂಡು ಭೂಮಿಯಲ್ಲಿ ದುಡಿಯುವುದೇ ಮೂಲವೃತ್ತಿಯೆಂದು ತಿಳಿದಿರುವ ವರ್ಗ ತನಗೂ ಈ ಭೂಮಿಯ ಮೇಲೆ ಹಕ್ಕಿದೆ ಎನ್ನುವ ಭಾವನೆಗಳು ಇಲ್ಲಿ ಕಾಣಿಸುವುದಿಲ್ಲ.

ಈ ಕಾದಂಬರಿಯಲ್ಲಿ ದುಡಿಯುವ ವರ್ಗದ ಚಹರೆಗಳು ಸರಿಯಾಗಿ ನಿರೂಪಣೆಗೊಂಡಿಲ್ಲ. ಇಂತಹ ಸಂದರ್ಭದಲ್ಲಿ ಈ ವರ್ಗದ ಸ್ವಾವಲಂಬಿ ಬದುಕಿಗಾಗಿ ಹಂಬಲಿಸುವುದನ್ನು ನಿರೂಪಿಸುವುದರ ಬದಲಿಗೆ ಅದನ್ನು ಮರೆಮಾಚುವ ಕಾರ್ಯ ಇಲ್ಲಿ ನಡೆದಿದೆ. ದುಡಿಯುವ ವರ್ಗವು ನಂಬಿದ ಮಾನವೀಯ ಮೌಲ್ಯಗಳನ್ನು ಭ್ರಷ್ಟಗೊಳಿಸಿ ಮನುಷ್ಯರಲ್ಲಿ ಅದು ಕ್ರೂರ ಪಶುತ್ವವನ್ನು ಸೃಷ್ಟಿಸಿ ದುಡಿಯುವ ವರ್ಗದ ಹಕ್ಕಿನ ಪ್ರಶ್ನೆಯನ್ನು ಗೌಣಗೊಳಿಸಲಾಗಿದೆ. "ಸುಖ ಮತ್ತು ಲೋಲುಪತೆಯನ್ನು ಆಸ್ತಿ ಹಾಗೂ ಸಂಪತ್ತಿನಲ್ಲಿ ಅರಸಿ ಹೋದವರೆಲ್ಲ ಒಂದಿಲ್ಲ ಒಂದು ಅಪಮಾನದಲ್ಲಿ, ಹಿಂಸೆಯಲ್ಲಿ ಹಾಗೂ ನೋವಿನಲ್ಲಿ ಬಳಲುವುದನ್ನು ಇಡೀ ಕಾದಂಬರಿ ನಿರೂಪಿಸಿದೆ. ಆ ಮೂಲಕ ಆಸ್ತಿ ಹಾಗೂ ಅಧಿಕಾರದ ಒಡೆತನದ ಬಗ್ಗೆ ತುಂಬ ಆಳವಾದ ಸಹನೆಯನ್ನು ಪರೋಕ್ಷವಾಗಿ ನಿರೂಪಿಸಿದೆ".[೧೦] ಹೀಗೆ ದುಡಿಯುವ ವರ್ಗದ ಪ್ರಶ್ನೆಯನ್ನು, ಅವರ ಸ್ವಾವಲಂಬಿ ಬದುಕಿನ ಸಾಧ್ಯತೆಗಳನ್ನು ಕಾದಂಬರಿಯು ಎಲ್ಲಿಯೂ ಚರ್ಚಿಸುವುದಿಲ್ಲ. ಹಾಗೆಯೇ ಉತ್ಪಾದಕ ವರ್ಗವನ್ನು ಯಾಂತ್ರಿಕವಾಗಿ ಚರ್ಚಿಸುತ್ತಾ ಭೂಮಿಯ ವಸ್ತುಸ್ಥಿತಿಯನ್ನು, ಅದರ ಅಧಿಕಾರದ ಪಲ್ಲಟವನ್ನು ಆಳುವ ವರ್ಗಗಳ ನಡುವೆ ಆಗುವಂತಹ ರಾಜಕೀಯ ನಿರೂಪಣೆಯು ದುಡಿಯುವ ವರ್ಗದ ಅನೇಕ ಸಮಸ್ಯೆಗಳಿಗೆ ಇಲ್ಲಿ ಸ್ಥಾನ ನಿರ್ಮಾಣ ಮಾಡದೆ ಹೋಗಿರುವುದನ್ನು ಕಾಣಬಹುದು.

ನಿರಂಜನರ 'ಚಿರಸ್ಮರಣೆ' ಕಾದಂಬರಿಯಲ್ಲಿ ದುಡಿಯುವ ವರ್ಗದ ಪ್ರತಿನಿಧಿಯಾಗಿ ಕೃಷಿ ಕಾರ್ಮಿಕ ವರ್ಗವನ್ನು ಗುರುತಿಸಬಹುದು. ಈ ಕಾದಂಬರಿಯಲ್ಲಿ ಬರುವ ಪಾತ್ರವಾದ ನಂಬಿಯಾರ ಮತ್ತು ನಂಬೂದಿರಿ ಪಾತ್ರಗಳು ಆಳುವ ವರ್ಗವನ್ನು ಪ್ರತಿನಿಧಿಸುತ್ತಿವೆ. ಇವರು ರೈತರ ಭೂಮಿಯನ್ನು ದೌರ್ಜನ್ಯ ಮಾಡುವುದರ ಮೂಲಕ ವಶಪಡಿಸಿಕೊಂಡಿದ್ದಾರೆ. ಇದರಿಂದ ಈ ವರ್ಗವು ಭೂಮಾಲೀಕ ವರ್ಗವಾಗಿದೆ. ಇವರೇ ದುಡಿಯುವ ವರ್ಗವನ್ನು ಶೋಷಣೆ ಮಾಡುವ ಆಳುವ ವರ್ಗವಾಗಿ ಕಾದಂಬರಿಯು ಚಿತ್ರಿಸಿದೆ. ಭೂಮಾಲೀಕರ ದೌರ್ಜನ್ಯದಿಂದ ಭೂಮಿಯನ್ನು ಕಳೆದುಕೊಂಡಿರುವ ರೈತಕಾರ್ಮಿಕರು ಅವರ ಭೂಮಿಯಲ್ಲಿ ಕೂಲಿ ಮಾಡಿಕೊಂಡು ಅವರ ಅಧೀನದಲ್ಲಿ ಬದುಕುವಂತಹ ಸ್ಥಿತಿ ನಿರ್ಮಾಣವಾಗಿದೆ. ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾದ ಜನರು ತಮ್ಮ 'ಭೂಮಿಯ ಹಕ್ಕಿಗಾಗಿ' ತನ್ನ ವರ್ಗದ ಮೇಲೆ ನಡೆಯುತ್ತಿರುವ ಶೋಷಣೆ, ದೌರ್ಜನ್ಯದ ವಿರುದ್ಧ ರಾಜಕೀಯ ಸಂಘರ್ಷಕ್ಕೆ ಮುಂದಾಗಿರುವುದನ್ನು ಕಾಣಬಹುದು.

ಊಳಿಗಮಾನ್ಯಶಾಹಿ ಭೂಮಾಲೀಕ ವರ್ಗ ಮತ್ತು ದೇಶವನ್ನು ಆಳುತ್ತಿರುವ ವಸಾಹತುಶಾಹಿಗಳು ನಮ್ಮ ವರ್ಗಶತ್ರುಗಳು ಎಂಬ ನಿರ್ಧಾರವನ್ನು ಕೈಯ್ಯೂರಿನ ಹೋರಾಟಗಾರರು ಗುರುತಿಸುತ್ತಾರೆ. ತಮ್ಮ ವರ್ಗದ ಶೋಷಣೆಗೆ ಈ ಆಳುವ ವರ್ಗದ ವ್ಯವಸ್ಥೆಯ ಕಾರಣ ಎನ್ನುವ ದುಡಿಯುವ ಸಮುದಾಯವು ವರ್ಗಸಂಘರ್ಷಕ್ಕೆ ಮುಂದಾಗುತ್ತದೆ. ಭೂಮಿ ಮತ್ತು ರೈತರಿಗೆ ಉತ್ಪಾದನಾ ಸಂಬಂಧವಿದೆ. ಅದರ ಜೊತೆಗೆ ಹಕ್ಕಿನ ಸಂಬಂಧವು ಕೂಡ ಇದೆ. ಆದರೆ ಈ ಭೂಮಿಯಲ್ಲಿ ಕೃಷಿ ಮಾಡುವರು ನಾವು, ಪ್ರತಿಫಲ ಮಾತ್ರ ಶ್ರೀಮಂತ ವರ್ಗದ ಪಾಲಾಗುತ್ತದೆ. ಈ ಶ್ರಮ ಶೋಷಣೆಯ ವಿರುದ್ಧ, ಭೂಮಿಯ ಹಕ್ಕಿಗಾಗಿ ಕ್ರಾಂತಿಕಾರಿ ಹಾದಿಯನ್ನು ಇಲ್ಲಿನ ರೈತರು ಬಳಸಿಕೊಳ್ಳುತ್ತಾರೆ. 'ಉಳುವವನೆ ಹೊಲದೊಡೆಯ' ಎಂಬ ರಾಜಕೀಯ ಪ್ರಜ್ಞೆಯನ್ನು ಕಾದಂಬರಿ ಮುಂದಿಡುತ್ತದೆ. ಇದರ ಅನುಷ್ಠಾನಕ್ಕಾಗಿ ರಾಜಕೀಯ ಸಂಘರ್ಷಕ್ಕೆ ಮುಂದಾಗುತ್ತದೆ. ಈ ಮೂಲಕ ದುಡಿಯುವ ವರ್ಗವನ್ನು ಶೋಷಣೆ ಮಾಡುತ್ತಿರುವ ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿ ವ್ಯವಸ್ಥೆಯ ನಾಶಕ್ಕೆ ಕಾದಂಬರಿ ಬಯಸುತ್ತಿದೆ. ಭೂಮಿಯ ಸಮಾನ ಹಂಚಿಕೆ ಮತ್ತು ಸ್ವತಂತ್ರವನ್ನು ಬಯಸುವ ದುಡಿಯುವ ವರ್ಗವು ತನ್ನ ಎಲ್ಲಾ ಸಮಸ್ಯೆಗಳಿಗೆ ಮೂಲ ಪರಿಹಾರವಾಗಿ ಅದನ್ನು ರಾಜಕೀಯ ಆರ್ಥಿಕ ಚಿಂತನೆಯಾಗಿ ಬಳಸುವುದನ್ನು ಕಾದಂಬರಿಯಲ್ಲಿ ನಿರೂಪಿಸಲಾಗಿದೆ. ಮಾರ್ಕ್ಸ್ ಅವರ ಆರ್ಥಿಕ, ರಾಜಕೀಯ ಚಿಂತನೆಗಳ ದುಡಿಯುವ ವರ್ಗದ ಸ್ವಾವಲಂಬಿ ಬದುಕನ್ನು ನಿರ್ಮಾಣ ಮಾಡುವ ರಾಜಕೀಯ ಶಕ್ತಿಯಾಗಿ ಕಾದಂಬರಿಯಲ್ಲಿ ಚಿತ್ರಿಸಿರುವುದನ್ನು ಕಾಣಬಹುದು.

ಯು.ಆರ್. ಅನಂತಮೂರ್ತಿ ಅವರ 'ಭಾರತೀಪುರ' ಮತ್ತು 'ಸಂಸ್ಕಾರ' ಕಾದಂಬರಿಗಳಲ್ಲಿ ದುಡಿಯುವ ವರ್ಗವು ಆಳುವ ವರ್ಗದ ಮೇಲೆ ಅವಲಂಬಿಸಿರುವುದನ್ನು ಕಾಣಬಹುದು. 'ಭಾರತೀಪುರ'ದಲ್ಲಿ ಅಸ್ಪೃಶ್ಯತೆ ಕಾದಂಬರಿಯ ಮುಖ್ಯ ಸಮಸ್ಯೆಯಾಗಿ ಕಂಡರೂ ಅದನ್ನು ಯಾಂತ್ರಿಕವಾಗಿ ನಿರೂಪಿಸಿರುವುದನ್ನು ನೋಡಬಹುದು. ಇಲ್ಲಿ ಮಲ ಹೊರುವ ಕೆಲಸದಲ್ಲಿ

ತೊಡಗಿರುವ ದಲಿತ ಸಮುದಾಯ ಭೂಮಾಲೀಕ ವರ್ಗದ ಶೋಷಣೆಗೆ ಒಳಗಾಗಿದೆ. ಈ ವರ್ಗದಲ್ಲಿ ಮನೆ ಮಾಡಿಕೊಂಡಿರುವ ಮಂಜುನಾಥನ ಮೇಲಿನ ನಂಬಿಕೆಯನ್ನು ಬದಲಾಯಿಸುವ ಅವರಿಗೆ ದೇವಸ್ಥಾನದ ಒಳಗೆ ಪ್ರವೇಶವನ್ನು ಬಯಸುವ ಶ್ರೀಮಂತ ವರ್ಗವನ್ನು ಕಾಣುತ್ತೇವೆ. ಇಲ್ಲಿ ದಲಿತರನ್ನು ಸವರ್ಣೀಯರು ಮುಟ್ಟಿಸಿಕೊಂಡರೆ ಅಥವಾ ದೇವಸ್ಥಾನದ ಒಳಗೆ ಪ್ರವೇಶ ಮಾಡಿದರೆ ಜಾತಿ ಅಸಮಾನತೆ, ಅಸ್ಪೃಶ್ಯತೆಯಂತಹ ಪದ್ಧತಿ ನಾಶವಾಗುತ್ತದೆ ಎನ್ನುವ ಆಳುವ ವರ್ಗಪ್ರಜ್ಞೆ ನಿರೂಪಿತವಾಗಿದೆ. ಇಡೀ ಶೋಷಿತ ಸಮುದಾಯ ತನ್ನ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಕಳೆದುಕೊಂಡು ಭೂಮಾಲೀಕ ವರ್ಗದ ಅಧೀನದಲ್ಲಿ ಬದುಕನ್ನು ನಿರ್ವಹಿಸುತ್ತಿದ್ದಾರೆ. ಆದರೆ ಎಲ್ಲಿಯು ತನ್ನ ವರ್ಗದ ಮೇಲೆ ನಡೆಯುವ ದೌರ್ಜನ್ಯ, ಶೋಷಣೆಯ ವಿರುದ್ಧ ಧ್ವನಿ ಮಾಡುವುದಿಲ್ಲ. ಇದರಿಂದ ಆಳುವ ವರ್ಗದೊಂದಿಗೆ ಹೊಂದಾಣಿಕೆಯ ಸ್ವಭಾವವನ್ನು ಹೊಂದಿರುವ ದುಡಿಯುವ ವರ್ಗವನ್ನು ಇಲ್ಲಿ ಗುರುತಿಸಬಹುದು.

ಅವರ ಮತ್ತೊಂದು ಕಾದಂಬರಿ 'ಸಂಸ್ಕಾರ'ದಲ್ಲಿ ದುಡಿಯುವ ವರ್ಗದ ಚಹರೆಗಳೇ ಕಾಣಿಸುವುದಿಲ್ಲ. ಇಲ್ಲಿ ಸಂಸ್ಕೃತಿ, ಆಚರಣೆಗಳಿಗೆ ಸಂಬಂಧಪಟ್ಟ ಪ್ರಶ್ನೆಯಾದರೂ ಶೋಷಿತ ವರ್ಗದ ಸಂಸ್ಕೃತಿಯನ್ನು ಈ ಕಾದಂಬರಿ ವ್ಯಾಪ್ತಿಗೆ ತರುವುದಿಲ್ಲ. ಇಲ್ಲಿ ಬ್ರಾಹ್ಮಣ ಮತ್ತು ಶೂದ್ರ ಸಂಸ್ಕೃತಿಗಳ ಮುಖಾಮುಖಿಯಾದರೂ ಅದರ ಪರಿಣಾಮವು ಶೂದ್ರಸಂಸ್ಕೃತಿಯನ್ನು ಒತ್ತಿ ಹೇಳುವ ನಿರೂಪಣೆ ಇದೆ. ಇಲ್ಲಿ ಬರುವ ಶ್ರಮಜೀವಿಗಳಾಗಿ ಬೆಳ್ಳಿಯ ಪಾತ್ರ ಕಾಣಿಸುತ್ತದೆ. ಆದರೆ ಆ ಪಾತ್ರಕ್ಕೆ ವ್ಯಕ್ತಿತ್ವ ನಿರ್ಮಾಣವಾಗಿಲ್ಲ. ಅವಳ ವೃತ್ತಿಯ ವಿವರ ದೊರೆಯುವುದಿಲ್ಲ. ಆದರೂ ಇಲ್ಲಿ ಕಾಣಿಸುವ ದಲಿತ ವರ್ಗವು ಭೂಮಿಯ ಒಡೆತನ ಹೊಂದಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಒಟ್ಟಾರೆ ಈ ಎರಡು ಕಾದಂಬರಿಗಳು ದುಡಿಯುವ ವರ್ಗದ ಮೂಲಭೂತ ಪ್ರಶ್ನೆಗಳನ್ನು ಹಿಂದಕ್ಕೆ ತಳ್ಳಿ, ಸಮಾಜದ ಸಾಮಾಜಿಕ ಸಮಸ್ಯೆಗಳಿಗೆ ಹೆಚ್ಚು ಒತ್ತುಕೊಟ್ಟಿವೆ. ಅವರ ಆರ್ಥಿಕ ಮತ್ತು ರಾಜಕೀಯ ಹಕ್ಕಿನ ಪ್ರಶ್ನೆಯನ್ನು ಮರೆಮಾಚಿ ನಿರೂಪಿಸುವ ತಂತ್ರವನ್ನು ಈ ಎರಡು ಕಾದಂಬರಿಗಳ ಮೂಲ ಗುಣಸ್ವಭಾವವಾಗಿ ಕಾಣಿಸುತ್ತದೆ. ಶೋಷಿತ ವರ್ಗದ ಪಾತ್ರಗಳು ಸಾಮಾಜಿಕ ವ್ಯವಸ್ಥೆಯನ್ನು ನಿರೂಪಿಸುವಾಗ ಪ್ರಧಾನವಾದ ಪಾತ್ರಗಳಾಗಿ, ವಾಸ್ತವ ಸಮಾಜದ ಪರಿಸ್ಥಿತಿಗೆ ಅನುಗುಣವಾಗಿ ನಿರೂಪಿಸದೆ, ವರ್ಗ ಅಸಮಾನತೆ, ವರ್ಗಪ್ರಜ್ಞೆಯನ್ನು ಮುಚ್ಚಿಟ್ಟು ಜಾತಿ ಅಸ್ಪೃಶ್ಯತೆಯೇ ಪ್ರಧಾನ ಸಮಸ್ಯೆಯಾಗಿ ನೋಡುವ ಸ್ವಭಾವ ಈ ಕಾದಂಬರಿಗಳಲ್ಲಿ ಕಾದಂಬರಿಕಾರರು ಮಾಡಲು ರಾಜಕೀಯ ಸ್ವಭಾವವೇ ಕಾರಣವಾಗಿದೆ. ಆದ್ದರಿಂದ ದುಡಿಯುವ ವರ್ಗದ ಸ್ವಾವಲಂಬಿ ಬದುಕಿನ ಸಾಧ್ಯತೆಗಳು ಕಣ್ಮರೆಯಾಗಿವೆ.

'ಬಂಡಾಯ' ಕಾದಂಬರಿಯಲ್ಲಿ ಉದ್ಯಮ ಜಗತ್ತಿನ ಸಮಸ್ಯೆ ಸಂಘರ್ಷಗಳನ್ನು ಯಥಾವತ್ತಾಗಿ ತೆರೆದಿಡುತ್ತದೆ. ಹಾಗೆಯೇ ಶ್ರೀಮಂತ ವರ್ಗವು ತನ್ನ ಹಿತಾಸಕ್ತಿಗಾಗಿ ಕಾರ್ಮಿಕ ವರ್ಗವನ್ನು ಶೋಷಣೆ ಮಾಡುವುದನ್ನು ಚಿತ್ರಿಸುತ್ತದೆ. ಮುಂಬಯಿ ನಗರದ ಉದ್ಯಮ ಜಗತ್ತು, ಕಾರ್ಮಿಕ ವರ್ಗವನ್ನು ಶೋಷಣೆ ಮಾಡುವುದನ್ನು ವಿವಿಧ ಸ್ವರೂಪದಲ್ಲಿ ಚಿತ್ರಿಸುತ್ತದೆ. ಇಲ್ಲಿ ಕಾರ್ಮಿಕ

ವರ್ಗವು ಉತ್ಪಾದನಾ ಶಕ್ತಿಯಾಗಿದೆ. ಇವರು ನಾಗೇಶ್ ಶರ್ಮಾ, ಸತೀಶ್ ಶರ್ಮಾರ ಬಂಡವಾಳಶಾಹಿ ಧೋರಣೆಗಳನ್ನು ಎದುರಿಸುವ ಸಂಘರ್ಷದ ಚರಿತ್ರೆಯನ್ನು ಇಲ್ಲಿ ಕಾಣುತ್ತೇವೆ. ಶ್ರಮಜೀವಿಗಳಾದ ಕಾರ್ಮಿಕರ ಶ್ರಮಮೌಲ್ಯ ಶೋಷಣೆ ಮಾಡುವುದರ ಮೂಲಕ ಮಾಲೀಕ ವರ್ಗ ನಿಂತಿದೆ. ಈ ವರ್ಗವು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ನಿರಂತರವಾಗಿ ದೌರ್ಜನ್ಯ, ಶೋಷಣೆ, ಸಂಘರ್ಷಗಳನ್ನು ಹುಟ್ಟು ಹಾಕಿ ಕಾರ್ಮಿಕ ವರ್ಗದ ವರ್ಗಸಂಘರ್ಷವನ್ನು ದಿಕ್ಕು ತಪ್ಪಿಸುವ ಕೆಲಸ ಮಾಡುವುದೇ ಇದರ ಕಾರ್ಯವಾಗಿದೆ. ಆದರೆ ಕಾರ್ಮಿಕ ವರ್ಗ ಇದಕ್ಕಿಂತ ಭಿನ್ನವಾಗಿ ತನ್ನ ಹಕ್ಕುಗಳಿಗಾಗಿ ಅಂದರೆ ಮೂಲಭೂತ ಸಮಸ್ಯೆಗಳಾದ ಸಂಬಳ, ಬಡ್ತಿ, ಬೋನಸ್, ಹೆರಿಗೆರಜೆ, ತುಟ್ಟಿಭತ್ಯೆ ಹೆಚ್ಚಳ ಇತ್ಯಾದಿ ಸಮಸ್ಯೆಗಳಿಗಾಗಿ ಹೋರಾಡುತ್ತವೆ. ಈ ಹೋರಾಟವನ್ನು ಪ್ರಭುತ್ವದ ಬೆಂಬಲದೊಂದಿಗೆ ಆಳುವ ವರ್ಗ ದಮನ ಮಾಡಲು ಪ್ರಯತ್ನಿಸುತ್ತದೆ.

ಯಾಕೆಂದರೆ ಈ ಕಾರ್ಮಿಕ ವರ್ಗದ ಹೋರಾಟ ವರ್ಗಹೋರಾಟವಾಗಿ ಪರಿವರ್ತನೆಯಾದರೆ ತಮ್ಮ ಬುನಾದಿ ನಾಶವಾಗುತ್ತದೆ. ಆರ್ಥಿಕ ಸಮಾನತೆ ನಿರ್ಮಾಣಕ್ಕೆ ದಾರಿ ಆಗುತ್ತದೆ ಎಂದು ಆಳುವ ವರ್ಗವು ಕಾರ್ಮಿಕ ಚಳುವಳಿಗಳನ್ನು ನಾಶ ಮಾಡಲು ಅವರಲ್ಲಿ ಭಿನ್ನಾಭಿಪ್ರಾಯವನ್ನು ಉಂಟುಮಾಡಿ ತನ್ನ ಹಿತಾಸಕ್ತಿಯಾಗಿ ಉಳಿಸಿಕೊಳ್ಳುವ ಬಂಡವಾಳಶಾಹಿ ವ್ಯವಸ್ಥೆಯನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಆದರೆ ದುಡಿಯುವ ವರ್ಗವಾದ ಕಾರ್ಮಿಕ ವರ್ಗವು ಆರ್ಥಿಕ ಅಸಮಾನತೆಯ ವಿರುದ್ಧ, ಶ್ರಮಮೌಲ್ಯ ಶೋಷಣೆಯ ವಿರುದ್ಧ, ಅವರ ದುಡಿಮೆಗೆ ತಕ್ಕ ಪ್ರತಿಫಲದ ಬೇಡಿಕೆಯನ್ನು ಮುಂದಿಡುವುದಿಲ್ಲ. ಆದರೆ ವರ್ಗಶತ್ರುಗಳ ವಿರುದ್ಧ ಜಾಗೃತಿ ಶುರುವಾಗಿದೆ. ಆ ಹೋರಾಟವು ಹಿಂಸೆಯ ರೂಪವನ್ನು ತಾಳಿದರು. ಇವರು ನಂಬಿರುವ ಸಿದ್ಧಾಂತವು ಮುಖವಾಣಿಯಾಗಿ ಕಾಣಿಸದೆ, ವ್ಯಕ್ತಿಚಿಂತನೆ, ವ್ಯಕ್ತಿನಿರ್ಧಾರವು ಕಾರ್ಮಿಕ ವರ್ಗದ ಬಿಡುಗಡೆಯ ಹಾದಿಯ ಯಶಸ್ಸಿಗೆ ಅಡ್ಡಿಯಾಗಿರುವುದನ್ನು ಕಾದಂಬರಿಯ ಒಟ್ಟು ಸಾರಾಂಶದಲ್ಲಿ ಕಾಣಬಹುದು. ಹಾಗಾಗಿ ದುಡಿಯುವ ವರ್ಗದ ಸ್ವಾವಲಂಬಿ ಬದುಕನ್ನು ನಿರೂಪಿಸುವಲ್ಲಿ ಕಾದಂಬರಿಯು ಹಿನ್ನಡೆ ಅನುಭವಿಸಿದೆ ಅನಿಸುತ್ತದೆ.

ಒಟ್ಟಾರೆ ನವ್ಯದ ಸಂದರ್ಭದ ಸಾಹಿತ್ಯ ಬರಹಗಳು ವ್ಯಕ್ತಿಚಿಂತನೆ, ವಸ್ತುಚಿಂತನೆಗಳಿಗೆ ಒತ್ತು ಕೊಟ್ಟು ಬರೆಯುವುದೇ ಮುಖ್ಯ ಪ್ರವೃತ್ತಿಯಾಗಿದೆ. ಆದರೆ ಸಮಾಜದಲ್ಲಿ ಇರುವ ವರ್ಗ ಶ್ರೇಣೀಕರಣ, ವರ್ಗ ಅಸಮಾನತೆ, ವರ್ಗಶೋಷಣೆಗೆ ಕಾರಣವಾದ ಆರ್ಥಿಕ ಅಸಮಾನತೆಯನ್ನು ಮತ್ತು ಸಂಸ್ಕೃತಿ ಮತ್ತು ಸಾಮಾಜಿಕ ಪ್ರಶ್ನೆಗಳನ್ನು ದುಡಿಯುವ ವರ್ಗದ ಆಲೋಚನೆಯ ವಿಧಾನದಲ್ಲಿ ನಿರೂಪಿಸಲು ಈ ಕಾಲದ ಕನ್ನಡ ಕಾದಂಬರಿ ಸಾಹಿತ್ಯ ವಿಫಲವಾದರೆ, ಯಾವುದೇ ಸಾಹಿತ್ಯ ಕೃತಿಯಲ್ಲಿ ವಸ್ತುಸ್ಥಿತಿಯ ಬಗೆಗೆ ಚಿತ್ರಿಸಿದರೆ ಅದು ಶ್ರೇಷ್ಠ ಕೃತಿಯಾಗುವುದಿಲ್ಲ. ಬದಲಿಗೆ ವಸ್ತುವಿಷಯಗಳನ್ನು ಶೋಷಿತ ವರ್ಗ ಅಥವಾ ಇಡೀ ಮಾನವನ ಮನೋಭಾವನೆಯ ಚಿಂತನೆಗೆ ಒಳಪಡಿಸುವ ಮುಖ್ಯವಾದ ಸಾಹಿತ್ಯ ಬದ್ಧತೆಯಾಗಬೇಕಾಗಿದೆ.

೭೦ರ ದಶಕದ ದಲಿತ-ಬಂಡಾಯ ಸಾಹಿತಿಗಳು ಒಂದು ಹೊಸ ಬಗೆಯ ಪ್ರಯತ್ನಕ್ಕೆ ಮುಂದಾದರು. ನವೋದಯ ನವ್ಯ ಸಾಹಿತಿಗಳಿಗಿಂತ ಬಹಳ ಭಿನ್ನವಾದ ನಿರೂಪಣೆಯನ್ನು ಗುರುತಿಸಬಹುದು. ಇವರಲ್ಲಿ ಶೋಷಿತ ವರ್ಗದ ಸಾಮಾಜಿಕ ಮತ್ತು ರಾಜಕೀಯ ಚಿಂತನೆಗಳನ್ನು ಪರಿಣಾಮಕಾರಿಯಾಗಿ ಸಾಹಿತ್ಯ ಬರವಣಿಗೆಯಲ್ಲಿ ಇವರು ತಂದಿದ್ದಾರೆ. ಇಲ್ಲಿ ಒಂದು ಕಡೆ ಸಾಮಾಜಿಕ ಚಳುವಳಿಗಳು ಸಾಹಿತಿಗಳ ಮೇಲೆ ನೇರ ಪ್ರಭಾವ ಬೀರಿದೆ. ಹಾಗೆಯೇ ಚಳುವಳಿಯಲ್ಲಿ ಇರುವ ಅನೇಕ ಚಿಂತಕರು ಸಾಹಿತ್ಯವನ್ನು ರಚನೆ ಮಾಡಿರುವುದೇ ಇವರ ಸಾಹಿತ್ಯದ ಗಟ್ಟಿತನಕ್ಕೆ ಕಾರಣವಾಗಿದೆ. ಜಾತಿವಾದ, ಕೋಮುವಾದ ರಾಜಕೀಯವನ್ನು ವಿರೋಧಿಸುತ್ತಲೇ ಪರ್ಯಾಯ ರಾಜಕಾರಣಕ್ಕೆ ಹೆಚ್ಚು ಒತ್ತು ಕೊಟ್ಟು ಬರೆದಿರುವುದನ್ನು ಇಲ್ಲಿ ಕಾಣಬಹುದು. ಮಾನವನಿಂದ-ಮಾನವನ ಶೋಷಣೆಯ ಕ್ರೂರ ವಾಸ್ತವಗಳು ಈ ಸಂದರ್ಭದ ಸಾಹಿತ್ಯದಲ್ಲಿ ದಾಖಲಿಸಿರುವುದನ್ನು ಕಾಣಬಹುದು. ಕಥೆ-ಕಾದಂಬರಿ, ವಿಮರ್ಶಾ ಬರಹಗಳು, ಹೋರಾಟದ ಹಾಡುಗಳು, ಕರಪತ್ರಗಳು, ಗೋಡೆ ಬರಹಗಳು, ಪತ್ರಿಕೆಗಳ ಮೂಲಕ ಬಹಳ ಶಕ್ತಿಶಾಲಿಯಾದ ಶೋಷಿತ ವರ್ಗದ ರಾಜಕೀಯ ಚಿಂತನೆಗಳ ಬೆಳವಣಿಗೆಗೆ ಒತ್ತು ಕೊಟ್ಟಿದೆ. ಅದರಲ್ಲಿಯೂ ಅಂಬೇಡ್ಕರ್ ಮತ್ತು ಮಾರ್ಕ್ಸ್ ಚಿಂತನೆಗಳು ಈ ಕಾಲದ ಸಾಹಿತ್ಯ ಚಳುವಳಿಯ ಮೇಲೆ ಪ್ರಭಾವಿಸಿರುವುದನ್ನು ನೋಡಬಹುದು.

ಕಥನ ಸಾಹಿತ್ಯವು ಕೂಡ ಸಮಾಜ ಮತ್ತು ಸಮುದಾಯಗಳ ವಿವಿಧ ಮಗ್ಗುಲುಗಳನ್ನು ಚಿತ್ರಿಸಿದೆ. ಭೂಮಿಯ ಒಡೆತನದ ಪ್ರಶ್ನೆಯೊಂದಿಗೆ ಒಡೆಯ-ಆಳು ಎಂಬ ಅಸಮಾನತೆಯ ನೆಲೆಯನ್ನು ಹಾಗೂ ಜಾತಿ ಶ್ರೇಣೀಕರಣದ ಚಿತ್ರಣವನ್ನು, ಭೂಮಿ ಅಥವಾ ಭೂಹಿಡುವಳಿಯ ಸಂಬಂಧಗಳು, ಜಾತಿ-ಜಾತಿಗಳ ನಡುವಿನ ಅಂತರ ಮುಂತಾದ ಸಮಸ್ಯೆಗಳಿಗೆ ಹೆಚ್ಚು ಆದ್ಯತೆ ಕೊಡಲಾಗಿದೆ. ದೇವನೂರ ಮಹಾದೇವ ಅವರ ಎರಡು ಕಾದಂಬರಿಗಳಲ್ಲಿ ಭೂಮಾಲೀಕ ವ್ಯವಸ್ಥೆ ಮತ್ತು ಪ್ರಭುತ್ವ ದಲಿತ ಸಮುದಾಯವನ್ನು ಶೋಷಣೆ ಮಾಡುವುದರ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಯತ್ನಿಸುತ್ತದೆ. ಹೀಗಾಗಿ ಕೆಳವರ್ಗದ ಜನರು ತನ್ನ ಅಧೀನದಲ್ಲಿ ಇರಬೇಕು ಎಂಬುವ ಆಳುವ ವರ್ಗ ರಾಜಕೀಯವನ್ನು ಕಾಣಬಹುದು. ಇಲ್ಲಿ ಭೂಮಾಲೀಕ ವರ್ಗದ ಶೋಷಣೆಯ ತಂತ್ರವನ್ನು ಕಾದಂಬರಿಯಲ್ಲಿ ಗುರುತಿಸುತ್ತಲೇ ಶೋಷಿತ ವರ್ಗದ ಅನನ್ಯತೆಯನ್ನು ಹೇಳಲು ಬಯಸುತ್ತದೆ. 'ಒಡಲಾಳ'ದಲ್ಲಿ ದುಡಿಯುವ ಜನರ ಹಸಿವು ಮತ್ತು ಬಡತನ ಸಮಸ್ಯೆಯು ಅವರನ್ನು ಬಾಧಿಸುತ್ತದೆ. ಹಸಿವನ್ನು ನೀಗಿಸಿಕೊಳ್ಳಲು ಗೌರಮ್ಮ ಅವಳ ತಂಗಿ ಪುಟಗೌರಿ ಕೂಲಿ ಕೆಲಸಕ್ಕೆ ಹೋಗುತ್ತಾರೆ. ಆದರೆ ಇಲ್ಲಿಯೂ ಕೂಡ ಅವರನ್ನು ಕೆಲಸಕ್ಕೆ ಕರೆಯದ ಭೂಮಾಲೀಕ ವರ್ಗವನ್ನು ಕಾಣಬಹುದು. ಇದರಿಂದ ಹಸಿವಿನ ಸಮಸ್ಯೆಯನ್ನು ಎದುರಿಸಬೇಕಾಗಿದೆ. ಹಾಗೆಯೇ ಕಡಲೆಕಾಯಿ ತಿನ್ನುವ ಪ್ರಸಂಗವು ಇಡೀ ಸಾಕವ್ವನ ಕುಟುಂಬದ ಆರ್ಥಿಕ ಸಂಕಟ ಮತ್ತು ಹಸಿವಿನ ಬಾಧೆಯನ್ನು ತೆರೆದಿಡುತ್ತದೆ. ಆಳುವ ವರ್ಗದ ನಿರಂತರವಾದ ದಾಳಿ ಮುಂದುವರೆದಿದೆ. ಸಾಕವ್ವ ಒಂದು ಹುಂಜ ಕಳೆದುಕೊಂಡು, ನ್ಯಾಯಾಂಗಕ್ಕೆ ದೂರು

ನೀಡಿದರೂ ಅವಳ ಹಕ್ಕುಗಳ ವಂಚನೆಗೆ ನ್ಯಾಯ ಸಿಗದೆ ಮತ್ತೊಂದು ಹುಂಜವನ್ನು ಕಳೆದುಕೊಳ್ಳುವ ಕ್ರೂರಸ್ಥಿತಿಯನ್ನು ಇಲ್ಲಿ ಕಾಣುತ್ತೇವೆ. ಹೀಗೆ ದುಡಿಯುವ ಜನರ ಮೇಲಿನ ಶೋಷಣೆ ಮುಂದುವರಿದರೂ ಆ ಶೋಷಣೆಯ ವಿರುದ್ಧಧ್ವನಿ ಕೆಳವರ್ಗದವರಲ್ಲಿ ಹುಟ್ಟದೇ ಇರುವುದನ್ನು ಇಲ್ಲಿ ನೋಡಬಹುದು. ಆದರೆ ಯಾರ ಜಪ್ತಿಗೂ ಸಿಗದ ನವಿಲಿನ ಚಿತ್ರವು ಅವರ ಶಕ್ತಿ ಸಾಮರ್ಥ್ಯದ ಸಂಕೇತವಾಗಿ ಬೆಳೆಯುತ್ತಿದೆ. ಹೀಗೆ ತನ್ನ ಹಕ್ಕುಗಳ ಪ್ರಶ್ನೆಯು ಇಲ್ಲಿ ಗೌಣವಾಗಿ ರುವುದನ್ನು ಕಾಣಬಹುದು.

'ಕುಸುಮಬಾಲೆ'ಯಲ್ಲಿ ಶೋಷಣೆಗೆ ಒಳಗಾಗಿರುವ ದುಡಿಯುವ ವರ್ಗವಾಗಿ ದಲಿತ ಸಮುದಾಯವನ್ನು ಕಾಣಬಹುದು. ಭೂಮಾಲೀಕ ವರ್ಗದ ದೌರ್ಜನ್ಯದಿಂದ ತನ್ನ ಹಕ್ಕುಗಳನ್ನು ಕಳೆದುಕೊಂಡಿರುವ ಈ ಸಮುದಾಯಗಳು ಭೂಮಾಲೀಕರ ಜೀತದ ಆಳಾಗಿ ದುಡಿಯುತ್ತಿದ್ದಾರೆ. ಈ ಕಾರಣದಿಂದ ಅವರ ಅಧೀನವಾಗಿ ಬದುಕುತ್ತಿರುವುದು ಕಾದಂಬರಿಯಲ್ಲಿ ಚಿತ್ರಣವಾಗಿದೆ. ಇಲ್ಲಿ ಹಸಿವಿನ ಸಂಕಷ್ಟ ಮತ್ತು ಅಂತರ್‌ಜಾತಿ ಸಂಬಂಧಗಳ ಕುರಿತು ಗಂಭೀರವಾದ ವಿಶ್ಲೇಷಣೆ ಇದೆ. ಹಸಿವಿನ ಬಾಧೆಯನ್ನು ಅನುಭವಿಸುತ್ತಿರುವ ಗಾರಸಿದ್ಧಾವನಿಗೆ ಹೊಳೆದಿದ್ದು, ಎಳನೀರನ್ನು ಕುಡಿದು ತನ್ನ ಸಂಕಷ್ಟವನ್ನು ನೀಗಿಸಿಕೊಳ್ಳುವ ಬಯಕೆ. ಆದ್ದರಿಂದ ಎಳನೀರನ್ನು ಕುಡಿಯಲು ಮುಂದಾಗುತ್ತಾನೆ. ಆದರೆ ಭೂಮಾಲೀಕ ವ್ಯವಸ್ಥೆ ಈ ನಡವಳಿಕೆಯನ್ನು ಸಹಿಸದೆ ಅವನ ಮೇಲೆ ದೌರ್ಜನ್ಯ ಮಾಡುವುದಕ್ಕೆ ಮುಂದಾಗುತ್ತದೆ. ಈ ರೀತಿಯಾದ ಆಳುವ ವರ್ಗದ ಕ್ರೌರ್ಯವನ್ನು ಕಾಣಬಹುದು. ಹೀಗೆ ಮೇಲ್ವರ್ಗದ ದಂಡನೆಯನ್ನು ಸಹಿಸಿಕೊಳ್ಳುವ ದಲಿತ ಪಾತ್ರವಾಗಿ ಗಾರಸಿದ್ಧಾವನನ್ನು ಗುರುತಿಸಬಹುದು. ಇಲ್ಲಿ ತನ್ನ ಸಮುದಾಯದವರೇ ಆಳುವ ವರ್ಗದ ಹಿತಾಸಕ್ತಿಗೆ ದುಡಿಯುತ್ತಾರೆ. ಇವರೇ ಗಾರಸಿದ್ಧಾವನಿಗೆ ಹೊಡೆಯುವ ಸ್ಥಿತಿಯನ್ನು ಹುಟ್ಟು ಹಾಕಿರುವುದನ್ನು ಕಾಣುತ್ತೇವೆ. ಆದರೆ ಇಲ್ಲಿ ದಲಿತ ವರ್ಗದವರನ್ನು ಹಸಿವಿಗೆ ತಳ್ಳಿರುವ ಆಳುವ ವರ್ಗವು ತನ್ನ ಶೋಷಣೆಯನ್ನು ಕ್ರೌರ್ಯದ ಮೂಲಕ ಮುಂದುವರಿಸಲು ಪ್ರಯತ್ನಿಸಿದೆ. ಈ ಕ್ರೌರ್ಯಕ್ಕೆ ಬಲಿಯಾದ ವ್ಯಕ್ತಿ ಚನ್ನನಾಗಿದ್ದಾನೆ. ಚನ್ನ ಮತ್ತು ಕುಸುಮಳ ಸಂಬಂಧಗಳು ಸಹಜವಾದ ಪ್ರಕ್ರಿಯೆಯಾಗಿ ಇರುವುದನ್ನು ಹಾರೂರ ಮನೆಯ ಜೋತಮ್ಮನ ಮಾತುಗಳಿಂದ ಕೇಳಬಹುದು. ಆದರೆ ಪರಿಣಾಮದಲ್ಲಿ ಚನ್ನ ಕೊಲೆಯಾಗಿದೆ. ಚನ್ನನ ಕೆಳಜಾತಿಯವನಾದ ಕಾರಣಕ್ಕೆ ಈ ರೀತಿಯ ದೌರ್ಜನ್ಯ ನಡೆದಿರುವುದನ್ನು ಇಲ್ಲಿ ಕಾಣಬಹುದು.

ಹೀಗೆ ಆಳುವ ವರ್ಗವು ಕೆಳವರ್ಗವನ್ನು ಒಂದಿಲ್ಲ ಒಂದು ವಿಷಯದಲ್ಲಿ ನೆಪ ಮಾಡಿ ಶೋಷಣೆ ಮಾಡುವ ಪ್ರಕ್ರಿಯೆಯನ್ನು ಕಾದಂಬರಿಯು ಗುರುತಿಸಿದೆ. ಈ ವರ್ಗಶೋಷಣೆಯ ವಿರುದ್ಧ ದಲಿತ ವರ್ಗದಲ್ಲಿ ಜಾಗೃತಿಯು ಮೂಡುತ್ತಿರುವುದನ್ನು ಗುರುತಿಸಬಹುದು. ಗಾರಸಿದ್ಧಾವನ ತಪ್ಪುಕಾಣಿಕೆ ವಿಷಯದಲ್ಲಿ ಸ್ವತಃ ಮುಳ್ಳೂರು ನಾಗರಾಜರನ್ನೇ ದಿಗಿಲು ಬೀಳಿಸುವ ಬಗೆಯಲ್ಲಿ ಜಾಗೃತಿ ಇದೆ. ಹಾಗೆಯೇ ಆಧುನಿಕ ನ್ಯಾಯವ್ಯವಸ್ಥೆಯ ಮೂಲಕ ನ್ಯಾಯವನ್ನು ನಾಗರಾಜ್ ಸೂಚಿಸುತ್ತಾರೆ. ಅಂದರೆ ಸ್ಥಳೀಯ ನ್ಯಾಯ ವ್ಯವಸ್ಥೆ ಆಳುವ ವರ್ಗದ ಪರವಾದುದು

ಎಂಬುದು ತಿಳಿಯುತ್ತದೆ. ಹೀಗೆ ಕಾದಂಬರಿಯಲ್ಲಿ ದಲಿತರ ಅನೇಕ ಸೂಕ್ಷ್ಮವಾದ ವಸ್ತುವಿಷಯದ ನಿರೂಪಣೆ ಇದ್ದರೂ ದಲಿತರ ಈ ವರ್ಗಶೋಷಣೆಗೆ ಕಾರಣವಾಗಿರುವ ಆರ್ಥಿಕ ಅಸಮಾನತೆ, ಭೂಮಿಯ ಸಮಾನ ಹಂಚಿಕೆ, ಶ್ರಮಮೌಲ್ಯ ಶೋಷಣೆಯ ಬಗೆಗೆ ಕಾದಂಬರಿಯಲ್ಲಿ ಚಿತ್ರಣವಿಲ್ಲ. ಆದರೆ ಇವುಗಳ ಪರಿಣಾಮದಿಂದ ಉಂಟಾಗಿರುವ ಜಾತಿ ಶ್ರೇಣೀಕರಣ, ಜೀತಪದ್ಧತಿ, ಸಾಂಸ್ಕೃತಿಕ ಸಂಬಂಧಗಳನ್ನು ಚರ್ಚಿಸುವುದು ಇಲ್ಲಿ ನಡೆದಿದೆ. ಆದರೆ ದುಡಿಯುವ ವರ್ಗದ ರಾಜಕೀಯ ಪ್ರಜ್ಞೆಯು ಅವರ ಹಕ್ಕು ಮತ್ತು ಸಮಾನತೆಯ ಅಂಶನ್ನು ಹೊಂದಿರುವ ಆರ್ಥಿಕ, ರಾಜಕೀಯ ಚಿಂತನೆಗಳಿಗೆ ಹೆಚ್ಚು ಒತ್ತು ಕೊಟ್ಟಿರುತ್ತದೆ. ಈ ಮೂಲಕ ದುಡಿಯುವ ವರ್ಗದ ಸ್ವಾವಲಂಬಿ ಬದುಕನ್ನು ನಿರ್ಮಿಸುವ ಪ್ರಯತ್ನ ಇರುತ್ತದೆ. ಆದರೆ ಈ ಕಾದಂಬರಿಯಲ್ಲಿ ದುಡಿಯುವ ಜನರ ಸ್ವಾವಲಂಬಿ ಬದುಕನ್ನು ವರ್ಗಪ್ರಜ್ಞೆಯ ಭಾಗವಾಗಿ ನೋಡದೆ, ಆಳುವ ವರ್ಗದ ಪ್ರಜ್ಞೆಯ ಭಾಗವಾಗಿ ನೋಡಿರುವುದರಿಂದ ಇಲ್ಲಿ ದುಡಿಯುವ ಜನರ ಆಳುವ ವರ್ಗದ ಮೇಲೆ ಅವಲಂಬಿತವಾಗಬೇಕಾಗಿದೆ.

'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿ ಅಸ್ಪೃಶ್ಯತೆ ಮತ್ತು ಜಾತಿ ಶೋಷಣೆಯ ವಿಭಿನ್ನ ಧೋರಣೆಗಳನ್ನು ಮುಂದಿಡುತ್ತದೆ. ದಲಿತರ ಹಿರಿಯ ತಲೆಮಾರು ಹೊಟೇಲಿನ ಹೊರಗೆ ಪ್ರತ್ಯೇಕ ಗ್ಲಾಸಿನಲ್ಲಿ ಟೀ ಕುಡಿಯುವುದು. ಆದರೆ ನಂತರದ ತಲೆಮಾರು ಈ ಪ್ರವೃತ್ತಿಯನ್ನು ವಿರೋಧಿಸುತ್ತದೆ. ಬಸುರಾಜು ಹೊಟೇಲ್‌ಗೆ ಹೋಗಿ ಮೇಲ್ಜಾತಿಯವರ ಸರಿಸಮಕ್ಕೆ ಕುಳಿತುಕೊಂಡು ತನಗೂ ಟೀ ಕೇಳುವಾಗ ಅಲ್ಲಿದ್ದವರು ಬೆಪ್ಪಾಗುತ್ತಾರೆ. ಸಂಕ್ರಪ್ಪನ ಹೆಂಡತಿ "ಅದ್ಯಾನುಡಾ ಬಸುರಾಜು ಊರುನೂ ಹೊಲಗೇರಿನೂ ಒಂದು ಮಾಡಕ ಬಂದಿದ್ದೀಯಾ? ಇದು ಬರಬಾರದ ಕಾಲ" ಎಂದು ರೇಗುತ್ತಾಳೆ. ಆದರೆ ಬಸುರಾಜು "ಅವ್ವೆ ಇದ್ಯಾವ ಸೀಮೆ ರೂಲ್ಸಯ್ಯ ನಮ್ಮ ಕೇರಿಗೊಂದು ರೂಲ್ಸು ನಿಮ್ಕೇರಿಗೊಂದು ರೂಲ್ಸ್? ನಮ್ಕೇರಿ ಗಾಳಿ ನಿಮ್ಕೇರಿ ವಳಕ ಬಂದ್ರ ನೀವೂ ಬ್ಯಾಡ ಅನ್ನಂಗಿಲ್ಲ, ಆ ಹೊಳೆ ನೀರುನ ಮೇಲೆ ನಿಮ್ಕೇರಿ ಹೆಸರೂ ಬರೆದಿಲ್ಲ, ನಮ್ಕೇರಿ ಹೆಸರೂ ಬರೆದಿಲ್ಲ. ಹೋಲಾರನೂ ಬಾಯಾರ್ನ ಆಯತದಪ್ಪ, ನೀರು ಕುಡುದರ ತಣ್ಣಗಾಯ್ತದ. ಲಿಂಗಾಯತ್ತನುಗೂ ಅಷ್ಟಿಯ, ಬ್ರಾಮಣ್ಣೂ ಅಷ್ಟೀಯಾ ಅವರಪ್ಪನೂ ಅಷ್ಟಿಯಾ. ಅವನವ್ವ ಜಾತಿ ಮಾಡ್ದವಳ ಬಾಯ್ಗ ನನ್ನೆಕ್ಡವ ಸಿಕ್ಕಾಕ್ರುಕತನ, ಸುಮ್ಮನ ಟೀ ಕೊಡಿ. ಅಮ್ಮಮಾ ಅಂದ್ರ ನಿಮ್ಮ ಟೀಗೆ ಎಂಟಾಣಿ. ಅದರ ಮ್ಯಾಲು ಎಂಟಾಣೆ ಕೊಡ್ತೀನಿಕನ ಮೊದ್ಲು ಟೀ ಕೊಡಿ ಮತ್ತೆ"[೧೧] ಎನ್ನುತ್ತಾನೆ. ಇಲ್ಲಿ ಜಾತಿ ಶೋಷಣೆ ಮತ್ತು ಅಸ್ಪೃಶ್ಯ ಆಚರಣೆಯ ವಿರುದ್ಧ ಶೋಷಿತ ವರ್ಗದ ಜಾಗೃತಿ ಮತ್ತು ಪ್ರತಿಭಟನೆಯನ್ನು ನೋಡಬಹುದು.

ಹಾಗೆಯೇ ಜಾತಿ ಶೋಷಣೆಯನ್ನು ವಿರೋಧಿಸುವ ಬಸುರಾಜು ದಲಿತ ಹೆಣ್ಣಿನ ಮೇಲೆ ನಡೆಯುತ್ತಿರುವ ಲೈಂಗಿಕ ದೌರ್ಜನ್ಯವನ್ನು ಹಿಮ್ಮೆಟ್ಟಿಸಲು ಮುಂದಾಗುತ್ತಾನೆ. ಅದರ ತೀವ್ರತೆ ಎಷ್ಟರಮಟ್ಟಿಗೆ ಇತ್ತೆಂದರೆ ಪಟೇಲರ ಮಗ ಲಿಂಗಪ್ಪನ ಎದುರೇ ಅವನ ಹೆಂಡತಿಯ ಮೇಲೆ ಅತ್ಯಾಚಾರಗೈಯಲೂ ಮುಂದಾಗುತ್ತಾನೆ. ಇದು ಅನೀತಿಯ ಪ್ರಶ್ನೆಯಾಗಿ ಕಂಡರೂ ಈ

ಮೇಲ್ವರ್ಗದವರಿಗೆ ಎಚ್ಚರಿಕೆಯ ಪ್ರಶ್ನೆಯಾಗಿದೆ. ಇದರಿಂದ ದಲಿತ ಸಮಸ್ಯೆಗಳಿಗೆ ಪರಿಹಾರವನ್ನು ಕಾದಂಬರಿ ಸೂಚಿಸುವುದಿಲ್ಲ. ದಲಿತರ ಆರ್ಥಿಕ ಅಸಮಾನತೆಯೊಂದನ್ನು ಬಿಟ್ಟು ಅದರಿಂದ ಉಂಟಾದ ಪರಿಣಾಮಗಳನ್ನು ಸೂಚಿಸುತ್ತದೆ. ಇದರಿಂದ ವರ್ಗಪ್ರಜ್ಞೆಯನ್ನು ಆರೋಪಿಸದೆ, ಆಳುವ ವರ್ಗದ ಹಿತಾಸಕ್ತಿಗಳನ್ನು ನಯವಾಗಿ ಮುಚ್ಚಿಡುವ ಸಂಗಾತಿಯಾಗಿ ಕಾಣಿಸುತ್ತದೆ. ಬಡವ, ಹಸಿವು, ಅಪಮಾನಗಳು ಆಳುವ ವರ್ಗದ ಶೋಷಣೆಯ ಫಲಿತಗಳಾಗಿವೆ. ಆದ್ದರಿಂದ ಕಾದಂಬರಿಯು ಸಮಾಜದಲ್ಲಿನ ದುಡಿಯುವ ಜನರ ವರ್ಗಪ್ರಜ್ಞೆಯನ್ನು ಉತ್ಪಾದನಾ ಸಂಬಂಧವಾಗಿ ಗ್ರಹಿಸಲು ವಿಫಲವಾಗಿದೆ.

ಅರವಿಂದ ಮಾಲಗತ್ತಿಯವರ 'ಕಾರ್ಯ' ಕಾದಂಬರಿಯಲ್ಲಿ ಅಸ್ಪೃಶ್ಯತೆ ಆಚರಣೆಯನ್ನು ಗುರುತಿಸಿದ್ದಾರೆ. ಶರಾಬು ಅಂಗಡಿಯಲ್ಲಿ ದಲಿತರಿಗೆ ಪ್ರತ್ಯೇಕವಾಗಿ ಗೂಡಿನಲ್ಲಿ ತೆಂಗಿನ ಚಿಪ್ಪು ಇಟ್ಟಿರುತ್ತಾರೆ. ಆ ಚಿಪ್ಪಿನ ತೂತಿಗೆ ಬೆರಳು ಹಿಡಿದು ಅಂಗಡಿ ಮಾಲೀಕನನ್ನು "ಎಪ್ಪಾ ತಂದಿ ಇನ್ನೊಂದು ಡ್ರಾಮ ಹಾಕರ್ರಿ"[೨೨] ಎಂದು ಅಸಹಾಯಕತೆಯಿಂದ ಬೇಡಿಕೊಳ್ಳುವ ದಲಿತ ಸಮುದಾಯವನ್ನು ಕಾಣಬಹುದು. ಹಾಗೆಯೇ ದಲಿತರ ಘಟೇಗಾರ ವರಗ ದಶರಥ ತನ್ನ ಸೊಟ್ಟಬಾಯಿಯನ್ನು ಮರೆಮಾಡಲು ಕಲ್ಲಿ ಮೀಸೆ ಬಿಟ್ಟಿರುತ್ತಾನೆ. ಇದು ಊರಗೌಡನಿಗೆ ಕೆಣಕಿದಂತೆ ಕಾಣುತ್ತದೆ. ಇದು ಅಧಿಕಾರ, ದರ್ಪ, ಸಂಕೇತವಾಗಿ ಆಳುವ ವರ್ಗಕ್ಕೆ ಕಾಣಿಸುತ್ತದೆ.

ಆದ್ದರಿಂದ ಮೀಸೆಯನ್ನು ಬೋಳಿಸುವಂತೆ ನಾಯಿಂದರ ಮಲ್ಲಪ್ಪನಿಗೆ ಆಜ್ಞಾಪಿಸುತ್ತಾನೆ. ಆದರೆ ಮಲ್ಲಪ್ಪ ಗೌಡನ ಮನವಿಯನ್ನು ನಿರಾಕರಿಸುತ್ತಾನೆ. ಹೀಗೆ ಕಡೆಗೆ ಆಳುವ ವರ್ಗದ ಆಜ್ಞೆಯನ್ನು ಸಾಮಾನ್ಯ ಜನತೆ ವಿರೋಧಿಸುವುದನ್ನು ಹೇಳುತ್ತಿದೆ. ಜೊತೆಗೆ ಮೇಲ್ವರ್ಗದ ಬುಟಾಳಯ್ಯ ಹರಿಜನರ ಭಿಕ್ಷೆಯಿಂದಲೇ ಬದುಕುವನು ಎಂದು ಕಥೆಯ ನಿರೂಪಣೆ ನೋಡಿದರೆ ಕಥನ ಸಾಮಾನ್ಯ ಜನರು ಸಹ ಹಂಚಿ ತಿನ್ನುವ ಅಥವಾ ಮಾನವೀಯ ಮೌಲ್ಯಗಳಿಂದ ಭಿಕ್ಷೆ ನೀಡಿ ಮಾನವೀಯ ಸಂಬಂಧಗಳನ್ನು ತೋರಿಸುವ ವಾಸ್ತವ ಚಿತ್ರಣ ಇಲ್ಲಿದೆ. ಆದರೆ ಮೇಲ್ವರ್ಗವು ಇದಕ್ಕಿಂತ ಭಿನ್ನವಾಗಿ ನೋಡುವುದನ್ನು ಗಮನಿಸಬಹುದು. ಜಾತಿಯ ಶ್ರೇಣೀಕರಣ ವನ್ನು ನಿರಾಕರಿಸುವ ವ್ಯಕ್ತಿಯಾಗಿ ಕಂಡರೂ ಅವನ ಭಾವನೆಯೊಳಗೆ ಪ್ರತಿಗಾಮಿಯ ಗುಣ ಕಾಣಿಸುತ್ತದೆ. ಉದಾಹರಣೆಗೆ ಚಂದ್ರವ್ವ ಶಾಂತಗೌಡರೊಂದಿಗೆ ಸಂಬಂಧ ಬೆಳೆಸಿಕೊಂಡಿರುತ್ತಾಳೆ. ಇದಕ್ಕಾಗಿ ರುದ್ರಗೌಡರು ಇಬ್ಬರಿಗೂ ದಂಡ ವಿಧಿಸುತ್ತಾರೆ. ಆದರೆ ಮಚಗಾರ ಮಲ್ಲಪ್ಪ ರುದ್ರಗೌಡರ ಪತ್ನಿ ಪದ್ಮಾವತಿಯೊಂದಿಗೆ ಸಂಬಂಧ ಇರುವುದನ್ನು ತಿಳಿದಾಗ ಅಮ್ಮಣ್ಣ ಕುಲದೈವದವರ ಮುಂದೆ ಇಬ್ಬರನ್ನೂ ಕರೆಸಿ ದಂಡ ಕಟ್ಟಿಸುವ ಪ್ರಸ್ತಾಪ ಮುಂದಿಡುತ್ತಾರೆ. ಇಲ್ಲಿ ಕಥನವು ಮೇಲು-ಕೀಳು ಎಂಬ ವರ್ಗಭೇದವಿಲ್ಲದೆ ಎಲ್ಲರಿಗೂ ಸಮಾನವಾದ ನ್ಯಾಯ ತೀರ್ಪು ನೀಡಲು ಪ್ರಯತ್ನಿಸುತ್ತದೆ. ಆದರೆ ಈ ನಿಲುವುನ್ನು ಆಳುವ ವರ್ಗ ನಿರಾಕರಿಸುತ್ತದೆ. ಗೌಡರ ಆಳು ಕೆಂಚಪ್ಪನನ್ನು ಕಳುಹಿಸಿ ಗೌಡನನ್ನು ಕರೆತರಲು ಕಳಿಸುತ್ತಾರೆ. ಈ ಸಂದರ್ಭದಲ್ಲಿ ಕೆಂಚಪ್ಪ "ಎಪ್ಪಾ ತಂದಿ... ದೇವರಂಥ ಮನಸೇರ ನೀವು ನಿಮ್ಮ ಮನಿತನದ ಮ್ಯಾಲಿ

ಇಲ್ಲದೊಂದ ತಪ್ಪು ಕಳಸ್ಯಾರಂತ ಬಂದಿನಿ ಇಲ್ಲ ನಾ ಅದಕೆ ಬಂದಿಲ್ಲ. ನಿಮ್ಮ ಮನಿ ಆಳಾಗಿ ಬಂದಿನಿ ಎನ್ನುವಾಗಲೇ ಎರಡು ಒದೆತ ತಿಂದಿದ್ದ".[೧೩] ಇಲ್ಲಿ ಆಳುಗಳ ಮೇಲೆ ಆಳುವ ವರ್ಗದ ದೌರ್ಜನ್ಯದ ತೀವ್ರತೆ ಜೊತೆಗೆ ತನ್ನ ವರ್ಗವನ್ನು ನ್ಯಾಯಕಟ್ಟೆಗೆ ಕರೆಸುತ್ತಿರುವ ವ್ಯವಸ್ಥೆಯ ವಿರುದ್ಧ ದ್ವೇಷ, ತನ್ನ ಮನೆಯ ಆಳುಗಳ ಮೇಲೆ ತೀರಿಸಿಕೊಳ್ಳುವ ವ್ಯವಸ್ಥೆಯನ್ನು ಇಲ್ಲಿ ಚಿತ್ರಿಸಿದೆ.

ಹೀಗೆ ಬಂಗಾರೆವ್ವನ ಶವಶಂಸ್ಕಾರದ ವಸ್ತು ಇಡೀ ಊರಿನ ಸಂಬಂಧಗಳನ್ನು ಎಳೆ ಎಳೆಯಾಗಿ ಬಿಚ್ಚಿಡುವ ಕಥನ ಮಾದರಿಯು ಕಾಣಬಹುದು. ಆದರೆ ದುಡಿಯುವ ವರ್ಗವು ಆಳುವ ವರ್ಗದ ಮೇಲೆ ಅವಲಂಬಿತವಾಗಿದ್ದರು. ನ್ಯಾಯ ವ್ಯವಸ್ಥೆಯಲ್ಲಿ ಎಲ್ಲರಿಗೂ ಸಮಾನವಾದ ನ್ಯಾಯ ಸಿಗಬೇಕು ಎನ್ನುವ ಒತ್ತಾಯವನ್ನು ಕಾದಂಬರಿ ಮಾಡುತ್ತಿದೆ. ಹೀಗೆಯೇ ಕೆಳಜಾತಿ-ಮೇಲುವರ್ಗದ ಸಂಬಂಧಗಳು ಉತ್ಪಾದನಾ ಸಂಬಂಧಕ್ಕೆ ಮಾತ್ರ ಸೀಮಿತವಾಗದೆ, ವೈದಿಕ ಸಂಬಂಧಕವಾಗಿ ಮುಂದುವರಿಯುವುದನ್ನು ಕಥನ ಜಾತಿ ಅಸಮಾನತೆಯ ಶ್ರೇಷ್ಠ ಮೌಲ್ಯ ಎಂಬ ರೀತಿಯಲ್ಲಿ ನಿರೂಪಿಸಿರುವುದನ್ನು ಕಾಣುತ್ತೇವೆ. ಅದೇನೇ ಆದರೂ 'ಕಾರ್ಯ'ದಲ್ಲಿ ದುಡಿಯುವ ವರ್ಗವು ತನ್ನ ಸ್ವತಂತ್ರ ಸ್ವಾವಲಂಬಿ ಬದುಕಿಗಾಗಿ ಕಂಡುಕೊಳ್ಳುವ ದಾರಿಗಳನ್ನು ಕಾದಂಬರಿಯು ಚರ್ಚಿಸದೆ ಇರುವುದನ್ನು ಇಲ್ಲಿ ಗುರುತಿಸಬಹುದು.

'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಮಾದೇವ ಕುರುಂದವಾಡದ ರಾಜಕುಮಾರನಾಗಿ ಹುಟ್ಟಿ, ಅರಮನೆಯ ಆಂತರಿಕ ವೈರುಧ್ಯದ ಕಲಹದಿಂದ ಹೊಲಗೇರಿಯಲ್ಲಿ ಬೆಳೆದು ದೊಡ್ಡವನಾಗುತ್ತಾನೆ. ಹೊಲಗೇರಿಯಲ್ಲಿ ಶಿಕ್ಷಣ ಕಲಿತು, ಉದ್ಯೋಗವನ್ನು ಪಡೆದುಕೊಂಡು ಕೆಳವರ್ಗ ರಾಜಕೀಯ ಚಿಂತನೆಯನ್ನು ಪ್ರತಿಪಾದಿಸುತ್ತಾನೆ. ಆದರೆ ತನ್ನ ಹುಟ್ಟಿನ ಬಗೆಗೆ ತಿಳಿದಾಗ, ಮಾದೇವ ಕೆಳವರ್ಗದ ಸಂಸ್ಕೃತಿಯನ್ನು ನಿರಾಕರಿಸಿ ಮೇಲ್ವರ್ಗದ ಸಂಸ್ಕೃತಿಯತ್ತ ಆಕರ್ಷಿತನಾಗುತ್ತಾನೆ. ಈ ಆಕರ್ಷಣೆಯು ಬಾಹ್ಯ ಆಕರ್ಷಣೆಯಾಗಿದ್ದು ಇದರಲ್ಲಿ ಒಂದು ಸೈದ್ಧಾಂತಿಕ ನೆಲೆಗಟ್ಟು ಕಂಡುಬರುವುದಿಲ್ಲ. ಅವನು "ನಾನು ಅನುಭವಿಸಿದ ನೋವು ನೆನಪು, ಹತಾಶೆ, ದುಃಖ-ದುಮ್ಮಾನಗಳೆಲ್ಲ ಈ ಹೊಲಗೇರಿಯ ಜೊತೆಗೆ ಸುಟ್ಟು ಹೋಗಲಿ. ಮಾಣಿಕ್ಯವೆ ಅರಮನೆಯಲ್ಲಿರಬೇಕಾದ ನೀನು ಈ ತಿಪ್ಪೆಯಲ್ಲೇಕೆ ಬಿದ್ದಿರುವೆ"[೧೪] ಎಂದು ತನಗೆ ತಾನು ಪ್ರಶ್ನೆ ಮಾಡಿಕೊಳ್ಳುವುದರ ಮೂಲಕ ಎರಡು ವರ್ಗಗಳ ವಿಭಿನ್ನ ಸಂಸ್ಕೃತಿಯನ್ನು ಮೌಲ್ಯ ಮಾಡುತ್ತಿದ್ದಾನೆ. ಅದರಲ್ಲೂ ಕಥನ ಮೇಲ್ವರ್ಗವೇ ಶ್ರೇಷ್ಠವಾದದು, ಅವರ ಸಂಸ್ಕೃತಿಯ ಉತ್ತಮವಾದುದು ಎನ್ನುವ ಮನೋಭಾವನೆಯನ್ನು ಹುಟ್ಟು ಹಾಕುತ್ತದೆ. ಇದರ ಜೊತೆಗೆ ಜಾನುಬಾ ಹೀರಾಬಾಯಿಯರ ಪ್ರೀತಿ, ವಾತ್ಸಲ್ಯ ಮತ್ತು ಹೊಲಗೇರಿ ಗೆಳೆಯರ ವಿಶ್ವಾಸ ತ್ಯಜಿಸಲಾರದೇ ಅದು ಈ ಮಣ್ಣಿನ ದುಡಿಮೆ ಸಂಸ್ಕೃತಿಯ ರೀತಿಯೆಂದು ಕಥನ ನಿರೂಪಿಸುತ್ತಿದೆ. ಇಲ್ಲಿ ಎರಡು ಮುಖ್ಯವಾದ ಸಿದ್ಧಾಂತಗಳನ್ನು ಕಥನದಲ್ಲಿ ಹೇಳುತ್ತಾನೆ. ಶೋಷಿತ ವರ್ಗದ ಬಿಡುಗಡೆಗೆ ಹೋರಾಟ ಮಾಡಿ ಅವರ ಬಗೆಗೆ ಚಿಂತನೆ ರೂಪಿಸಿದ ಅಂಬೇಡ್ಕರ್ ವಿಚಾರಧಾರೆಗಳು

ಬಾಲ್ಯ ಮತ್ತು ಕೊನೆಯ ಸಂದರ್ಭದಲ್ಲಿ ಮಾದೇವನಿಗೆ ಕಾಡಿದರೆ ಶಿವಾಜಿ ತನ್ನ ಜಾತಿಯ ಸಂಕೇತವಾಗಿ ಗುರುತಿಸುವ ಆಳುವ ವರ್ಗದ ಚಿಂತನೆ ಇದೆ ಎಂಬ ವಾದವನ್ನು ಕಾದಂಬರಿ ಹುಟ್ಟು ಹಾಕುತ್ತದೆ.

ಹೀಗೆ ಎರಡು ಜಾತಿಗಳ ನಡುವಿನ ಜಾತಿ ಶ್ರೇಣೀಕರಣ ಮತ್ತು ಜಾತಿ ಶೋಷಣೆ ಸಮಾಜದ ಮೇಲೆ ಪರಿಣಾಮ ಬೀರುತ್ತಿರುವುದು ಆರ್ಥಿಕ ಅಸಮಾನತೆಯ ಕಾರಣಕ್ಕಾಗಿಯೇ ಎನ್ನುವ ಆಲೋಚನೆಯನ್ನು ಕಾದಂಬರಿ ಮುಂದಿಡುತ್ತದೆ. ಹಸಿವು ಬಡತನದ ಪ್ರಶ್ನೆಗಳು ಅಸಮಾನತೆಯ ಸಮಾಜದ ಸೃಷ್ಟಿಯಾಗಿದೆ. ಅದರ ಪರಿಣಾಮವಾಗಿ ಆಳುವ ವರ್ಗವು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು, ಜಾತಿ ಸಮಾಜದ ಅನೀತಿಗಳನ್ನು ಮುಂದುವರಿಸುವ ಪ್ರಕ್ರಿಯೆಗೆ ಒಳಗಾದರೆ, ಕೆಳವರ್ಗದ ಜನರು ನೀತಿಗಳನ್ನು ಬದಲಾಯಿಸಿ, ಆರ್ಥಿಕ ಅಸಮಾನತೆಗೆ, ಜಾತಿ ಶೋಷಣೆ ಇಲ್ಲದ ಸಂಘರ್ಷಕ್ಕೆ ಮುಂದಾಗುವಂತಹ ರಾಜಕೀಯ ಕರೆಯನ್ನು ಸಂಘರ್ಷದ ಮೂಲಕ ಸೂಚಿಸುತ್ತದೆ. ಬೆಂಡಿಗೇರಿ ಪ್ರಕರಣವು ಜಾತಿ ಶೋಷಣೆಯ ವಿಷದ ಬೇರುಗಳಿಗೆ ಸಾಕ್ಷಿಯಾದರೂ ಮಾದೇವ ಪುನಃ ತನ್ನ ವರ್ಗದ ಹಿತಾಸಕ್ತಿಗಾಗಿ ದುಡಿಯುವ ಪ್ರಯತ್ನವನ್ನು ಎತ್ತಿಹಿಡಿಯುತ್ತದೆ. ಹೀಗೆ ಸಾಹಿತ್ಯ ಕೃತಿಯು ದುಡಿಯುವ ವರ್ಗದ ಸ್ವಾವಲಂಬಿ ಬದುಕಿಗಾಗಿ ಆಳುವ ವರ್ಗದ ವಿರುದ್ಧ ಪ್ರತಿಭಟಿಸುತ್ತದೆ. ಈ ಪ್ರಕ್ರಿಯೆ ಇಂಥ ಅಸಮಾನತೆಯ ಸಮಾಜದಲ್ಲಿ ನಡೆಯುತ್ತಲೇ ಇರುತ್ತದೆ. ಅದರ ವಿರುದ್ಧ ಜನರ ಚಳುವಳಿಗಳು ನಿರಂತರವಾಗಿ ಬೆಳೆಯುತ್ತಿರುತ್ತವೆ. ಅದೇ ದುಡಿಯುವ ಜನರ ಬದುಕಿನ ಸಾಧ್ಯತೆಗಳಾಗಿ ಗುರುತಿಸುವ ಕಥನ ಮಾದರಿಯನ್ನು ಇಲ್ಲಿ ಕಾಣಬಹುದು.

ನವೋದಯದಿಂದ ದಲಿತ-ಬಂಡಾಯದವರೆಗೆ ಕಾದಂಬರಿ ಸಾಹಿತ್ಯವು ದುಡಿಯುವ ವರ್ಗದ ಮತ್ತು ಆಳುವ ವರ್ಗದ ನಡುವಿನ ಸಂಬಂಧಗಳು ಹಾಗೂ ಅವರ ನಡುವೆ ನಡೆಯುವ ಸಂಘರ್ಷದ ಸಂಬಂಧಗಳನ್ನು ಹಾಗೂ ಶೋಷಣೆಯ ನಾನಾ ಮುಖಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಅದರಲ್ಲಿ ದುಡಿಯುವ ವರ್ಗವನ್ನು ಸ್ವಾವಲಂಬಿ ಬದುಕಿನ ಹಿನ್ನೆಲೆಯಲ್ಲಿ ಚಿತ್ರಿಸಿರುವ ಕೆಲವು ಕಾದಂಬರಿಗಳನ್ನು ಬಿಟ್ಟರೆ ಉಳಿದಂತೆ ಅವರನ್ನು ಪರಾವಲಂಬಿ ಬದುಕಿನ ಹಿನ್ನೆಲೆಯಲ್ಲಿ ಚಿತ್ರಿಸಿರುವುದೇ ಹೆಚ್ಚಾಗಿದೆ. ಪ್ರತಿಯೊಂದು ಕಾದಂಬರಿಯಲ್ಲಿ ಆಳುವ ವರ್ಗವಾದ ಭೂಮಾಲೀಕ ವರ್ಗ ಮತ್ತು ಬಂಡವಾಳಶಾಹಿ ವರ್ಗವು ಸಂಪತ್ತಿನ ಒಡೆಯರಾಗಿದ್ದಾರೆ. ಆದರೆ ದುಡಿಯುವ ಜನರು ಶೋಷಕರಾಗಿ, ಆಳುಗಳಾಗಿ ತನ್ನದಲ್ಲದ ಭೂಮಿಯಲ್ಲಿ ದುಡಿಯುವಂತಹ ಸಾಮಾಜಿಕ ಸ್ಥಿತಿಯನ್ನು ಕಾದಂಬರಿಗಳು ಚಿತ್ರಿಸಿವೆ. 'ಚೋಮನ ದುಡಿ', 'ಚಿರಸ್ಮರಣೆ', 'ಗ್ರಾಮಾಯಣ' ಕಾದಂಬರಿಗಳು ಭೂಮಿಯ ವಸ್ತುವಿಷಯದ ಮೇಲೆ ನಿರೂಪಿತ ವಾಗಿವೆ. ಆದರೆ ಈ ಮೂರು ಕೃತಿಗಳಲ್ಲಿ ಭಿನ್ನಭಿನ್ನವಾದ ವರ್ಗಸಂಬಂಧಗಳನ್ನು ಚಿತ್ರಿಸಿವೆ. 'ಚೋಮನ ದುಡಿ'ಯಲ್ಲಿ ಚೋಮನು ಶ್ರಮಜೀವಿ ಸಂಕಪ್ಪಯ್ಯನೆಂಬ ಭೂಮಾಲೀಕನ ಅಧೀನವಾಗಿ ದುಡಿಯುವಾತ. ಇಲ್ಲಿ ಚೋಮನಿಗೆ ಯಾವುದೇ ಹಕ್ಕನ್ನು ಕೊಡದೆ ವಂಚಿಸಿರುವ

ಊಳಿಗಮಾನ್ಯಶಾಹಿ ವ್ಯವಸ್ಥೆಯಲ್ಲಿ ಚೋಮನಿಗೆ 'ಗೇಣಿಗಾಗಿ' ಭೂಮಿ ಕೇಳಿ ಉಳುಮೆ ಮಾಡುವ ಆಸೆ. ಇದು ಚೋಮನ ಮೂಲಕ ಕಥನ ಹೇಳಿಸುತ್ತದೆ. ಅದೇ ಸಂದರ್ಭದಲ್ಲಿ ಭೂಮಿಯನ್ನು ಕೇಳುವ ಧೈರ್ಯ ಅವನಲ್ಲಿ ಮೂಡಿದೆ ಎನ್ನುವ ಭಾವನೆಗಳಿದೆ. ಆದರೆ ಅವನ ವರ್ತನೆ, ಸ್ವಭಾವಗಳು ಆಳುವ ವರ್ಗದ ಶೋಷಣೆಯನ್ನು ಒಪ್ಪಿಕೊಂಡು ಹೋಗುವ ಸ್ವರೂಪದಲ್ಲಿ ಇರುವುದರಿಂದ ಚೋಮನಿಗೆ ಭೂಮಿ ಉಳುಮೆ ಮಾಡುವ ಕನಸು ಅವನದಲ್ಲ ಅನಿಸುತ್ತದೆ. ಅಂದರೆ ಭೂಮಿಯಿಂದ ವಂಚಿತವಾದ ಸಮುದಾಯ ಭೂಮಿಯ ಹಕ್ಕನ್ನು ಹಂಬಲಿಸಬೇಕೇ ಹೊರತು ಸುಧಾರಣೆಯ ಮನೋಭಾವದಲ್ಲಿ ಗೇಣಿಗಾಗಿ ಭೂಮಿಯನ್ನು ಕೇಳುವ ಚೋಮ ದುಡಿಯುವ ವರ್ಗಪ್ರಜ್ಞೆಯನ್ನು ಆರೋಪಿಸಿದ್ದಾನೆ. ಈ ಮೂಲಕ ಕಥನ ಆಳುವ ವರ್ಗದ ಮೇಲೆ ಅವಲಂಬಿತವಾಗಿರುವ ದುಡಿಯುವ ವರ್ಗದ ಚಿತ್ರಣವನ್ನು ತರುತ್ತದೆ.

'ಚಿರಸ್ಮರಣೆ'ಯಲ್ಲಿ ಕೂಡ ಸಣ್ಣ ರೈತರ ಭೂಮಿಯನ್ನು ದೌರ್ಜನ್ಯದಿಂದ ವಶಪಡಿಸಿಕೊಳ್ಳುವ ಭೂಮಾಲೀಕ ವ್ಯವಸ್ಥೆಯ ವಿರುದ್ಧ ವರ್ಗಜಾಗೃತಿಯನ್ನು ದುಡಿಯುವ ವರ್ಗ ಹೊಂದಿದೆ. "ಉಳುವವನೇ ಹೊಲದೊಡೆಯ" ಎಂಬ ಘೋಷಣೆ ಮೂಲಕ ಆಳುವ ವರ್ಗವಾದ ಭೂಮಾಲೀಕ ವ್ಯವಸ್ಥೆ ಮತ್ತು ಬಂಡವಾಳಶಾಹಿ ವ್ಯವಸ್ಥೆಯ ಶೋಷಣೆಯನ್ನು ವಿರೋಧಿಸುತ್ತದೆ. ದುಡಿಯುವ ಜನರಿಗೆ ಭೂಮಿಯ ಹಕ್ಕು ಸಿಗಬೇಕು, ತನ್ನ ವರ್ಗದ ಶ್ರಮದಿಂದ ಆಳುವ ವರ್ಗದ ವ್ಯವಸ್ಥೆ ನಿಂತಿದೆ ಈ ವರ್ಗ ಅಸಮಾನತೆಯನ್ನು ಸ್ವಾವಲಂಬಿ ಬದುಕಿನ ನೆಲೆಯಲ್ಲಿ ದುಡಿಯುವ ವರ್ಗದ ಪ್ರಜ್ಞೆಯನ್ನು ಕಾದಂಬರಿಯಲ್ಲಿ ಕಾಣಬಹುದು. ಆಳುವವರು ಮತ್ತು ಆಳಿಸಿಕೊಳ್ಳುವವರ ನಡುವೆ ವರ್ಗ ಸಂಘರ್ಷದ ಪರಿಣಾಮವಾಗಿ ದುಡಿಯುವ ಜನರಿಗೆ ಭೂಮಿಯ ಹಕ್ಕು ಮತ್ತು ಸ್ವಾತಂತ್ರ್ಯದ ಬಗೆಗೆ ಅರಿವನ್ನು ಕಾದಂಬರಿಯು ಸ್ಪಷ್ಟವಾಗಿ ಚಿತ್ರಿಸಿದೆ. ಈ ಎರಡು ಕಾದಂಬರಿಗಳು ದುಡಿಯುವ ಜನರು ಭೂಮಿಯ ಹಕ್ಕನ್ನು ಹೊಂದಬಹುದು ಎಂಬ ಆಳವಾದ ನಂಬಿಕೆಯನ್ನು ಬಿತ್ತರಿಸುತ್ತವೆ. ತದನಂತರ ರಚನೆಯಾದ 'ಗ್ರಾಮಾಯಣ'ದಲ್ಲಿ ದುಡಿಯುವ ಜನರ ಭೂಮಿಯ ಪ್ರಶ್ನೆಯನ್ನು ಚರ್ಚಿಸುವುದೇ ಇಲ್ಲ. ಭೂಮಿಯ ಒಡೆತನ ಗೌಡ, ಕುಲಕರ್ಣಿ ಪಾಟೀಲ ಮುಂತಾದವರ ನಡುವೆ ಪಲ್ಲಟವಾಗುವ ಮನೋಭಾವದಲ್ಲಿ ಚಿತ್ರಿಸಲಾಗಿದೆ. ಆದ್ದರಿಂದ ಈ ಕಾದಂಬರಿಯು ದುಡಿಯುವ ವರ್ಗದ ವರ್ಗಖಚಿತತೆಯನ್ನು ನಿರೂಪಿಸುವಲ್ಲಿ ವಿಫಲತೆಯನ್ನು ಅನುಭವಿಸಿದೆ. ಬಡತನ, ಅಜ್ಞಾನ, ಮೂಢನಂಬಿಕೆಗಳು ಪ್ರಬಲ ವರ್ಗದ ಶೋಷಣೆಯ ಪರಿಣಾಮದಿಂದ ಉದ್ಭವಿಸಿರುವಂತಹವು. ಈ ತಂತ್ರಗಾರಿಕೆಯನ್ನು ಅರಿತ ಆಳುವ ವರ್ಗವು ಬಡತನ, ಹಸಿವು, ನಿರುದ್ಯೋಗ, ದೌರ್ಜನ್ಯ ಮುಂತಾದ ಶೋಷಣೆಯ ವಿಧಾನವನ್ನು ನಿರಂತರವಾಗಿ ಹರಡುವ ಕೆಲಸ ಮಾಡುತ್ತಿರುತ್ತದೆ. "ಖಾಸಗಿ ಆಸ್ತಿಯನ್ನು ಸಂರಕ್ಷಿಸುವ ಬಂಡವಾಳಶಾಹಿಯಾಗಲಿ ಊಳಿಗಮಾನ್ಯವ್ಯವಸ್ಥೆಯಾಗಲಿ ಮಿಗುತಾಯದ ಉತ್ಪನ್ನವನ್ನು ದುಡಿಯುವ ವರ್ಗದಿಂದ ಅಪಹರಿಸಿ, ಅದನ್ನು ಖಾಸಗೀಕರಣ ಮಾಡುವುದಕ್ಕೆ ಲಗತ್ತಾಗಿ ದುಡಿಯುವ ವರ್ಗದ ಪರಕೀಯ ಪ್ರಜ್ಞೆಯನ್ನು ಪರಿಭಾವಿಸಬೇಕಾಗಿದೆ. ತಾನು ಉತ್ಪತ್ತಿ ಮಾಡಿದ

ವಸ್ತು ತನ್ನ ಶೋಷಣೆಯ ಸಾಧನವಾದಾಗ, ತನ್ನ ಶ್ರಮದ ಮೇಲಣ ವಾರಸುದಾರಿಕೆಯನ್ನು ಶ್ರಮಿಕ ತಾನೇ ಕಳೆದುಕೊಳ್ಳುವ ವಿಪರೀತ ಪರಿಸ್ಥಿತಿ ಉದ್ಭವವಾಗುತ್ತದೆ"[೧೯] ಎನ್ನುವ ಅಂಶವು ಇಲ್ಲಿ ಮುಖ್ಯವಾಗಿ ಕಾಣಿಸುತ್ತದೆ.

ಹೀಗೆ ಶೋಷಣೆಗೆ ಒಳಗಾದ ಜನರಿಗೆ ಶೋಷಣೆಯ ಅರಿವಿಲ್ಲದೆ, ಆಳುವ ವರ್ಗದ ಸಮಸ್ಯೆಗೆ ಎಲ್ಲಾ ಸಮಯವನ್ನು ಒತ್ತುಕೊಡುವ ಶೋಷಿತ ವರ್ಗದ ಸ್ಥಿತಿಯನ್ನು ಕಾಣಬಹುದು. ಹೀಗೆ ಪ್ರಭುತ್ವ ಅಥವಾ ಆಳುವ ವರ್ಗಗಳು ತನ್ನ ಅಸ್ತಿತ್ವಕ್ಕೆ ಧಕ್ಕೆ ಬರುವ ಸಂದರ್ಭ ಬಂದರೆ ಅದು ಸಾಮಾನ್ಯ ಜನರನ್ನು ಆಶ್ರಯಿಸುವುದನ್ನು ಕಥನಸಾಹಿತ್ಯ ನಿರೂಪಿಸಿದೆ. ಇಲ್ಲಿ ಕೂಡ ಇದರ ಪರಿಣಾಮವನ್ನು ದುಡಿಯುವ ವರ್ಗವೇ ಎದುರಿಸಬೇಕಾಗಿದೆ. ಹೀಗೆ ವರ್ಗಶ್ರೇಣೀಕರಣ, ವರ್ಗ ಅಸಮಾನತೆ ಮತ್ತು ವರ್ಗಶೋಷಣೆಯ ಹಿಂದೆ ಭೂಸಂಪತ್ತಿನ ಅಸಮಾನತೆ ಅಡಗಿರುವುದನ್ನು ಕಾಣುತ್ತೇವೆ. ಆದ್ದರಿಂದ ಕನ್ನಡದ ಕೆಲವು ಕಾದಂಬರಿಗಳು ಭೂಸಮಸ್ಯೆಗಳನ್ನು ಕಾದಂಬರಿಯ ವಸ್ತುವಾಗಿ ಗ್ರಹಿಸುವ ಮೂಲಕ ಸಮಾಜದ ವಾಸ್ತವ ಚಿತ್ರಣವನ್ನು ನಿರೂಪಿಸಲು ಪ್ರಯತ್ನಿಸಿವೆ.

ಕಾದಂಬರಿಗಳಲ್ಲಿ ಇನ್ನೊಂದು ಮುಖ್ಯವಾದ ಅಂಶವನ್ನು ಗಮನಿಸಬೇಕಾಗಿರುವುದು ಜಾತಿ ಪ್ರಶ್ನೆಗಳು. ಪ್ರತಿಯೊಂದು ಕಾದಂಬರಿಗಳು ಈ ಜಾತಿ ಸಮಸ್ಯೆಗಳನ್ನು ವಸ್ತುವಾಗಿ ಸ್ವೀಕರಿಸಿದೆ. ಅದರಲ್ಲಿಯೂ ನವೋದಯದಿಂದ ಇಲ್ಲಿಯ ತನಕ ಜಾತಿಯ ವಿವಿಧ ಶೋಷಣೆಯ ವಿಧಾನಗಳನ್ನು ಕಾದಂಬರಿಗಳು ಕಟ್ಟಿಕೊಟ್ಟಿವೆ. ಅದರಲ್ಲಿ ಜಾತಿಯನ್ನು ಸಮರ್ಥಿಸುವ ಮತ್ತು ಅದರ ವಿರುದ್ಧ ಪ್ರತಿಭಟಿಸುವ ಕಾದಂಬರಿಯ ನಿರೂಪಣೆ ಇದೆ. ಅಂದರೆ ಶೂದ್ರರು ಕಲಿಯಬಾರದು, ದಲಿತರು ದೇವಾಲಯ ಪ್ರವೇಶ ಮಾಡಬಾರದು ಎಂಬ ಆಳುವ ವರ್ಗ ತಾರತಮ್ಯ ನೀತಿಗಳನ್ನು ಸಾಹಿತ್ಯ ಕೃತಿಗಳು ಸೂಕ್ಷ್ಮವಾಗಿ ವಿಶ್ಲೇಷಿಸಿವೆ. ಸಹಭೋಜನ ಮತ್ತು ಜಾತಿಗಳ ನಡುವೆ ವಿವಾಹ ಸಂಬಂಧವನ್ನು ದುಡಿಯುವ ವರ್ಗದ ಚಿಂತನೆಗಳು ಸಮರ್ಥಿಸಿದರೆ, ಇವು ಆಗಬಾರದು ಎನ್ನುವ ಆಳುವ ವರ್ಗದ ಪ್ರಜ್ಞೆಯನ್ನು ಕಾದಂಬರಿಗಳಲ್ಲಿ ಕಾಣುತ್ತೇವೆ. ಆದ್ದರಿಂದ ಕೆಳಜಾತಿಗಳು ಮೇಲ್ಜಾತಿಗಳಿಗೆ ಸಮವಲ್ಲ ಎನ್ನುವ ಆಳುವ ವರ್ಗ ಪ್ರಜ್ಞೆಯನ್ನು ಚರ್ಚಿಸುತ್ತಲೇ ಪರ್ಯಾಯ ರಾಜಕೀಯ ಚಿಂತನೆಗಳನ್ನು ಕಾದಂಬರಿಗಳು ಹುಟ್ಟುಹಾಕಿವೆ. ಅದರಲ್ಲಿ ಜಾತಿಶೋಷಣೆಯನ್ನು ವಿರೋಧಿಸುತ್ತವೆ. ಅಂತರ್‌ಜಾತಿ ವಿವಾಹ ಹೆಚ್ಚು ಒತ್ತು ಕೊಟ್ಟಿರುವುದು ಮತ್ತು ಮೇಲು-ಕೀಳು ಎನ್ನದೇ ನಾವೆಲ್ಲ ಒಂದೇ ಎನ್ನುವ ಆಳವಾದ ಚಿಂತನೆ ಕಾದಂಬರಿಯಲ್ಲಿ ಕಾಣಸಿಗುತ್ತದೆ.

ಕಾದಂಬರಿಯು ದುಡಿಯುವ ವರ್ಗದ ವರ್ಗಖಚಿತತೆಯನ್ನು ನಿರೂಪಿಸುವಲ್ಲಿ ವಿಫಲತೆಯನ್ನು ಅನುಭವಿಸಿದೆ. ದುಡಿಯುವ ವರ್ಗದ ಒಡತನ, ಅಜ್ಞಾನ, ಮೂಢನಂಬಿಕೆಗಳು ಪ್ರಬಲವರ್ಗವು ಉತ್ಪಾದನಾ ವಸ್ತುಗಳ ಒಡೆತನವನ್ನು ಹೊಂದುವುದಕ್ಕೆ ಕಾರಣವಾಗಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು. "ಖಾಸಗಿ ಆಸ್ತಿಯನ್ನು ಸಂರಕ್ಷಿಸುವ ಬಂಡವಾಳಶಾಹಿಯಾಗಲಿ ಊಳಿಗಮಾನ್ಯ

ವ್ಯವಸ್ಥೆಯಾಗಲಿ ಮಿಗುತಾಯದ ಉತ್ಪನ್ನವನ್ನು ದುಡಿಯುವ ವರ್ಗದಿಂದ ಅಪಹರಿಸಿ ಅದನ್ನು ಖಾಸಗೀಕರಣ ಮಾಡುವುದಕ್ಕೆ ಲಗತ್ತಾಗಿ ದುಡಿಯುವ ವರ್ಗದ ಪರಕೀಯ ಪ್ರಜ್ಞೆಯನ್ನು ಪರಿಭಾವಿಸಬೇಕಾಗಿದೆ. ತಾನು ಉತ್ಪತ್ತಿ ಮಾಡಿದ ವಸ್ತು ತನ್ನ ಶೋಷಣೆಯ ಸಾಧನವಾದಾಗ ತನ್ನ ಶ್ರಮದ ಮೇಲಣ ವಾರಸುದಾರಿಕೆಯನ್ನು ಶ್ರಮಿಕ ತಾನೇ ಕಳೆದುಕೊಳ್ಳುವ ವಿಪರೀತ ಪರಿಸ್ಥಿತಿ ಉದ್ಭವವಾಗುತ್ತದೆ" ಎಂಬುದನ್ನು ಕಾದಂಬರಿಯಲ್ಲಿ ಗುರುತಿಸಬಹುದು. ಹೀಗೆ ಶೋಷಣೆಗೆ ಒಳಗಾದ ಜನರಿಗೆ ಶೋಷಣೆಯ ಅರಿವಿಲ್ಲದೆ ಆಳುವ ವರ್ಗದ ಸಮಸ್ಯೆಗೆ ಎಲ್ಲಾ ಸಮಯವನ್ನು ಒತ್ತು ಕೊಡುವ ಶೋಷಿತ ವರ್ಗವನ್ನು ಕಾಣುತ್ತೇವೆ. ಇಲ್ಲಿ ಪ್ರಭುತ್ವ ತನಗೆ ಸಮಸ್ಯೆ ಎದುರಾದಾಗ ಸಾಮಾನ್ಯ ಜನರನ್ನು ಆಶ್ರಯಿಸಲು ಬೇಡುತ್ತದೆ. ಈ ಆಂತರಿಕ ಕಲಹದ ಪರಿಣಾಮವನ್ನು ದುಡಿಯುವ ಸಮುದಾಯವೇ ಎದುರಿಸಬೇಕಾಗಿದೆ. ಹೀಗೆ ವರ್ಗ ಅಸಮಾನತೆ ಕಾರಣವಾಗಿರುವ ಭೂಸಂಬಂಧಗಳು ಆಳುವ ವರ್ಗದ ಪ್ರಜ್ಞೆಯ ಭಾಗವಾಗಿ ಗ್ರಹಿಸಿರುವುದನ್ನು ಇಲ್ಲಿ ಗುರುತಿಸ ಬಹುದು. ಹೀಗೆ ಭೂಮಿ ಮತ್ತು ದುಡಿಯುವ ವರ್ಗದ ನಡುವಿನ ಉತ್ಪಾದನಾ ಸಂಬಂಧಗಳಲ್ಲಿ ಕಾಣಬಹುದು.

### ೪.೪. ದುಡಿಯುವ ವರ್ಗದ ಬಿಡುಗಡೆಯ ನೆಲೆಗಳು

ಸಮಾಜವು ಚಲನಶೀಲವಾದುದು. ಅದು ದಿನನಿತ್ಯ ಬದಲಾಗುವ ಪ್ರಕ್ರಿಯೆಯನ್ನು ಹೊಂದಿರುತ್ತದೆ. ಹೊರಗಿನ ಪ್ರಭಾವಗಳಿಂದಲೋ ಅಥವಾ ಒಳಗಿನ ಒತ್ತಡಗಳಿಂದಲೋ ಪ್ರತಿಯೊಂದು ವಸ್ತುಗಳು ಕೂಡ ಬದಲಾಗುತ್ತ ಹೋಗುತ್ತವೆ. ಈ ಬದಲಾಗುವಿಕೆಯು ಚಲನೆಯ ನಿಯಮಗಳಾಗಿರುವುದರಿಂದ ಇದು ಪ್ರತಿಯೊಂದು ವಸ್ತು ಪದಾರ್ಥಗಳಲ್ಲಿ ಮತ್ತು ಆಂತರಿಕ ಶಕ್ತಿ ಕಾರ್ಯ ವಿಧಾನದಲ್ಲಿ ನಡೆಯುತ್ತದೆ. ಇದು ಭೌತಿಕವಾದ ಕ್ರಿಯೆಯೂ ಹೌದು. ಜೊತೆಗೆ ಮಾನವನ ಲೋಕಕ್ಕೂ ಇದನ್ನು ಅನ್ವಯಿಸಬಹುದು. ಅಂದರೆ ಉತ್ಪಾದನಾ ಸಂಬಂಧಗಳು ಬದಲಾಗದೆ ಹೋದರೆ ಸಮಾಜ ಬದಲಾಗದು. ಅಂತಹ ಉತ್ಪಾದನಾ ಸಂಬಂಧಗಳನ್ನು ಬದಲಾಯಿಸುವುದಕ್ಕಾಗಿ ಮನುಷ್ಯರು ನಡೆಸುವ ಹೋರಾಟದಲ್ಲಿ ಮನುಷ್ಯ ಮತ್ತಷ್ಟು ಉತ್ಪಾದನೆ ಸಾಧಿಸುತ್ತಾನೆ. ಈ ನಿಯಮವನ್ನೇ ಮಾರ್ಕ್ಸ್ ಅವರು 'ಗತಿತಾರ್ಕಿಕ ಭೌತಿಕವಾದ'ದಲ್ಲಿ ವಿವರಿಸಿದ್ದಾರೆ.

ಈ ಆಲೋಚನೆಯ ಆಧಾರದ ಮೇಲೆ ದುಡಿಯುವ ವರ್ಗದ ಚಲನಶೀಲತೆ ಬದಲಾಗುವಿಕೆ, ಪರಿವರ್ತನೆಯಾಗುವುದನ್ನು ಗುರುತಿಸಬಹುದು. ದುಡಿಯುವ ವರ್ಗವು ಉತ್ಪಾದನಾ ಸಂಬಂಧಗಳ ಮೂಲಕ ಬದಲಾಗುತ್ತ ಬಂದಿದೆ. ಆಂತರಿಕ ಒತ್ತಡಗಳು ಮತ್ತು ಹೊರಗಿನ ಸಿದ್ಧಾಂತಗಳ ಪ್ರಭಾವಗಳು ಈ ದುಡಿಯುವ ವರ್ಗದ ಭೌತಿಕ ಚಹರೆಗಳನ್ನು ಬದಲಾಯಿಸುತ್ತಿರುತ್ತವೆ ಮತ್ತು ನಿಯಂತ್ರಿಸುತ್ತಿರುತ್ತವೆ. ಈ ರೀತಿಯಾದ ದುಡಿಯುವ ವರ್ಗದ ಪ್ರಕ್ರಿಯೆಗಳನ್ನು ಕನ್ನಡ ಕಾದಂಬರಿಗಳು ಗುರುತಿಸುವ, ವಿಶ್ಲೇಷಿಸುವ ಕೆಲಸವನ್ನು ಮಾಡಿವೆ. ಇಲ್ಲಿ ಸಂಪೂರ್ಣವಾದ ಬದಲಾಗುವಿಕೆಯನ್ನು ಗುರುತಿಸಿವೆ ಎಂದು ಹೇಳಲಾಗದೆ ಇದ್ದರೂ ವಸ್ತುವಿಷಯದಲ್ಲಿ ದುಡಿಯುವ

ವರ್ಗವು ಬದಲಾಗುವ ಹೆಚ್ಚು ಗುರುತುಗಳನ್ನು ಆಯಾ ಕಾಲಘಟ್ಟದ ಸಾಹಿತ್ಯ ಬರಹಗಳು ಮಾಡಿವೆ. ನಾವು ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶಗಳೆಂದರೆ ಕಾದಂಬರಿಗಳು ದುಡಿಯುವ ವರ್ಗವನ್ನು ಅದರ ಬಿಡುಗಡೆಯ ಆಶಯದಲ್ಲಿ ಕಾದಂಬರಿಗಳು ಚಿತ್ರಿಸುತ್ತವೆಯೋ ಅಥವಾ ದುಡಿಯುವ ವರ್ಗವನ್ನು ಇರುವ ಸ್ಥಿತಿಯಲ್ಲಿ ಹಾಗೆಯೇ ಮುಂದುವರಿಸುವ ಹಿತಾಸಕ್ತಿಯ ಹಿನ್ನೆಲೆಯಲ್ಲಿ ಚಿತ್ರಿಸುತ್ತವೆಯೋ ಎಂಬುದು ಈ ಅಧ್ಯಯನದಲ್ಲಿ ವಿವರಿಸಿಕೊಳ್ಳಲಾಗುವುದು.

ಕನ್ನಡ ಕಾದಂಬರಿ ಸಾಹಿತ್ಯವನ್ನು ಗಮನಿಸಿದರೆ ಕಾದಂಬರಿಗಳಲ್ಲಿ ಇಡಿಯಾಗಿ ಒಂದೇ ಮಾದರಿಯ ಆಲೋಚನೆಗಳು, ನಿರೂಪಣೆ ಇರುವುದಿಲ್ಲ. ಕಾದಂಬರಿಯಿಂದ ಕಾದಂಬರಿಗೆ ಬದಲಾಗುತ್ತಿರುತ್ತದೆ. ಹಾಗೆಯೇ ಕಾದಂಬರಿಕಾರರಲ್ಲಿ ಈ ನಿರೂಪಣೆ, ವಸ್ತು ಗ್ರಹಿಕೆ, ಅಭಿವ್ಯಕ್ತಿ ವಿಧಾನವು ಬದಲಾಗುತ್ತದೆ. ಈ ಬದಲಾಗುವಿಕೆ ಭಿನ್ನಭಿನ್ನವಾದ ಮತ್ತು ಕೆಲವು ಸೌಮ್ಯವಾದ ನಿರೂಪಣಾ ಶೈಲಿಯಲ್ಲಿ ಕಾದಂಬರಿಕಾರರ ಆಶಯ ಮಹತ್ವವಾದುದ್ದು. ನವೋದಯ ಸಂದರ್ಭದಲ್ಲಿ ಬರೆಯುವ ಕಾದಂಬರಿಕಾರರು ಗ್ರಹಿಸುವ ದುಡಿಯುವ ವರ್ಗದ ಗ್ರಹಿಕೆಗೂ, ನಂತರ ಕಾಲದ ಅನೇಕ ಕಾದಂಬರಿಕಾರರು ಬರೆಯುತ್ತಿರುವ ಕಾದಂಬರಿಗಳ ಗ್ರಹಿಕೆಗೂ ಒಂದೇ ಬಗೆಯ ನಿಲುವುಗಳು ಕಾಣಿಸುವುದಿಲ್ಲ. ಸಮಾಜ ಬದಲಾಗದಂತೆ ದುಡಿಯುವ ವರ್ಗವು ಕೂಡ ಬದಲಾಗುತ್ತದೆ. ಆ ಬದಲಾಗುವಿಕೆಯಲ್ಲಿ ಭೌತಿಕ ಮತ್ತು ಬೌದ್ಧಿಕ ಪ್ರಭಾವಗಳು ಕಾರಣವಾದರೂ ದುಡಿಯುವ ವರ್ಗದ ವರ್ಗಚಹರೆಯ ಹೊಸ ಶೋಷಣೆಯ ವಿಧಾನದ ಮೂಲಕ ಯಥಾಸ್ಥಿತಿಯಲ್ಲಿ ವರ್ಗಶೋಷಣೆಯನ್ನು ಅನುಭವಿಸುವ ದುಡಿಯುವ ವರ್ಗವನ್ನು ಕಾಣುತ್ತೇವೆ.

ನವೋದಯ ಸಂದರ್ಭದಲ್ಲಿ ಬರೆದಿರುವ ಕುವೆಂಪು, ಕಾರಂತ, ಮಾಸ್ತಿ ಮುಂತಾದ ಕಾದಂಬರಿಕಾರರು, ವಸಾಹತುಶಾಹಿ ವ್ಯವಸ್ಥೆಯ ಸಂದರ್ಭದಲ್ಲಿ ಊಳಿಗಮಾನ್ಯಶಾಹಿವ್ಯವಸ್ಥೆಯ ಸ್ಥಿತಿಗತಿಗೆ ಹೆಚ್ಚಿನ ಒತ್ತು ಕೊಟ್ಟು ಬರೆದಿರುವುದೇ ಹೆಚ್ಚು ಕಾಣಬಹುದು. ಪ್ರಗತಿಶೀಲ ಮತ್ತು ದಲಿತ-ಬಂಡಾಯ ಸಂದರ್ಭದಲ್ಲಿ ಬರೆದಂತಹ ಅನೇಕ ಕಾದಂಬರಿಕಾರರು ದುಡಿಯುವ ವರ್ಗದ ಆರ್ಥಿಕ ಮತ್ತು ರಾಜಕೀಯ ಶೋಷಣೆಯ ಪರವಾದ ಹಿತಾಸಕ್ತಿಯುಳ್ಳ ನಿರೂಪಣೆ ಹೊಂದಿರುವುದನ್ನು ಕಾಣಬಹುದು. ಪ್ರತಿಯೊಂದು ಕಾಲಘಟ್ಟಗಳಲ್ಲಿ ಸಾಹಿತ್ಯ ಕೃತಿಗಳು ಸಮಾಜದ ಸೂಕ್ಷ್ಮವಾದ ವಸ್ತುವಿಷಯಗಳನ್ನು ಗ್ರಹಿಸುತ್ತವೆ ಮತ್ತು ಅಭಿವ್ಯಕ್ತಿಸುತ್ತಿರುತ್ತವೆ. ನಾವು ಇಲ್ಲಿ ಕಾದಂಬರಿಯಲ್ಲಿ ಶೋಷಿತ ವರ್ಗದ ಪರವಾದ ಆಲೋಚನೆಗಳನ್ನು ಶೋಧಿಸುವಾಗ ಕಾದಂಬರಿಗಳು ಇಡಿಯಾಗಿ ತನಗೆ ತಾನೇ ಒಂದು ಶೋಷಿತಪರ ಹಿತಾಸಕ್ತಿಯುಳ್ಳದ್ದು ಎಂದು ಹೇಳುವುದಕ್ಕಾಗುವುದಿಲ್ಲ. ಅದರ ಗ್ರಹಿಕೆ ಮತ್ತು ಅಭಿವ್ಯಕ್ತಿ ದುಡಿಯುವ ವರ್ಗದ ಪಾತ್ರಗಳ ವರ್ತನೆ, ಸ್ವಭಾವಗಳನ್ನು ಕೇಂದ್ರವಾಗಿಟ್ಟುಕೊಂಡು ದುಡಿಯುವ ವರ್ಗದ ಆಲೋಚನೆಗಳನ್ನು ನಿರೂಪಿಸಬೇಕಾಗಿದೆ. ಯಾಕೆಂದರೆ ದುಡಿಯುವ ವರ್ಗದ ಪರವಾದ ಆಲೋಚನೆ ಎಂಬುದು ಕೇವಲ ಹೇಳಿಕೆಗಳ ಮಟ್ಟದಲ್ಲೋ, ಘೋಷಣೆಗಳ ಮಟ್ಟದಲ್ಲೋ, ಸಾಹಿತ್ಯ ಕೃತಿಗಳಲ್ಲಿ ನಿರೂಪಿತ ವಾಗಿರುವುದಿಲ್ಲ. ಅದರಲ್ಲಿಯೂ ಕಾದಂಬರಿಯಲ್ಲೋ ಕತೆಯಲ್ಲೋ ಅಥವಾ ಇನ್ನಾವುದೇ

ಸಾಹಿತ್ಯ ಕೃತಿಯಲ್ಲೋ ಶೋಷಿತಪರ ಆಲೋಚನೆ ಎಂಬುದು ಸಿದ್ಧಮಾದರಿಯ ಹೇಳಿಕೆಗಳ ರೂಪದಲ್ಲಿ ಇರುವುದಿಲ್ಲ. ಅದು ಪಾತ್ರಗಳ ವರ್ತನೆಯಲ್ಲೋ, ಪಾತ್ರಗಳ ಬೆಳವಣಿಗೆಯಲ್ಲೋ, ಸಂಭಾಷಣೆಗಳ ಸ್ವರೂಪದಲ್ಲೋ ಸನ್ನಿವೇಶಗಳ ನಿರ್ಮಾಣದಲ್ಲೋ ಒಂದು ಸೃಜನಶೀಲ ಪ್ರಕ್ರಿಯೆಯಾಗಿ ಕೆಲಸ ಮಾಡುತ್ತದೆ. ಈ ಹಿನ್ನೆಲೆಯಲ್ಲಿ ಕಾದಂಬರಿಗಳ ನಿರೂಪಣೆಯನ್ನು ಅದರ ಆಶಯಗಳನ್ನು ಗಮನಿಸಿ ಇದು ದುಡಿಯುವ ವರ್ಗದ ಬಿಡುಗಡೆಯ ದೃಷ್ಟಿಕೋನಗಳು ಇಲ್ಲಿ ನಿರೂಪಿತವಾಗಿವೆ ಅಥವಾ ಇರುವ ಸ್ಥಿತಿಯನ್ನು ನಿರೂಪಿಸಿದೆ ಎಂಬುದನ್ನು ಪರಿಶೀಲಿಸಲಾಗುವುದು.

ಶಿವರಾಮ ಕಾರಂತರ 'ಚೋಮನದುಡಿ' ಕಾದಂಬರಿಯಲ್ಲಿ ಇಡಿಯಾಗಿ ಒಂದು ಶೋಷಿತ ವರ್ಗದ ಪರವಾದ ಆಲೋಚನೆಗಳನ್ನು ನಿರೂಪಿಸಿದೆ ಎಂದು ಸರಳವಾಗಿ ಹೇಳಿಕೆ ಮಾಡುವುದು ಬೇರೆ. ಆದರೆ ಈ ಶೋಷಿತಪರ ಎಂಬುದು ಒಂದು ಹಿತಾಸಕ್ತಿಯಾಗಿ ಒಂದು ದೃಷ್ಟಿಕೋನವಾಗಿ ಮತ್ತು ನಿರೂಪಣೆಯಲ್ಲಿ ಒಂದು ಸ್ವಭಾವವಾಗಿ ಹೇಗೆ ಒಡಮೂಡಿದೆ ಎಂಬುದನ್ನು ಗುರುತಿಸುವುದು ಬೇರೆ. ಕಾದಂಬರಿಯ ಕೆಲವು ಸನ್ನಿವೇಶಗಳನ್ನು ಉಲ್ಲೇಖಿಸುವುದರ ಮೂಲಕ ಚರ್ಚಿಸುವುದಾದರೆ, 'ಚೋಮನ ದುಡಿ'ಯಲ್ಲಿ ಚೋಮನ ದುಡಿಯುವ ವರ್ಗದ ಪಾತ್ರವಾಗಿ ನಿರೂಪಣೆಗೊಂಡಿದ್ದಾನೆ. ಅವನ ಇಡೀ ಬದುಕಿನ ಆಸೆ ಏನಾಗಿತ್ತು ಎಂಬುದರ ಬಗೆಗೆ ನೋಡುವುದಾದರೆ ಅವನಿಗೆ 'ಗೇಣಿಗಾಗಿ ಭೂಮಿ ಉಳುಮೆ ಮಾಡುವ ಬಯಕೆ' ಇಡೀ ಅವನ ಬದುಕಿನ ದೊಡ್ಡ ಕನಸು. ಅವನು ಭೂಮಾಲೀಕ ಸಂಕಪ್ಪಯ್ಯನ ಮನೆಯಲ್ಲಿ ದುಡಿಯುತ್ತಾನೆ. ಅವನ ದುಡಿಮೆಯನ್ನು ಶ್ರಮಶೋಷಣೆ ಮಾಡುವುದರಿಂದ ಸಂಕಪ್ಪಯ್ಯ ಪ್ರತಿನಿಧಿಸುವ ಆಳುವ ವರ್ಗ ನಿಂತಿದೆ. ಆದರೆ ಚೋಮನಿಗೆ ಈ ಶೋಷಣೆಯ ಅರಿವು ಗೊತ್ತಾಗುವುದಿಲ್ಲ. ಆದ್ದರಿಂದ ಅವನು ಎಲ್ಲಿಯೂ ಪ್ರತಿಭಟಿಸುವುದಿಲ್ಲ ಎಂದು ಹೇಳಬಹುದು. ಆದರೂ ಚೋಮನು ಏಕೆ? ಈ ರೀತಿಯಾದ ಸಂಕಷ್ಟಕ್ಕೆ ಒಳಗಾದ ಎಂದಾಗ ಅವನ ಕನಸಿನ ಭೂಮಿ ಉಳುಮೆಯು ಎಲ್ಲಿ ಕೈ ತಪ್ಪಿ ಹೋಗುವುದೋ ಎಂಬ ಭಾವನೆ ಇರಬಹುದೇ? ಆ ಕಾರಣದಿಂದ ಮೂರು ಬಾರಿ ಗೇಣಿಗಾಗಿ ಭೂಮಿ ಕೇಳುವ ಪ್ರಯತ್ನ ಮಾಡುತ್ತಾನೆ. ಆದರೆ ಭೂಮಾಲೀಕ ವರ್ಗ ಮಾತ್ರ ಇವನ ಮನವಿಗೆ ಸ್ಪಂದಿಸುವುದಿಲ್ಲ. ಹಾಗೆಯೇ ಚೋಮನ ಎತ್ತುಗಳನ್ನು ಸಹ ಸಂಕಪ್ಪಯ್ಯ ಕೇಳುತ್ತಾನೆ. ಇದು ಆಳುವ ವರ್ಗದ ರಾಜಕೀಯ ತಂತ್ರವಾಗಿ ಮೂಡಿಬಂದಿದೆ.

ಇಲ್ಲಿ ಸಂಕಪ್ಪಯ್ಯ ಮತ್ತು ಚೋಮನ ನಡುವೆ ಒಡೆಯ ಮತ್ತು ಆಳುವಿನ ಸಂಬಂಧವಿದೆ. ಹಾಗೆಯೇ ಶೋಷಕ ಮತ್ತು ಶೋಷಿತ ಸಂಬಂಧಗಳಿವೆ. ಆದರೆ ಶ್ರೀಮಂತ ಸಂಕಪ್ಪಯ್ಯನ ಮನೆಯ ಭೂಮಿಯಲ್ಲಿ ಚೋಮನು ದುಡಿಯುತ್ತಿರುವುದರಿಂದ ಒಂದು ರೀತಿಯಾದ ಭಾವನಾತ್ಮಕ ಸಂಬಂಧಗಳು ನಿರ್ಮಾಣವಾಗಿರುವುದರಿಂದ ಚೋಮನು ಸಂಕಪ್ಪಯ್ಯನನ್ನು ಭೂಮಿ ಕೇಳುತ್ತಾನೆ. ಆದರೆ ಸಂಕಪ್ಪಯ್ಯ ತಾಯಿ ಕೇಳಬೇಕು ಎಂದು ಹೇಳುವುದರ ಮೂಲಕ ತನ್ನ ಭಾವನೆಗಳನ್ನು ಹೊರಹಾಕುತ್ತಾನೆ. ಇದನ್ನು ಕೇಳಿದ ಸಂಕಪ್ಪಯ್ಯನ ತಾಯಿ "ಅಬ್ಬಾ! ಈ ಹೊಲೆಯರಿಗೆ

ಬಂದ ಸೊಕ್ಕೇ"[೧೫] ಎಂದು ಪ್ರತಿಕ್ರಿಯೆ ಮಾಡುತ್ತಾಳೆ. ಇದರ ಮೂಲಕ ಸಾಹಿತ್ಯ ಕೃತಿಯು ಹಳೆಯ ತಲೆಮಾರಿನ ಭೂಮಾಲೀಕ ವರ್ಗವು ಕೆಳಜಾತಿಯ ಜನರು ಯಾವುದೇ ಹಕ್ಕನ್ನು ಕೇಳುವ ಹಾಗಿಲ್ಲ ಎಂಬ ಆಳುವ ವರ್ಗದ ಆಲೋಚನೆಯನ್ನು ಮುಂದಿಡುತ್ತದೆ.

ಇದರ ಜೊತೆಗೆ ಬಿರುಮನ ಮೋಸ, ಮನ್ವೇಲ ಮೇಸ್ತ್ರಿಯ ಶೋಷಣೆ ಮುಂತಾದ ಅಂಶಗಳು ಕೆಳವರ್ಗದ ಜನರನ್ನು ಪ್ರತಿಯೊಂದು ಹಂತದಲ್ಲಿ ಶೋಷಣೆ ಮಾಡುವ ಊಳಿಗಮಾನ್ಯಶಾಹಿವ್ಯವಸ್ಥೆಯನ್ನು ಸೂಚಿಸುತ್ತವೆ. ಜಾತಿ ಕಾರಣಕ್ಕಾಗಿ ಮಗುವಿನ ಸಾವು ಬೆಳ್ಳಿಯ ಮೇಲಿನ ದೌರ್ಜನ್ಯ, ಚೋಮನ ಭೂಮಿಯ ಹಕ್ಕಿನ ವಂಚನೆ ನಡೆದಿದೆ. ಇಲ್ಲಿ ಜಾತಿ ಅಸಮಾನತೆ ಪ್ರಧಾನವಾದ ಸಾಮಾಜಿಕ ಸಮಸ್ಯೆಯಾಗಿ ಗುರುತಿಸುವ ಕಾದಂಬರಿಯು ಅದರ ವಿರುದ್ಧ ಧ್ವನಿ ಎತ್ತುವುದಿಲ್ಲ. ತನಗೆ ತಾನೇ ಆಸ್ತಿಯ ಶೋಷಣೆ, ವಂಚನೆಗೆ ಒಳಗಾದ ಚೋಮನು ಕೂಡ ಈ ಶೋಷಣೆ ದೌರ್ಜನ್ಯವನ್ನು ಒಪ್ಪಿಕೊಂಡು ಹೋಗುತ್ತಾನೆ ವಿನಾ ಆಳುವ ವರ್ಗದ ವಿರುದ್ಧ ಪ್ರತಿಭಟಿಸುವುದಿಲ್ಲ. ಮತ್ತೊಂದು ಆಯಾಮದಲ್ಲಿ ಕಾದಂಬರಿಯು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಮಾಡಿ ಅಲ್ಲಿ ಭೂಮಿಯ ಹಕ್ಕಿನ ಪ್ರಶ್ನೆಯನ್ನು ಮುಂದಿಡುತ್ತದೆ. ಆದರೆ ಮೂಲಧರ್ಮವನ್ನು ಮೀರುವ ಪ್ರಯತ್ನಗಳನ್ನು ಕಾದಂಬರಿಯು ಮಾಡುವುದಿಲ್ಲ. ಹಾಗಾಗಿ ಕ್ರಿಶ್ಚಿಯನ್‌ನಾಗಿ, ಸ್ವತಂತ್ರನಾಗಿ ಬದುಕುವ ಆಸೆಯ ಮಾಡಿದರೂ ಧರ್ಮ ಅವನಿಗೆ ಅಡ್ಡಿಯಾಗುತ್ತದೆ. ಹಾಗಾಗಿ ಚೋಮನು ಎಲ್ಲಿಯೂ ಸ್ವತಂತ್ರನಲ್ಲ. ಭೂಮಿಯನ್ನು ಗೇಣಿಗಾಗಿ ಉಳುಮೆ ಮಾಡುವಲ್ಲಿ ಜಾತಿಯ ಪ್ರಶ್ನೆ ಎದುರಾಗುತ್ತದೆ. ಹಾಗೆಯೇ ಮತಾಂತರ ಅವನ ಆಯ್ಕೆಯನ್ನು ನಿರಾಕರಣೆ ಮಾಡುತ್ತದೆ ಒಟ್ಟಾರೆ ಧರ್ಮ, ಜಾತಿ, ಅಸಮಾನತೆ, ದುಡಿಯುವ ವರ್ಗವನ್ನು ನಿರಂತರವಾಗಿ ಶೋಷಣೆ ಮಾಡುವ ಅಸ್ತ್ರವಾಗಿ ಇರುವುದನ್ನು ಇಲ್ಲಿ ಗುರುತಿಸಬಹುದು.

ಕಾದಂಬರಿಯು ಆಳುವ ವರ್ಗದ ಶೋಷಣೆ ಮಾಡುವ ಸೂಕ್ಷ್ಮಾತಿಸೂಕ್ಷ್ಮ ಎಳೆಗಳು ನಿರೂಪಿಸಿದೆ. ಹಾಗೆಯೆ ಸಮಾಜದಲ್ಲಿ ದುಡಿಯುವ ಜನರ ಕಷ್ಟ ಹಾಗೂ ನೋವಿನ ಚಿತ್ರಣವನ್ನು ಕಾದಂಬರಿಯು ಚಿತ್ರಿಸಿದರೂ ಅದು ಯಾಂತ್ರಿಕವಾದ ನಿಲುವಾಗಿ ಗೋಚರಿಸುತ್ತದೆ. ದುಡಿಯುವ ವರ್ಗಶೋಷಣೆಯ ಸಂಪತ್ತಿನ ಅಸಮಾನತೆ ಮತ್ತು ಶ್ರಮಶೋಷಣೆಯಿಂದ ನಡೆದರೂ ಈ ಅಂಶಗಳ ಬಗೆಗೆ ಕಾದಂಬರಿಯು ಆಳುವ ವರ್ಗ ಮತ್ತು ದುಡಿಯುವ ವರ್ಗವನ್ನು ಮುಖಾಮುಖಿ ಮಾಡುವುದಿಲ್ಲ. ದುಡಿಯುವ ವರ್ಗದ ಪಾತ್ರಗಳ ಮೂಲಕ ತನ್ನ ವರ್ಗದ ರಾಜಕೀಯ ತಂತ್ರವನ್ನು ಹೇಳಿಸಿರುವ ನಿರೂಪಣೆ ಶೈಲಿ ಇದೆ.

'ಕುಡಿಯರ ಕೂಸು' ಕಾದಂಬರಿಯಲ್ಲಿ 'ಕುಡಿಯ ಜನಾಂಗ' ಕಾಡಿನ ಒಂದು ಭಾಗವಾಗಿ ತಲೆತಲಾಂತರದಿಂದ ಅಲ್ಲಿ ಕೃಷಿ ಮತ್ತು ಬೇಟೆಯನ್ನು ವೃತ್ತಿಯಾಗಿ ನಡೆಸಿಕೊಂಡು ಬಂದ ಶ್ರಮಿಕ ವರ್ಗ. ಆದರೆ ಆಧುನಿಕತೆಯ ಪ್ರವೇಶದಿಂದ ಭೂಮಾಲೀಕ ವರ್ಗವು ಇಡೀ ಕಾಡಿಗೆ ಏಲಕ್ಕಿ ಕೃಷಿಯನ್ನು ವಿಸ್ತರಿಸಿದರು. ಇಲ್ಲಿ ವಾಸ ಮಾಡುತ್ತಿದ್ದ ಕುಡಿಯರನ್ನು ಜೀತದಾಳುಗಳಾಗಿ ದುಡಿಸಿಕೊಳ್ಳಲು ಪ್ರಾರಂಭಿಸಿ ಅವರ ಹಕ್ಕುಗಳನ್ನು ವಂಚಿಸಿ, ತಾನು ಹೇಳಿದ ರೀತಿಯಲ್ಲಿ

ಬದುಕುವಂತಹ ಸ್ಥಿತಿಯನ್ನು ನಿರ್ಮಾಣ ಮಾಡಿತು. "ತಲೆತಲಾಂತರದಿಂದ ಬಂದ ಅವರು ಬಾಳು ಸ್ವತಂತ್ರವೆಂದರೂ ಒಂದು ತೆರದ ಹಂಗಿನ ಬಾಳಾಗಿತ್ತು. ಮಲೆಯಲ್ಲಿ ಅವರು ಎಲ್ಲಿಯೇ ವಾಸಿಸಿರಲಿ, ಎಲ್ಲಿಯೇ ಗುಡಿ ಕಟ್ಟಿರಲಿ, ಯಾವ ಭಾಗದ ಕಾಡನ್ನೇ ಸವರಿ ಕುಮರಿ ಮಾಡಲಿ, ಕೇಳುವವರಿಲ್ಲವೆಂಬುದು ನಿಜ. ಆದರೆ ಮಲೆಯ ಸೆರಗೆಲ್ಲಾ ಅನಾದಿಯಿಂದ ಒಬ್ಬನಲ್ಲ ಒಬ್ಬ ದನಿಗೆ ಸೇರಿದ್ದಾಗಿತ್ತು. ಅವರೆಲ್ಲರೂ ಪೀಳಿಗೆಯಿಂದ ಬಂದ ಜೀತದ ಆಳುಗಳು, ವರ್ಷದ ನಾಲ್ಕು ತಿಂಗಳ ಕಾಲ ದನಿಗಾಗಿ ಹೆಚ್ಚು ಕಡಿಮೆ ಫಲಾಪೇಕ್ಷೆಯಿಲ್ಲದೆ ದುಡಿಯಬೇಕು. ಅದಕ್ಕೆ ಪ್ರತಿಫಲ ವರ್ಷಕ್ಕೊಂದು ಬಟ್ಟೆ, ಉಪ್ಪು, ಹೆಂಡ ತೆಗೆಯುತ್ತಿದ್ದುದಕ್ಕಾಗಿ ದನಿ ಕೊಡುತ್ತಿದ್ದ ಸಂಕ-ಈ ಎಲ್ಲವುಗಳ ಮೊತ್ತ ಅವರ ದುಡಿತಕ್ಕೆ ಸಮಾನವಾದ ಪ್ರತಿಫಲ ಎನ್ನುವಂತಿಲ್ಲ".[೯] ಹೀಗೆ ಭೂಮಾಲೀಕ ವರ್ಗವು ದುಡಿಯುವ ಜನರ ಹಕ್ಕುಗಳನ್ನು ವಂಚಿಸಿ, ಅವರ ಶ್ರಮಶೋಷಣೆ ಮಾಡುವುದರ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ.

ಆಳುವ ವರ್ಗದ ಶೋಷಣೆಯಿಂದಾಗಿ ದುಡಿಯುವ ವರ್ಗದ ನಡುವೆ ಕಲಹ ಶುರುವಾಗುತ್ತದೆ. ಸಮುದಾಯಗಳು ವಿಭಾಗವಾಗಿ ಆಂತರಿಕ ಸಂಘರ್ಷವನ್ನು ಆಳುವ ವರ್ಗ ಹುಟ್ಟು ಹಾಕುತ್ತದೆ. ಇಡೀ ಕಾದಂಬರಿಯಲ್ಲಿ ದುಡಿಯುವ ಜನರು ತನ್ನ ಹಕ್ಕುಗಳನ್ನು ಕಳೆದುಕೊಂಡಿರುವ ಬಗೆಗೆ ಯೋಚನೆ ಸಹ ಮಾಡದ ರೀತಿಯಲ್ಲಿ ಅವರನ್ನು ಅಮಾಯಕರಾಗಿ ಚಿತ್ರಿಸಲಾಗಿದೆ. ತನ್ನ ಹಕ್ಕುಗಳನ್ನು ಪಡೆದುಕೊಳ್ಳುವ ಪ್ರಯತ್ನವಾಗಲಿ, ತನಗೆ ಹಾಗೂ ತಿರುವ ಶ್ರಮಶೋಷಣೆ ಬಗ್ಗೆಯಾಗಲಿ ಕಾದಂಬರಿ ಮಾತನಾಡುವುದಿಲ್ಲ. ಆಳುವ ವರ್ಗದ ಶೋಷಣೆಯನ್ನು ಒಪ್ಪಿಕೊಂಡು ಹೋಗುವ ಶ್ರಮಿಕರು ತನ್ನ ಬಿಡುಗಡೆಗೆ ಯಾವುದೇ ಪ್ರಯತ್ನ ಮಾಡದೆ ಇರುವ ಸ್ಥಿತಿಯಲ್ಲಿ ಅವರನ್ನು ಚಿತ್ರಿಸಲಾಗಿದೆ. ಮತಾಂತರ ಮತ್ತು ಕುಲದ ಪ್ರಶ್ನೆ ಬಂದಾಗ ಪ್ರತಿಭಟಿಸುತ್ತಾರೆ. ಆದರೆ ಆಳುವ ವರ್ಗ, ವರ್ಗಶೋಷಣೆ ಅರಿವು ಕೂಡ ಅವರಿಗೆ ಇಲ್ಲ. ಇಂತಹ ಸ್ಥಿತಿಯಲ್ಲಿ ಕಾದಂಬರಿಯು ಅವರ ಬಿಡುಗಡೆಯ ಆಶಯನ್ನು ಎಲ್ಲಿಯೂ ಸೂಚಿಸುವುದಿಲ್ಲ. ಬದಲಾಗಿ ಇರುವ ಸ್ಥಿತಿಯನ್ನು ಯಥಾಸ್ಥಿತಿಯಲ್ಲಿ ನಿರೂಪಿಸಿ, ಇಡೀ ದುಡಿಯುವ ವರ್ಗದ ಹಕ್ಕಿನ ಪ್ರಶ್ನೆಯನ್ನು ಗೌಣಗೊಳಿಸಿದೆ.

'ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಹಾಗೂ 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳು ಊಳಿಗಮಾನ್ಯಶಾಹಿವ್ಯವಸ್ಥೆಯ ಕ್ರೌರ್ಯವನ್ನು ಚಿತ್ರಿಸುತ್ತವೆ. ಭೂಮಿಯ ಹಕ್ಕನ್ನು ಹೊಂದಿರುವ ಭೂಮಾಲೀಕ ವರ್ಗವು ತನ್ನ ಭೂಮಿಯಲ್ಲಿ ದುಡಿಯುವ ಕೃಷಿಕಾರ್ಮಿಕ ವರ್ಗವನ್ನು ದೌರ್ಜನ್ಯ ಮತ್ತು ಶೋಷಣೆ ಮಾಡುವುದರ ಮೂಲಕ ಆರ್ಥಿಕ ಅಸಮಾನತೆಯ ವ್ಯವಸ್ಥೆಯನ್ನು ಯಥಾಸ್ಥಿತಿಯಲ್ಲಿ ಮುಂದುವರಿಸಿಕೊಳ್ಳುವ ಪ್ರಕ್ರಿಯೆಯನ್ನು ನಿರೂಪಿಸುತ್ತದೆ. 'ಹೊನ್ನಾಳಿ ಒತ್ತವೆಂದೇ ಕರೆಸಿಕೊಳ್ಳುವ ಭೂಮಾಲೀಕ ವರ್ಗದ ದೌರ್ಜನ್ಯ ನಿರಂತರವಾಗಿ ದುಡಿಯುವ ಜನರ ಮೇಲೆ ನಡೆಯುತ್ತದೆ. ಈ ಕ್ರೂರವಾದ ಶೋಷಣೆಯನ್ನು ಅನುಭವಿಸುವ ದುಡಿಯುವ ಜನರಿಗೆ ಯಾವುದೇ ಶೋಷಣೆಯ ಅರಿವು ಕೂಡ ಅವರ ಪ್ರಜ್ಞೆಗೆ ಬರದ ಹಾಗೆ ಕಾದಂಬರಿಯ

ನಿರೂಪಣೆಯಲ್ಲಿ ನಿರೂಪಿಸಲಾಗಿದೆ. ಅಲ್ಲಿ ದುಡಿಯುವ ಜನರನ್ನು ವಸ್ತುಗಳ ರೀತಿಯಲ್ಲಿ ಹಂಚಿಕೊಳ್ಳುವ ಭೂಮಾಲೀಕ ವ್ಯವಸ್ಥೆ ಅವರನ್ನು ಅಮಾಯಕ ರೀತಿಯಲ್ಲಿ ನಡೆಸಿಕೊಂಡಿದೆ. ದುಡಿಯುವ ಜನರ ಹಕ್ಕುಗಳನ್ನು ವಂಚಿಸಿ, ಅವರನ್ನು ಅಧೀನವಾಗಿ ಇಟ್ಟುಕೊಂಡಿರುವ ಊಳಿಗಮಾನ್ಯಶಾಹಿ ವ್ಯವಸ್ಥೆಯ ಚಿತ್ರಣ ಕಾಣುತ್ತೇವೆ. ಶೋಷಣೆಗೆ ಒಳಗಾದ ದಲಿತ ವರ್ಗವು ಎಲ್ಲಿಯೂ ಕೂಡ ಆಳುವ ವರ್ಗದ ನಡುವೆ ಮುಖಾಮುಖಿಯಾಗುವ ಯಾವುದೇ ಪ್ರಸಂಗಗಳು ನಿರೂಪಣೆಯಲ್ಲಿ ಕಾಣಿಸುವುದಿಲ್ಲ. ಭೂಮಿಯ ಹಕ್ಕಿಗಾಗಿ ಹಂಬಲಿಸಬೇಕಾದ ಸಮುದಾಯವು ಎಲ್ಲಿಯೂ ತನ್ನ ಹಕ್ಕನ್ನು ಪ್ರತಿಪಾದಿಸುವುದಿಲ್ಲ. ನಿರಂತರವಾಗಿ ಶ್ರಮಶೋಷಣೆ, ದೌರ್ಜನ್ಯ ಮಾಡುವ ಮಾಲೀಕವರ್ಗವು ಅವರನ್ನು ಗುಲಾಮರಾಗಿ ಕಂಡಿದೆ. ಜೀತಪದ್ಧತಿ, ಜಾತಿ ಶೋಷಣೆ, ಲೈಂಗಿಕ ಶೋಷಣೆಯನ್ನು ಆಳುವ ವರ್ಗವು ಮಾಡುತ್ತ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಹಾಗೆಯೇ ಇವರ ಈ ಶೋಷಣೆಗೆ ಒಳಗಾಗಿರುವ ಶೋಷಿತರು ವರ್ಗಶೋಷಣೆಯ ಅರಿವು ಕೂಡ ಇಲ್ಲದ ರೀತಿಯಲ್ಲಿ ಚಿತ್ರಿಸಲಾಗಿದೆ.

ಕಾದಂಬರಿಯ ಪಾತ್ರಗಳಾದ ಚಂದ್ರಯ್ಯಗೌಡ, ಕಲ್ಲಯ್ಯಗೌಡ, ಭರಮೈ ಹೆಗ್ಗಡೆಯಂಥವರು ದುಡಿವ ಜನರ ಶ್ರಮಶೋಷಣೆ ಮಾಡವ ಶೋಷಕ ವರ್ಗವಾಗಿದೆ. ಹಾಗೆಯೇ ದುಡಿಯುವ ಜನರು ಜೀತ ಮಾಡುವುದಕ್ಕೆ 'ಸಾಲನೆ' ಕಾರಣ ಎಂದು ಆರೋಪಿಸುವ ಕಾದಂಬರಿಕಾರರು ಜೀತಪದ್ಧತಿಯ ನಿರ್ಮೂಲನೆಯ ಅಂಶಗಳ ಬಗೆಗೆ ಚಕಾರ ಎತ್ತುವುದಿಲ್ಲ. ಹಾಗೆಯೇ ಈ ಆಳುವ ವರ್ಗ ಶೋಷಣೆಯ ಪರಿಣಾಮವೇ ಕಾದಂಬರಿಯಲ್ಲಿ ದುಡಿಯುವ ಜನರ ಸಂಕಷ್ಟದ ಸ್ಥಿತಿಯಾಗಿದೆ. ಆದರೆ ಕಾದಂಬರಿ ಈ ದಲಿತ ವರ್ಗದ ಸಮಸ್ಯೆಯನ್ನು ಯಾಂತ್ರಿಕವಾದ ಮಾದರಿಯಲ್ಲಿ ಗ್ರಹಿಸಿದೆ. ಉತ್ಪಾದನಾ ಸಂಬಂಧದಿಂದ ಮಾಲೀಕ-ಆಳು ಎಂಬ ಈ ಎರಡು ವರ್ಗಗಳ ಸೃಷ್ಟಿಗೆ ಸಂಪತ್ತಿನ್ರ ಅಸಮಾನತೆ ಕಾರಣವಾಗಿದೆ. ಆದರೆ ಸಂಪತ್ತಿನ ಒಡೆತನ ಹೊಂದಿರುವ ಭೂಮಾಲೀಕ ವರ್ಗವು ತನ್ನ ಅಸ್ತಿತ್ವಕ್ಕಾಗಿ ನಡೆಸುವ ದೌರ್ಜನ್ಯಗಲು ಕಾದಂಬರಿಯಲ್ಲಿ ನಿರೂಪಣೆಗೊಂಡಿವೆ. ಆದರೆ ದುಡಿಯುವ ವರ್ಗವನ್ನು ಊಳಿಗಮಾನ್ಯಶಾಇ ವ್ಯವಸ್ಥೆಯ ಚೌಕಟ್ಟಿನಲ್ಲಿ ಯಾಂತ್ರಿಕವಾಗಿ ಗ್ರಹಿಸುತ್ತಿರುವುದರಿಂದ, ಅವರು ಶೋಷಣೆಯಿಂದ ಬಿಡುಗಡೆಗೊಳಿಸುವ ಅಥವಾ ಆರ್ಥಿಕ ಸಬಲತೆಗೆ ಪ್ರಯತ್ನಿಸುವ ವಸ್ತುವಿಷಯಗಳನ್ನು ಕಾದಂಬರಿಯ ನಿರೂಪಣೆಯು ಎಲ್ಲಿಯೂ ಬಿಟ್ಟುಕೊಡುವುದಿಲ್ಲ. ಆದರೆ ಬಿ. ಕೃಷ್ಣಪ್ಪ ಅವರ ಆರೋಪವು ಈ ಕಾದಂಬರಿಯ ವಿಮರ್ಶೆಯಲ್ಲಿ ದೊಡ್ಡದಾದ ರಾಜಕೀಯ ಚಿಂತನೆಗೆ ಕಾರಣವಾಗಿದೆ. ಈ ರೀತಿಯಾದ ಶಕ್ತಿಶಾಲಿ ವಿಮರ್ಶೆಗಳಿಂದ ನೋಡಿದ್ದಾಗ ಕಾದಂಬರಿಗಳು ಶ್ರಮಜೀವಿಗಳ ವಿರುದ್ಧವಾದ ನಿಲುವಿಗೆ ನಿಲ್ಲುವುದನ್ನು ಕಾಣುತ್ತೇವೆ. ಈ ರೀತಿಯಾಗಿ ದುಡಿಯುವ ಜನರ ವರ್ಗಪ್ರಜ್ಞೆಯನ್ನು ಆರೋಪಿಸಿರುವ ನಿರೂಪಣೆಯನ್ನು ಇಲ್ಲಿ ಕಾಣುತ್ತೇವೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 'ಹೇಮಾವತಿ' ಕಾದಂಬರಿಯಲ್ಲಿ ಅಸ್ಪೃಶ್ಯರ ದೇವಾಲಯವನ್ನು ಪ್ರವೇಶ ಮಾಡಬೇಕು ಎಂಬ ಮನೋಭಾವದ ಹಿನ್ನೆಲೆಯಲ್ಲಿ ಕಾದಂಬರಿ

ನಿರೂಪಣೆ ಕಾಣಿಸುತ್ತದೆ. ಭೂಮಿಯ ಹಕ್ಕಿನಿಂದ ವಂಚಿತರಾಗಿರುವ ಹರಿಜನರು, ಮೇಲುಜಾತಿಯ ಅಧೀನದಲ್ಲಿ ಬದುಕುವ ಸ್ಥಿತಿಯನ್ನು ಕಾಣುತ್ತೇವೆ. ಗಾಂಧೀ ವಿಚಾರಧಾರೆಯ ಪ್ರಭಾವದಿಂದ ದಲಿತ ಸಮಸ್ಯೆಗಳಿಗೆ ಮೇಲುವರ್ಗದ ಜನರ ಸ್ಪಂದಿಸುವುದನ್ನು ಕಾಣುತ್ತೇವೆ. ದಲಿತ ವರ್ಗದವರಿಗೆ ಶಿಕ್ಷಣ ನೀಡುವುದರ ಮೂಲಕ ಅವರ ಶುಚಿತ್ವ ಕಾಪಾಡಿಕೊಳ್ಳಬಹುದು. ಆ ಮೂಲಕ ಮೂಢನಂಬಿಕೆಗಳನ್ನು ನಿವಾರಣೆ ಮಾಡಬಹುದು. ಅಂತರ್‌ಜಾತಿ ವಿವಾಹಗಳ ಮೂಲಕ ದಲಿತ ವರ್ಗದ ಸಮಸ್ಯೆಗಳನ್ನು ನಿವಾರಿಸಬಹುದು ಎನ್ನುವ ತೆಳುವಾದ ನಿರೂಪಣೆಯು ದುಡಿಯುವ ವರ್ಗದ ಸುಧಾರಣೆಯನ್ನು ಬಯಸುತ್ತಿದೆ.

ದಲಿತ ವರ್ಗದ ಮೂಲಭೂತ ಸಮಸ್ಯೆಗೆ ಎರಡು ಮುಖ್ಯವಾದ ಕಾರಣಗಳನ್ನು ಗುರುತಿಸುತ್ತೇವೆ. ಅದರಲ್ಲಿಯೂ ಸಂಪತ್ತಿನ ಅಸಮಾನತೆ ಮತ್ತು ಜಾತಿ ಶ್ರೇಣೀಕರಣವು ತಾಯಿ ಬೇರಿನ ರೀತಿಯಲ್ಲಿ ಈ ಕಾದಂಬರಿಯಲ್ಲಿ ಕಾಣುತ್ತೇವೆ. ಇಲ್ಲಿ ನಿರೂಪಿತವಾಗಿರುವ ಹೊಲೆಯ ಸಮುದಾಯಕ್ಕೆ ಭೂಮಿಯ ಒಡೆತನ ಇಲ್ಲ. ಇವರು ಭೂಮಾಲೀಕರ ಮನೆಯಲ್ಲಿ ಜೀತದ ಆಳುಗಳಾಗಿ ದುಡಿಯುತ್ತಿದ್ದಾರೆ. ಉದಾಹರಣೆಗೆ ಇಲ್ಲಿ ಚಿತ್ರಿತವಾಗಿರುವ 'ಕಾಳ'ನ ಪಾತ್ರವು ನಿರಂತರವಾಗಿ ದುಡಿಯುತ್ತಿರುವುದನ್ನು ಸೂಚಿಸುತ್ತದೆ. ಆದರೆ ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ಹರಿಜನರು ದೇವಾಲಯದ ಪ್ರವೇಶವನ್ನು ಮಾಡಬೇಕು ಎಂಬ ಗಾಂಧೀವಾದದ ಪ್ರೇರಣೆಯಿತ್ತು. 'ಹೇಮಾವತಿ' ಕಾದಂಬರಿಯಲ್ಲಿಯೂ ಕೂಡ ಇದರ ಪ್ರಭಾವವನ್ನು ಗುರುತಿಸಬಹುದು. ಅದರಲ್ಲಿಯೂ ದಲಿತ ವರ್ಗವು ದೇವಾಲಯ ಪ್ರವೇಶವನ್ನು ತಾತ್ವಿಕವಾಗಿ ಒಪ್ಪಿಕೊಂಡರೂ ದೇವಾಲಯ ಪ್ರವೇಶವು ಒತ್ತಾಯದ ಆಗ್ರಹದ ಹಿಂಸೆಯ ರೂಪವನ್ನು ನಿಯಂತ್ರಿಸುತ್ತದೆ ಹಾಗೂ ಮೇಲ್ವರ್ಗದವರ ಮನಃಪರಿವರ್ತನೆಯ ಮಾರ್ಗವನ್ನು ಆದರ್ಶವಾಗಿ ಅಭಿವ್ಯಕ್ತಿಸುತ್ತದೆ. ಆದರೆ ಅಸ್ಪೃಶ್ಯತೆ ಮತ್ತು ಜಾತಿಯ ಅಸಮಾನತೆಯನ್ನು ಹುಟ್ಟು ಹಾಕಿರುವ ಆಳುವ ವರ್ಗದ ರಾಜಕೀಯವು ಅದರ ಸುಧಾರಣೆಯ ಹೆಸರಲ್ಲಿ ದುಡಿಯುವ ಜನರೊಂದಿಗೆ ಸ್ವಲ್ಪ ಕೆಲಸ ನಿರ್ವಹಿಸುತ್ತದೆ. ಆದರೆ ಅವರ ಹಕ್ಕುಗಳಿಗೆ ವಂಚನೆಯಾದರೂ ಅದರ ಬಗೆಗೆ ಚಕಾರ ಎತ್ತುವುದಿಲ್ಲ. ಅವರ ಮೇಲಿನ ಜಾತಿ ದೌರ್ಜನ್ಯ ಕುರಿತು ಸ್ಪಷ್ಟವಾದ ನಿಲುವುಗಳಿಲ್ಲ. ಈ ಎಲ್ಲಾ ತಾರತಮ್ಯಗಳನ್ನು ಹೋಗಲಾಡಿಸಲು ಮೇಲ್ವರ್ಗದ ಹೊಸ ತಲೆಮಾರು ಅಂತರ್‌ಜಾತಿಯ ಪ್ರಶ್ನೆಯನ್ನು ಮುಂದಿಡುತ್ತದೆ. ಮೇಲ್ಜಾತಿಯ ಯುವಕರು ಕೆಳಜಾತಿಯ ಮಹಿಳೆಯನ್ನು ಮದುವೆಯಾಗುವುದೇ ಆದರ್ಶವಾಗಿ ಸ್ವೀಕರಿಸಿದೆ. ಆದರೆ ಇಡೀ ಕಾದಂಬರಿಯಲ್ಲಿ ದುಡಿಯುವ ಜನರ ಹಕ್ಕನ್ನು ಕುರಿತು ಮಾತನಾಡುವುದಿಲ್ಲ. ಅವರನ್ನು ಶೋಷಕ ವ್ಯವಸ್ಥೆಯಿಂದ ಬಿಡುಗಡೆಗೊಳಿಸುವ ಯಾವುದೇ ಬದಲಾವಣೆಗಳು ಕಾಣಿಸುವುದಿಲ್ಲ. ಶಿಕ್ಷಣ ಮತ್ತು ಅಂತರ್‌ಜಾತಿಯ ವಿವಾಹವು ಅವರ ಬದುಕನ್ನು ಬದಲಿಸುತ್ತದೆ ಎನ್ನುವ ಭಾವನೆ ಕಾದಂಬರಿಯ ಆಳದಲ್ಲಿ ಇದೆ. ದುಡಿಯುವ ವರ್ಗವನ್ನು ಜಾತಿ ಶೋಷಣೆಯಿಂದ ಬಿಡುಗಡೆಗೊಳಿಸುವ ಆಶಯವನ್ನು ಈ ಕಾದಂಬರಿ ನಿರೂಪಣೆಯಲ್ಲಿ ಗುರುತಿಸಬಹುದು.

ರಾವ್‌ಬಹದ್ದೂರ್ ಅವರ 'ಗ್ರಾಮಾಯಣ' ಕಾದಂಬರಿಯಲ್ಲಿ ಆಸ್ತಿ ಮತ್ತು ಅಧಿಕಾರದ ಪಲ್ಲಟವನ್ನು ಕುರಿತ ನಿರೂಪಣೆಯನ್ನು ಕಾಣಬಹುದು. ಆಳುವ ವರ್ಗವು ಹೊಂದಿರುವ ಭೂಮಿಯ ಒಡೆತನ ಮತ್ತು ಅಧಿಕಾರವು ಆಂತರಿಕ ಕಲಹಗಳಿಂದ ಯಾವ ಬಗೆಯ ಸ್ವರೂಪಕ್ಕೆ ಹೋಯಿತು ಎಂಬುದನ್ನು ಇಲ್ಲಿ ಗಮನಿಸಬಹುದು. ರಾಣೋಜಿರಾಯನ ಮರಣದ ನಂತರ ಅವನ ಇಬ್ಬರು ಹೆಂಡತಿಯರಲ್ಲಿ ಆಸ್ತಿಯ ಒಡೆತನದ ಕುರಿತು ಕಲಹ ಪ್ರಾರಂಭವಾಯಿತು. ಈ ಕಲಹದಲ್ಲಿ ಎರಡು ಜನ ಹೆಂಡತಿಯರು ದುಡಿಯುವ ಜನತೆಯನ್ನು ಬಳಸಿಕೊಂಡು ತಮ್ಮ ಹಿತಾಸಕ್ತಿಯನ್ನು ಸಾಧಿಸುವುದನ್ನು ಕಾಣುತ್ತೇವೆ. ದುಡಿಯುವ ವರ್ಗ ಬರೀ ಉತ್ಪಾದನಾ ಶಕ್ತಿಯಾಗಿ ಕಾಣಿಸುತ್ತಾರೆ. ಆದರೆ ಎಲ್ಲಿಯೂ ಕೂಡ ವರ್ಗಚಹರೆ ಕಾಣಿಸುವುದಿಲ್ಲ. ಅವರ ಭೂಮಿಯ ಹಕ್ಕಿನ ಪ್ರಶ್ನೆಯನ್ನಾಗಲಿ ಅಥವಾ ಅವರ ಸ್ವಾತಂತ್ರ್ಯದ ಹಕ್ಕಿನ ವಿಷಯವನ್ನಾಗಲಿ ಕಾದಂಬರಿಯು ಮಾತನಾಡದೆ ಮೌನ ವಹಿಸುತ್ತದೆ. ಈ ಮೂಲಕ ದುಡಿಯುವ ವರ್ಗದ ವರ್ಗ ದೃಷ್ಟಿಕೋನವನ್ನು ಸಂಪೂರ್ಣವಾಗಿ ಕಾದಂಬರಿಕಾರರು ತಮ್ಮ ನಿರೂಪಣೆಯಲ್ಲಿ ಕೈಬಿಟ್ಟಿದ್ದಾರೆ. ಆಳುವ ವರ್ಗದ ನಡುವೆ ನಡೆದ ಆಂತರಿಕ ಕಲಹವು ಇಡೀ ಹಳ್ಳಿಯ ಜನರ ನಡುವೆ ಸ್ವಾರ್ಥವನ್ನು ಉಂಟುಮಾಡಿದೆ. ಇದಕ್ಕೆ ಬಲಿಯಾದವರು ದುಡಿಯುವ ಜನರಾಗಿದ್ದಾರೆ. ಜೊತೆಗೆ ದುಡಿಯುವ ಜನರು ಎಲ್ಲಿಯೂ ತಮ್ಮ ಹಕ್ಕನ್ನು ಕುರಿತು ಮಾತನಾಡುವುದಿಲ್ಲ. ಅವರಿಗೆ ಅಗತ್ಯವೇ ಇಲ್ಲದ ರೀತಿಯಲ್ಲಿ ಚಿತ್ರಿಸಿರುವುದನ್ನು ನೋಡಿದಾಗ ಇದು ಆಳುವ ವರ್ಗದ ರಾಜಕೀಯ ತಂತ್ರವಾಗಿ ಕಾಣಿಸುತ್ತದೆ. ಯಾರು ಭೂಮಿಗಾಗಿ ಹಂಬಲಿಸುತ್ತಿದ್ದರೋ ಆ ಸಮುದಾಯದ ವಸ್ತುವಿಷಯಗಳನ್ನು ಈ ರೀತಿಯಲ್ಲಿ ಮುಚ್ಚಿಡುವ ಕ್ರೂರವಾದ ನಿರೂಪಣೆ ಇದಾಗಿದೆ ಎಂದರೆ ತಪ್ಪಾಗಲಾರದು. ಏಕೆಂದರೆ ಸಾಹಿತ್ಯ ಕೃತಿಯು ಆ ಕಾಲದಲ್ಲಿ ಸಮಾಜದಲ್ಲಿ ಇರುವ, ಇರಬೇಕಾದ ಅತಿ ಸೂಕ್ಷ್ಮವಾದ ವಿಷಯಗಳನ್ನು ನಿರೂಪಿಸುತ್ತದೆ ಎನ್ನುವಾಗ ಈ ಕಾದಂಬರಿಯು ತೆಲಂಗಾಣ ಹೋರಾಟದ 'ದುಡಿಯುವ ವರ್ಗದ ಭೂಹಕ್ಕಿನ ಪ್ರಶ್ನೆಯಾಗಲಿ' ಅಥವಾ ಇದಕ್ಕೂ ಮುಂಚಿತವಾಗಿ ಕನ್ನಡದಲ್ಲಿ ಬಂದ 'ಚೋಮನ ದುಡಿ' ಮತ್ತು 'ಚಿರಸ್ಮರಣೆ' ಕಾದಂಬರಿಗಳು ದುಡಿವ ಜನರ ಭೂಮಿಯ ಹಕ್ಕನ್ನು ಎತ್ತಿಹಿಡಿದಿರುವುದನ್ನು ಕಾಣುತ್ತೇವೆ. ಆದರೆ ದುಡಿಯುವ ವರ್ಗ, ಉತ್ಪಾದಕ ವರ್ಗ, ಶ್ರಮಜೀವಿಗಳ ವರ್ಗಪ್ರಜ್ಞೆಯನ್ನು ಕಾದಂಬರಿಯಲ್ಲಿ ತರದೆ ಭೂಮಿಯ ಹಕ್ಕನ್ನು ಕುರಿತು ನಿರೂಪಿಸುವ ತಂತ್ರವು ಈ ಆರೋಪಕ್ಕೆ ಕಾರಣವಾಗಿದೆ.

ಆಸ್ತಿ ಹಾಗೂ ಅಧಿಕಾರದ ಈ ಸಂಘರ್ಷಗಳು ಮಾನವೀಯ ಮೌಲ್ಯಗಳನ್ನು ಭ್ರಷ್ಟಗೊಳಿಸಿವೆ. ಹಾಗೆಯೆ ಮನುಷ್ಯರ ಸ್ವಾರ್ಥವು ಆಸ್ತಿ ಮತ್ತು ಅಧಿಕಾರದ ಒಡಲಿನಲ್ಲೇ ಹುಟ್ಟುತ್ತದೆ ಎಂಬುದು ಈ ಕಾದಂಬರಿಯ ಆಳವಾದ ನಂಬಿಕೆಯಾಗಿದೆ. ಹೀಗೆ ಆಳುವ ವರ್ಗವು ತನ್ನ ಹಿತಾಸಕ್ತಿಗಾಗಿ ನಡೆಸಿದ ಕಲಹವು ಇಡೀ ಜನರ ಮೇಲೆ ಪ್ರಭಾವ ಬೀರುವುದನ್ನು ಕಾಣುತ್ತೇವೆ. ಈ ರೀತಿಯಾದ ಆಳುವ ವರ್ಗದ ಧೋರಣೆಯನ್ನು ವಿರೋಧಿಸುವ ಸಾಹಸವನ್ನು 'ದಾದಾ' ಮಾಡುತ್ತಾನೆ. ಒಟ್ಟಾರೆಯಾಗಿ ಇಡೀ ಕಾದಂಬರಿಯಲ್ಲಿ ದುಡಿಯುವ ಜನರ ಸಮಸ್ಯೆಗಳ

ಕುರಿತು ಬೆಳಕು ಚೆಲ್ಲುವುದಿಲ್ಲ. ಹಾಗೆಯೇ ದುಡಿವ ಜನರ ಹಸಿವಿನ ಸಮಸ್ಯೆ, ಬಡತನ ಸಮಸ್ಯೆಯು ಅವರಿಗೆ ಗಂಭೀರವಾದ ವಸ್ತುವಿಷಯವಾಗಿ ಕಾಣಿಸಿಲ್ಲ. ಆ ಕಾರಣದಿಂದ ಸಮಾಜದಲ್ಲಿರುವ ವರ್ಗ ಶ್ರೇಣೀಕರಣ ಮತ್ತು ವರ್ಗ ಅಸಮಾನತೆಯನ್ನು ಮುಚ್ಚಿಟ್ಟು ಯಾಂತ್ರಿಕವಾಗಿ ಆರ್ಥಿಕ ಅಸಮಾನತೆಯ ಕುರಿತ ಕಾದಂಬರಿಕಾರರ ನಿರೂಪಣೆ ಇರುವುದರಿಂದ ದುಡಿವ ಜನರ ವರ್ಗಪ್ರಜ್ಞೆಯನ್ನು ಆರೋಪಿಸಿದ ನಿರೂಪಣೆಯಾಗಿ ಕಾಣಿಸುತ್ತದೆ. ಆದ್ದರಿಂದ ಕಾದಂಬರಿಯು ಆಳುವ ವರ್ಗದ ಪ್ರಜ್ಞೆಯ ಭಾಗವಾಗಿದೆ ಎಂದು ಅನಿಸುತ್ತದೆ.

ನಿರಂಜನ ಅವರ 'ಚಿರಸ್ಮರಣೆ' ಕಾದಂಬರಿಯು ಕಯ್ಯೂರಿನ ಹೋರಾಟದ ಚರಿತ್ರೆಯನ್ನು ವಸ್ತುವಾಗಿ ನಿರೂಪಿಸಿದೆ. ದುಡಿಯುವ ಜನರು ತನ್ನ ಸ್ವಾತಂತ್ರ್ಯ ಮತ್ತು ಭೂಮಿಯ ಹಕ್ಕಿಗಾಗಿ ಊಳಿಗಮಾನ್ಯಶಾಹಿ ಭೂಮಾಲೀಕರು ಮತ್ತು ಬಂಡವಾಳಶಾಹಿವ್ಯವಸ್ಥೆಯ ವಿರುದ್ಧ ಸಂಘಟಿತ ಹೋರಾಟ ಮಾಡುವುದನ್ನು ಇಲ್ಲಿ ಕಾಣುತ್ತೇವೆ. ಮಾರ್ಕ್ಸ್‌ವಾದಿ ವಿಚಾರಧಾರೆಯ ದಟ್ಟ ಪ್ರಭಾವ ಕಾಣಿಸುತ್ತದೆ. ಊಳಿಗಮಾನ್ಯಶಾಹಿವ್ಯವಸ್ಥೆಯು ರೈತ ಕಾರ್ಮಿಕರ ಭೂಮಿಯ ಒಡೆತನ ಹೊಂದಿರುವ ಮಾಲೀಕರಾದ ನಂಬಿಯಾರ ಮತ್ತು ನಂಬೂದಿರಿ ರೈತಕಾರ್ಮಿಕರ ಭೂಮಿಯನ್ನು ಆಕ್ರಮವಾಗಿ ದೌರ್ಜನ್ಯದ ಮೂಲಕ ವಶಪಡಿಸಿಕೊಂಡು ಅವರನ್ನು ಭೂಹೀನರಾಗಿ ಮಾಡಿದ್ದಾರೆ. ಹಾಗೆಯೇ ತಮ್ಮ ಭೂಮಿಯಲ್ಲಿ ದುಡಿಸಿಕೊಂಡು ಅವರ ದುಡಿಮೆಯ ಪ್ರತಿಫಲವನ್ನು ವಂಚಿಸಿದ್ದಾರೆ. ಈ ರೀತಿಯಾದ ಆಳುವ ವರ್ಗದ ವ್ಯವಸ್ಥೆಯ ವಿರುದ್ಧ ದುಡಿಯುವ ಜನ ಸಮುದಾಯ ಕ್ರಾಂತಿಕಾರಿ ಶಿಕ್ಷಣ ಪಡೆದುಕೊಂಡು ಈ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಗೆ ಮುಂದಾಗುತ್ತಾರೆ. ಈ ವರ್ಗವನ್ನು ಕುರಿತು ನವೋದಯದ ಸಂದರ್ಭದ ಬರಹಗಾರರಗಿಂತ ಭಿನ್ನವಾಗಿಯೇ ಗ್ರಹಿಸಿದ್ದಾರೆ ಮತ್ತು ಅದನ್ನು ಸಾಹಿತ್ಯವಾಗಿ ನಿರೂಪಿಸಿರುವುದನ್ನು ನೋಡಬಹುದು. ಇಲ್ಲಿ ಊಳಿಗಮಾನ್ಯಶಾಹಿಯ ಸಾಮಾಜಿಕ ಸಂಬಂಧಗಳನ್ನು ಎಲ್ಲಿಯೂ ಸರಳಗೊಳಿಸದೆ, ಎಲ್ಲಿಯೂ ಯಾಂತ್ರಿಕಗೊಳಿಸದೆ ನಿರೂಪಿಸಿರುವುದನ್ನು ಕಾಣುತ್ತೇವೆ. ಹಾಗೆಯೇ ದುಡಿಯುವ ಜನರ ಆರ್ಥಿಕ, ರಾಜಕೀಯ, ಸಾಮಾಜಿಕ ಸಮಸ್ಯೆಗಳನ್ನು ದುಡಿಯುವ ವರ್ಗದ ಪ್ರಜ್ಞೆಯ ಚೌಕಟ್ಟಿನಲ್ಲಿ ಗ್ರಹಿಸಿರುವುದನ್ನು ಕಾಣುತ್ತೇವೆ.

ಬಡವರು ಮತ್ತು ಶ್ರೀಮಂತರ ನಡುವಿನ ಅಸಮಾನತೆ, ತಾರತಮ್ಯ ಮುಂತಾದ ಅನೇಕ ಸಮಸ್ಯೆಗಳು 'ಭೂಮಿಯ ಹಕ್ಕಿನ' ಭಾಗವಾಗಿಯೇ ಹುಟ್ಟಿಕೊಂಡಿವೆ. ಭೂಮಾಲೀಕರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಸಮಾಜದಲ್ಲಿ ಅಸಮಾನತೆ ಮತ್ತು ಶೋಷಣೆಯನ್ನು ಹರಡುತ್ತಿರುತ್ತಾರೆ. ಆದರೆ ಈ ಆಳುವ ವರ್ಗದ ಶೋಷಣೆಯ ವಿರುದ್ಧ ರೈತ ಕಾರ್ಮಿಕರು, ವಿದ್ಯಾರ್ಥಿ ಯುವಜನರು ಸಂಘಟಿತರಾಗಿ ಜಾಗೃತಿಯನ್ನು ಹೊಂದುವುದನ್ನು ಕಥನ ಚಿತ್ರಿಸುತ್ತದೆ. "ದುಡಿಯುವ ಜನರೆಲ್ಲ ಒಂದಾದರೆ, ಸುಲಿಯುವ ಜನರೆಲ್ಲ ಸೋತು ಹೋಗ್ತಾರೆ. ನಮ್ಮನ್ನು ಬಿಗಿದಿರುವ ಬೇಡಿಗಳು ಪುಡಿ ಪುಡಿಯಾಗ್ತವೆ".[೧೬] ಇಲ್ಲಿ ಜಾಗೃತಿಯ ಮೂಲಕ ವರ್ಗಹೋರಾಟ ಕರೆಯನ್ನು ಕಾದಂಬರಿ ಶಕ್ತಿಶಾಲಿಯಾಗಿ ನಿರೂಪಿಸುತ್ತದೆ. ಹಾಗೆಯೇ "ಇನ್ನೊಂದ್ಸಲ ಹೀಗೆಲ್ಲ ಬಿಟ್ಟ

ಚಾಕರಿ ಮಾಡೋದಕ್ಕೆ ಹೋಗು, ನಿನ್ನ ಬೆನ್ನಿನ ಚರ್ಮ ಸುಲಿತೇನೆ"[೧೮] ಎಂದು ಚಿರಕುಂಡನ ತಾಯಿ ಎಚ್ಚರಿಕೆಯ ಮಾತುಗಳು ಊಳಿಗಮಾನ್ಯಶಾಹಿವ್ಯವಸ್ಥೆಯ ವಿರುದ್ಧ ಜಾಗೃತಿ ಸಂಕೇತವಾದರೆ, ಇದರ ಜೊತೆಗೆ ಮಾಸ್ತರ ಹೇಳುವ ಪಾಠವನ್ನು ಗಮನಿಸಿದರೆ "ಈ ಮಣ್ಣು ಯಾರದು? ನಮ್ಮದು, ಇದು ನಮ್ಮ ತಾಯ್ನೆಲ್ಲ. ಈ ದೇಶ ಯಾರದು? ನಮ್ಮದು. ಇದು ನಮ್ಮ ರಾಷ್ಟ್ರ, ಹೊಲ ಯಾರದು? ಉಳುವವನದು, ಉಳುವವನೇ ಹೊಲದ ಒಡೆಯ"[೧೯] ಎಂದು ಮಾಸ್ತರರ ಮಾತುಗಳು ದುಡಿಯುವ ವರ್ಗದ ವರ್ಗಪ್ರಜ್ಞೆಯನ್ನು ತೋರಿಸುತ್ತವೆ. ಹೀಗೆ ಹೋರಾಟಗಾರರು ಗಲ್ಲಿಗೇರಿಸುವ ಮೊದಲು ಹೇಳುವ ಮಾತುಗಳು ಅವರ ಗುರಿಯ ಸಂಕೇತವಾಗಿದೆ. ಸಾಮ್ರಾಜ್ಯಶಾಹಿ ನಾಶವಾಗೋದನ್ನೇ ನೋಡಿ ಸಾಯ್ಬೇಕಂತ ನಮ್ಮ ಆಶೆ ಎಂದು ಹೇಳುವುದು. ಸಮಾಜವಾದ ಕಲ್ಪನೆಯನ್ನು ಮುಂದಿಡುತ್ತದೆ. ಒಟ್ಟಾರೆಯಾಗಿ ದುಡಿವ ಜನರ ಸಮಸ್ಯೆ ಇರುವುದು ಸಂಪತ್ತಿನ ಅಸಮಾನ ಹಂಚಿಕೆ ಮತ್ತು ವರ್ಗಶ್ರೇಣೀಕರಣದಿಂದ. ಆದ್ದರಿಂದ ಭೂಮಿಯ ಹಕ್ಕಿನ ಸಮಾನ ಹಂಚಿಕೆ ದುಡಿವ ಜನರ ಬಿಡುಗಡೆಯ ದಾರಿಯಾದರೆ, ಅದಕ್ಕಾಗಿ ವರ್ಗಶತ್ರುಗಳ ವಿರುದ್ಧ ವರ್ಗಹೋರಾಟವನ್ನು ನಿರಂತರವಾಗಿ ಮಾಡಬೇಕು ಎಂಬುದು ಕಾದಂಬರಿಯ ನಿಲುವಾಗಿದೆ. ಈ ಮೂಲಕ ದುಡಿವ ಜನರನ್ನು ಶೋಷಕ ವ್ಯವಸ್ಥೆಯಿಂದ ಬಿಡುಗಡೆ ಮಾಡಬಹುದು ಎಂದು ಕಾದಂಬರಿಯು ಒತ್ತಾಯಿಸುತ್ತದೆ.

ನವ್ಯ ಸಾಹಿತ್ಯ ಪಂಥದಲ್ಲಿ ಬಂದಿರುವ ಅನೇಕ ಕಾದಂಬರಿಗಳು ಉತ್ಪಾದನಾ ಸಂಬಂಧಕ್ಕೆ ಮಹತ್ವವನ್ನು ಕೊಟ್ಟಿಲ್ಲದಿರುವುದನ್ನು ಕಾಣುತ್ತೇವೆ. ಈ ಸಂದರ್ಭದಲ್ಲಿ ವ್ಯಕ್ತಿನಿಷ್ಠ ನಿರೂಪಣೆಯೇ ಹೆಚ್ಚಾಗಿದೆ. ಪೂರ್ಣಚಂದ್ರ ತೇಜಸ್ವಿ ಅವರ 'ಕರ್ವಾಲೋ' ಕಾದಂಬರಿಯಲ್ಲಿ ಮಂದಣ್ಣ ಸಾಮಾನ್ಯ ವ್ಯಕ್ತಿ. ಕೂಲಿ ಮಾಡಿಕೊಂಡು ಬದುಕುವಂತಹವನು. ಇವನು ಬಯಸುವ ಬದುಕು ಹಾಗೂ ಅವನ ಮೂಲಕ ನಿರೂಪಕನಿಗೆ ತೋರುವ ಪರಿಸರದ ಅದ್ಭುತ ನೋಟಗಳ ಅನ್ವೇಷಣೆಯನ್ನು ನಿರೂಪಕರು ಚಿತ್ರಿಸಿದ್ದಾರೆ. ಇದು ವಿಕಾಸವಾದದ ಮಾದರಿಯಲ್ಲಿ ಕಂಡರೂ ಅದಕ್ಕೆ ಸಾಹಿತ್ಯಕ ಮಾದರಿಯನ್ನು ಜೋಡಿಸುತ್ತಾರೆ. ಸಾಮಾನ್ಯ ವ್ಯಕ್ತಿಯು ಹೇಗೆ ಪ್ರಕೃತಿಯ ನಡುವಿನ ಅನೇಕ ಜ್ಞಾನಗಳನ್ನು ತಿಳಿಸಿದುಕೊಂಡಿರುತ್ತಾನೆ ಎಂಬುದನ್ನು ನಿರೂಪಿಸುತ್ತದೆ. ಅದೇ ಹೊತ್ತಿನಲ್ಲಿ ಉತ್ಪಾದನ ಸಂಬಂಧಗಳನ್ನು ನಿರೂಪಕರು ತರುವುದಿಲ್ಲ. ಇದರ ಮೂಲಕ ಶ್ರಮದ ದುಡಿಮೆಯನ್ನು ಗೌಣಗೊಳಿಸುತ್ತಾರೆ. ಇಲ್ಲಿ ವರ್ಗಅಸಮಾನತೆ ಕಾಣಿಸಿದರೂ ವರ್ಗಖಚಿತೆ ಇಲ್ಲ. ಆದ್ದರಿಂದ ದುಡಿಯುವ ವರ್ಗವನ್ನು ಕುರಿತು ಮೇಲುನೋಟಕ್ಕೆ ಗ್ರಹಿಸುವುದು ಒಂದು ರೀತಿಯಾದ ಪಲಾಯನದಂತೆ ಕಾಣಿಸುತ್ತದೆ. ಪ್ರಕೃತಿಯ ವಿಸ್ಮಯಗಳಲ್ಲಿ ಹಾರುವ ಓತಿಗೆ ಅಷ್ಟು ಪ್ರಾಮುಖ್ಯತೆ ಕೊಡುವ ನಿರೂಪಕರು ಸಮಾಜದಲ್ಲಿ ಇರುವ ವರ್ಗ ಅಸಮಾನತೆಯ ಕುರಿತು ಮಾತನಾಡದೆ ಇರುವುದನ್ನು ಕಾಣುತ್ತೇವೆ. ಆದರೆ ಯು.ಆರ್. ಅನಂತಮೂರ್ತಿ ಅವರ 'ಸಂಸ್ಕಾರ' ಮತ್ತು 'ಭಾರತೀಪುರ'ದಲ್ಲಿ ಇದಕ್ಕಿಂತ ಸ್ವಲ್ಪ ಭಿನ್ನವಾಗಿ ನಿರೂಪಣೆ ಇದೆ.

'ಭಾರತೀಪುರ'ದಲ್ಲಿ ದಲಿತ ವರ್ಗವು ಭೂಹೀನರು ಮತ್ತು ಅಸ್ಪೃಶ್ಯರಾಗಿದ್ದಾರೆ. ಇವರು ಭೂಮಾಲೀಕ ವರ್ಗದ ಅಧೀನವಾಗಿ ಬದುಕನ್ನು ನಿರ್ವಹಿಸುವ ಜನರನ್ನು ದೇವಾಲಯಗಳ ಒಳಗೆ ಪ್ರವೇಶವನ್ನು ಬಯಸುವ ಮೇಲ್ವರ್ಗವನ್ನು ಕಾಣುತ್ತೇವೆ. ಸ್ಪೃಶ್ಯ-ಅಸ್ಪೃಶ್ಯರ ನಡುವಿನ ಕಂದಕವನ್ನು ಹೋಗಲಾಡಿಸುವ ಪ್ರಯತ್ನಗಳಿವೆ. ಮೇಲ್‌ವರ್ಗದವರಿಗೆ ಕಣ್ಣಿಗೆ ಬೀಳುವುದೇ ತಪ್ಪೇನೋ ಎನ್ನುವಂತಹ ರೀತಿಯಲ್ಲಿ ಜನರು ಬದುಕುತ್ತಿರುವುದನ್ನು ಕಂಡರೆ ಶೋಷಣೆ ಪ್ರಮಾಣವು ಎಷ್ಟಿರಬಹುದು ಎಂದು ನಿರ್ಧರಿಸಬಹುದು. ಆದರೆ ಜಗನ್ನಾಥನು ದಲಿತರಿಗೆ ಅಕ್ಷರ ಕಲಿಸಲು ಮುಂದಾಗುತ್ತಾನೆ ಮತ್ತು ದೇವಾಲಯದ ಒಳಗೆ ಪ್ರವೇಶವನ್ನು ಬಯಸುತ್ತಾನೆ. ಈ ರೀತಿಯಾಗಿ ಸವರ್ಣೀಯರು ಸುಧಾರಣೆಯನ್ನು ಬಯಸುವುದು ಇಲ್ಲಿ ಕಾಣಬಹುದು. ಮಂಜುನಾಥನ ದೇವಾಲಯದ ಒಳಗೆ ಪ್ರವೇಶವೇ ನಿರೂಪಕರಿಗೆ ಮುಖ್ಯವಾಗಿದೆ. ಜೀತ ಮಾಡಿಸಿಕೊಳ್ಳುವ ಮಾಲೀಕ ಅವರ ಸುಧಾರಣೆ ಬಯಸುವುದನ್ನು ಒಂದು ರೀತಿಯಾದ ವ್ಯಂಗ್ಯವಾಗಿ ಕಾಣಿಸುತ್ತದೆ. ಭೂಮಿಯ ಹಕ್ಕಿನಿಂದ ವಂಚನೆಗೆ ಒಳಗಾಗಿರುವ ಜನರನ್ನು ಶೋಷಣೆ ಮಾಡಿ ಬದುಕುವ ಆಳುವ ವರ್ಗವು ಅವರನ್ನು ದೇವಾಲಯಗಳ ಪ್ರವೇಶವನ್ನು ಒತ್ತಾಯಿಸುತ್ತದೆ. ಆ ಮೂಲಕ ದುಡಿವ ಜನರ ಹಕ್ಕನ್ನು, ಅವರ ಸ್ವಾತಂತ್ರ್ಯವನ್ನು ಕಾದಂಬರಿಯು ನಿರಾಕರಿಸುವುದನ್ನು ಕಾಣುತ್ತೇವೆ. ಆದರೆ 'ಸಂಸ್ಕಾರ'ದಲ್ಲಿ ಈ ಬಗೆಯ ಸಂಬಂಧಗಳು ಇಲ್ಲ. ಬ್ರಾಹ್ಮಣ ಮತ್ತು ಶೂದ್ರ ಸಂಸ್ಕೃತಿಯ ನಡುವಿನ ಜನರ ಬದುಕಿನ ರೀತಿಯನ್ನು ವಿವರಿಸುತ್ತಲೇ ಮನುಷ್ಯನ ದೇಹದ ಬಯಕೆಯನ್ನು ನಿರೂಪಿಸುತ್ತದೆ. ಮೇಲ್‌ವರ್ಗದ ಜನರು ಆಧುನಿಕತೆಯ ಪ್ರಭಾವದಿಂದ ಶೂದ್ರಸಂಸ್ಕೃತಿಯ ಜನರ ನಡುವೆ ಯಾವ ಬಗೆಯ ಸಂಬಂಧಗಳನ್ನು ಇಟ್ಟುಕೊಂಡಿದ್ದರು, ಈ ಸಂಬಂಧಗಳು ಮನುಷ್ಯರ ನಡುವೆ ಸ್ವಾರ್ಥ, ದ್ವೇಷಕ್ಕೆ ಕಾರಣವಾಗುವ ಪ್ರಸಂಗಗಳಿವೆ. ಆದರೆ ಇಲ್ಲಿ ಕಾದಂಬರಿಯು ದುಡಿಯುವ ಜನರ ಕುರಿತು ಯಾವುದೇ ಅಂಶವನ್ನು ನಿರೂಪಿಸಲು ಮುಂದಾಗುವುದಿಲ್ಲ. 'ಸಂಸ್ಕಾರ'ವು ಜನರ ಜೀವನ ಆಲೋಚನೆಯನ್ನು ಬದಲಾಯಿಸದೆ ಇರುವ ಸ್ಥಿತಿಯನ್ನು ಯಥಾವತ್ತಾಗಿ ಗ್ರಹಿಸಿದೆ.

"ದುಡಿಯುವ ವರ್ಗದ ಶ್ರಮದ ಉತ್ಪನ್ನವು ಅದರಿಂದ ಪ್ರತ್ಯೇಕಗೊಂಡು ಅದರ ಶೋಷಣೆಯ ಸಾಧನವಾಗುವ ವಿಪರೀತ ಆರ್ಥಿಕ ಸಂಬಂಧದ ಪರಿಣಾಮವಾಗಿ ವ್ಯಕ್ತವಾಗುವ ಭಾವಸಂಕೀರ್ಣಕ್ಕಿಂತ ಇದು ವ್ಯತಿರಿಕ್ತವಾಗಿದೆ. ಖಾಸಗಿ ಆಸ್ತಿಯನ್ನು ಸಂರಕ್ಷಿಸುವ ಬಂಡವಾಳಶಾಹಿ ಅಥವಾ ಊಳಿಗಮಾನ್ಯ ವ್ಯವಸ್ಥೆ, ಮಿಗತೆಯ ಉತ್ಪನ್ನವನ್ನು ದುಡಿಯುವ ವರ್ಗದಿಂದ ಕಿತ್ತುಗೊಂಡು ಅದನ್ನು ಖಾಸಗೀಕರಣ ಮಾಡುವುದಕ್ಕೆ ಲಗತ್ತಾಗಿ ದುಡಿಯುವ ವರ್ಗದ ಈ ಅನಾಥ ಪ್ರಜ್ಞೆಯನ್ನು ಪರಿಭಾವಿಸಬೇಕಾಗಿದೆ".[೨೦] ಹೀಗೆ ನವ್ಯದ ಕಾದಂಬರಿಗಳು ದುಡಿಯುವ ವರ್ಗದ ವರ್ಗಪ್ರಜ್ಞೆಯನ್ನು ನಿರಾಕರಣೆ ಮಾಡಿರುವುದು ಈ ಸಂದರ್ಭದ ಸಾಹಿತ್ಯಿಕ ಹಿನ್ನೆಡೆ ಕಾರಣವಾಗಿರುವುದು ಎಂದು ಹೇಳಬಹುದು. ಹಾಗಾಗಿ ದುಡಿಯುವ ವರ್ಗದ ಬಿಡುಗಡೆಗೆ ಯಾವುದೇ ವೈಚಾರಿಕ ನಿಲುವುಗಳು ಕಾಣಿಸುವುದಿಲ್ಲ. ಸಮಾಜದಲ್ಲಿ ಇರುವ ವರ್ಗ

ಅಸಮಾನತೆಯನ್ನು ಸೂಕ್ಷ್ಮವಾಗಿ ಗ್ರಹಿಸಿದೆ. ವ್ಯಕ್ತಿವಾದದ ಮೂಲಕ ಸಾಹಿತ್ಯ ಕೃತಿಗಳು ಹೆಚ್ಚಾಗಿ ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ ವಿನಹ ವರ್ಗಪ್ರಜ್ಞೆಯ ಚೌಕಟ್ಟಿಗೆ ಬರದೆ ಇರುವುದು ನನ್ನ ಎಲ್ಲಾ ಆರೋಪ ಕಾರಣವಾಗಿದೆ.

೭೦ರ ದಶಕದಲ್ಲಿ ರಚನೆಯಾದ ಅನೇಕ ಕಾದಂಬರಿಗಳು ದುಡಿಯುವ ವರ್ಗದ ಬದುಕಿನ ವಿವಿಧ ಸ್ತರಗಳನ್ನು ನಿರೂಪಿಸಿವೆ. ನವೋದಯ ಮತ್ತು ಪ್ರಗತಿಶೀಲ ಲೇಖಕರ ರೀತಿಯಲ್ಲಿ ಬಂಡಾಯ ಲೇಖಕರು ಕೂಡ ಭೂಮಿಯ ಒಡೆತನದ ಪ್ರಶ್ನೆಯನ್ನು ತರುತ್ತಾರೆ. ಈ ಸಂದರ್ಭದ ಕಾದಂಬರಿಗಳಲ್ಲಿ ದಲಿತ ವರ್ಗವು ಭೂಮಾಲೀಕ ವರ್ಗದ ಹೊಲಗದ್ದೆಗಳಲ್ಲಿ ಜೀತಗಾರರಾಗಿಯೇ ದುಡಿಯುವ ಚಿತ್ರಣವನ್ನು ಮುಂದಿಡುತ್ತವೆ. ಭೂಮಿಯ ಒಡೆತನ ಇಲ್ಲದೆ ಭೂಹೀನರಾಗಿರುವುದನ್ನು ಇಲ್ಲಿ ಗುರುತಿಸಬಹುದು. ಇದರ ಜೊತೆಗೆ ಜೀತಪದ್ಧತಿಯ ಕುರಿತು ಅನೇಕ ಕಾದಂಬರಿಗಳು ರಚನೆಯಾಗಿದ್ದು ಕಾಣುತ್ತೇವೆ. ಹೊರೆಯಾಲ ದೊರೆಸ್ವಾಮಿಯವರ 'ಕೊಳೆ' ಕಾದಂಬರಿ ಜೀತಪದ್ಧತಿಯನ್ನೇ ಕೇಂದ್ರವಸ್ತುವಾಗಿ ನಿರೂಪಿಸಿವೆ. ಇಲ್ಲಿ ಬಾಲ ಜೀತಗಾರನೊಬ್ಬವನ್ನು ಕೇಂದ್ರ ಪಾತ್ರವಾಗಿ ಇಟ್ಟುಕೊಂಡು ಜೀತಪದ್ಧತಿಯ ಕ್ರೌರ್ಯವನ್ನು ಅನಾವರಣ ಮಾಡುತ್ತದೆ. ಹಾಗೆಯೇ ಬರಗೂರರ 'ಸೂರ್ಯ' ಕಾದಂಬರಿಯಲ್ಲಿ ಕೂಡ ಕರಿಯನು ಊರಗೌಡನ ಮನೆಯ ಜೀತದ ಆಳಾಗಿದ್ದಾನೆ. ಹಗಲೂ-ರಾತ್ರಿ ಗೌಡನ ಮನೆ ಕೆಲಸ ಮಾಡುವುದಲ್ಲದೆ ತನ್ನ ಮನೆಗೆ ಹೋಗಬೇಕಾದರೂ ಗೌಡನ ಅಪ್ಪಣೆ ಬೇಕಾಗಿತ್ತು. ಹೀಗೆ ಮೇಲ್ವರ್ಗದ ಜನರು ಅಥವಾ ಆಳುವ ವರ್ಗವು ತನ್ನ ಭೂಮಿಯಲ್ಲಿ ದುಡಿಯುವ ಜನರನ್ನು ದುಡಿಸಿಕೊಂಡಿದೆ. ಅವರನ್ನು ಶೋಷಣೆ ಮಾಡಿದೆ. ತನ್ನ ಸಿಟ್ಟನ್ನು ಭೂಮಾಲೀಕ ಈ ಜೀತಗಾರರ ಮೇಲೆ ತೀರಿಸಿಕೊಳ್ಳುವ ಕ್ರೂರವಾದ ಸ್ಥಿತಿಯನ್ನು ಕಾದಂಬರಿಗಳು ನಿರೂಪಿಸುತ್ತವೆ. ಇಲ್ಲಿ ಕರಿಯ ಮತ್ತು ಗೌಡನ ಹೆಂಡತಿ ಸೀತಕ್ಕ ನಡುವಿನ ಸಂಬಂಧವು ಕರಿಯನನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ಸೂಚನೆ ಕೊಡುತ್ತವೆ. ಇದರಿಂದ ಕರಿಯ ಗೌಡನ ಪಾಲಿನ ವರ್ಗ ಶತೃವಾಗುತ್ತಾನೆ. ಹೀಗೆ ಕಾದಂಬರಿಯು ದುಡಿವ ಜನರ ಸ್ಥಿತಿಗತಿಯನ್ನು ಹೇಳುತ್ತದೆ. ಆದರೆ ಅವನ ಹಕ್ಕಿನ ಪ್ರಶ್ನೆ, ಆಯ್ಕೆ ಪ್ರಶ್ನೆಯನ್ನು ಕಥನ ಮಾತನಾಡುವುದಿಲ್ಲ. ಹೀಗೆ ಆರ್ಥಿಕ ಅಸಮಾನತೆಯಿಂದ ಅಥವಾ ಜಾತಿ ಶೋಷಣೆಯಿಂದ ದುಡಿವ ಜನರ ಬಿಡುಗಡೆಯ ಯಾವ ಸೂಚನೆ ಕಾಣಿಸುವುದಿಲ್ಲ.

ಇದೇ ಸಂದರ್ಭದಲ್ಲಿ ಜಾರಿಯಾದ ಭೂ ಸುಧಾರಣಾ ಕಾಯ್ದೆಗಳು ಕುರಿತು ಸಹ ಕಾದಂಬರಿಗಳು ಬೆಳಕು ಚೆಲ್ಲಿವೆ. ಚೆನ್ನಣ್ಣ ವಾಲೀಕಾರ ಅವರ 'ಒಂದು ಹೆಣ್ಣಿನ ಒಳಜಗತ್ತು' ಆರ್.ವಿ. ಭಂಡಾರಿಯವರ 'ಬೆಂಕಿಯ ಮಧ್ಯೆ', ಕು.ವೀ. ಅವರ 'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಮುಂತಾದ ಕಾದಂಬರಿಗಳನ್ನು ಗಮನಿಸಿದ್ದರೆ ದಲಿತ ಸಮುದಾಯಗಳಿಗೆ ಅಲ್ಪಸ್ವಲ್ಪ ಭೂಮಿಯ ಆಶೆಯನ್ನು ಮುಂದಿಟ್ಟ ಸರಕಾರದ ಯೋಜನೆಗಳು ಪ್ರಯೋಜನ ಕುರಿತು ಚರ್ಚಿಸಿವೆ. 'ಬೆಂಕಿಯ ಮಧ್ಯ' ಕಾದಂಬರಿಯಲ್ಲಿ ಬಿ.ಡಿ.ಓ. ಅಧಿಕಾರಿ ಮುನಿಯಪ್ಪ, ತಾಲೂಕು ಬೋರ್ಡ್ ಅಧ್ಯಕ್ಷ ಚಿಕ್ಕಣ್ಣ ಹಾಗೂ ದಲಿತರ ಅಘೋಷಿತ ನಾಯಕ ಪಾವಸ್ಕರನ ನೆರವಿನಿಂದ 'ಕುಸ್ಲು' ದೊಡ್ಡಣ್ಣ

ಹೆಗ್ಡೇರ ಮನೆಯ ಜೀತ ತೊರೆದು, ಕೊಣ್ಣೂರಿನಲ್ಲಿ ಎರಡೆಕರೆ ಜಮೀನು ಸಾಗುವಳಿ ಮಾಡಿಕೊಂಡನು. ಹಗಲು ಬೇರೆಡೆ ದುಡಿದು ರಾತ್ರಿ ಗಂಡ ಹೆಂಡತಿ ಸೇರಿ ಬಂಜರು ಭೂಮಿಯಲ್ಲಿ ಬೆವರು ಹರಿಸಿ ಅದನ್ನು ಫಲವತ್ತಾದ ಭೂಮಿಯಾಗಿಸುತ್ತಾರೆ. ಈ ಭೂಮಿಯು ಜಮೀನುದ್ದಾರ ಹೆಗ್ಡೇರ ಸಂಬಂಧಿಕರ ಕಣ್ಣಿಗೆ ಬೀಳುತ್ತದೆ. ಇವನ ಹಣದ ಬಲದಿಂದ ಜಮೀನನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಆದರೆ ಈ ದಲಿತ ವರ್ಗದ ಅಧಿಕಾರಿ ವರ್ಗಗಳ ನೆರವಿನಿಂದ ಮತ್ತು ದಲಿತ ಸಂಘಟನೆ ಶಕ್ತಿಯಿಂದ ಭೂಮಿಯ ಒಡೆತನ ಉಳಿಸಿಕೊಳ್ಳಬಹುದು ಎನ್ನುವ ಭಾವನೆಯು ಕಥನದಲ್ಲಿ ಗುರುತಿಸಬಹುದು.

ಚೆನ್ನಣ್ಣ ವಾಲೀಕಾರ ಅವರ 'ಒಂದು ಹೆಣ್ಣಿನ ಒಳಜಗತ್ತು' ಕಾದಂಬರಿಯಲ್ಲಿ ಸಂಗಣ್ಣಗೌಡ ಸರಕಾರ ತಂದ ಭೂಸೀಲಿಂಗ್ ಕಾಯ್ದೆಯಿಂದ ತನ್ನ ಜಮೀನು ಉಳಿಸಿಕೊಳ್ಳಲು ತಮ್ಮ ಮನೆಯಲ್ಲಿ ದುಡಿಯುತ್ತಿದ್ದ ತಳವಾರ ಮಲ್ಲ, ಬ್ಯಾಡರ ಎಂಕ, ಕುರುಬರ ಬೀರ, ಹೊಲೇರ ಶಿವ, ಕಟುಗರ ಬ್ಯಾಬ್ಯಾರ ಹೆಸರಲ್ಲಿ ಖಾತೆ ಮಾಡಿಸುತ್ತಾನೆ. ಇಲ್ಲಿ ಅಸ್ಪೃಶ್ಯ ಜನಾಂಗವು ಭೂ ಒಡೆಯರಾದರೂ ಈ ಒಡೆತನ ಕೇವಲ ಸರಕಾರದ ಕಾಗದ ಮೇಲಿದೆ ಹೊರತು ಈ ದುಡಿಯುವ ಜನರ ಸ್ವಾಧೀನಕ್ಕೆ ಬರದೆ ಇರುವುದನ್ನು ಕಾಣುತ್ತೇವೆ. ಸರ್ಕಾರದಿಂದ ಭೂಮಿಯು ಮಂಜೂರು ಆದರೂ ಊಳಿಗಮಾನ್ಯಶಾಹಿ ಭೂಮಾಲೀಕರು ದುಡಿಯುವ ಜನರಿಗೆ ಇದರ ಹಕ್ಕು ಸಿಗದ ರೀತಿಯಲ್ಲಿ ರಾಜಕೀಯ ತಂತ್ರವನ್ನು ಹೆಣೆಯುವುದು ಕಾಣಿಸುತ್ತದೆ. ಈ ಮೂಲಕ ಇರುವ ವ್ಯವಸ್ಥೆಯನ್ನು ಯಥಾಸ್ಥಿತಿಯನ್ನು ಇರುವಂತ ಮತ್ತು ವರ್ಗ ಅಸಮಾನತೆಯನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ಆಳುವ ವರ್ಗ ಮಾಡುತ್ತಿರುವುದನ್ನು ಕಥನ ನಿರೂಪಿಸುತ್ತದೆ.

ಕು.ವೀ. ಅವರ 'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಕಾದಂಬರಿಯಲ್ಲಿಯು ಕೂಡ ದಿಬ್ಬನು ಭೂಮಾಲೀಕರ ಮನೆಯಲ್ಲಿ ದುಡಿಯುವಾತ, ಇವನ್ನು ಗೇಣಿಗಾಗಿ ಭೂಮಿ ಉಳುಮೆ ಮಾಡಿಕೊಂಡು ಬರುತ್ತಿರುತ್ತಾನೆ. ಸರಕಾರದ ಲ್ಯಾಂಡ್ ಟ್ರಿಬ್ಯೂನಲ್ ಆಕ್ಟ್ ಬಂದಾಗ ದಿಟ್ಟ ತಾನು ಭೂ ಒಡೆಯನಾಗುವ ಕನಸು ಕಾಣುತ್ತಾನೆ. ಕಂದಾಯ ಕಟ್ಟಿದ ರಶೀದಿಗಳೊಂದಿಗೆ, ವಿಲೇಜ್ ಅಕೌಂಟೆಂಟಿಗೆ ಐನೂರು ರೂಪಾಯಿ ಲಂಚವನ್ನು ಕೊಟ್ಟು ಸರಕಾರದ ಆದೇಶವನ್ನು ಕಾಯುತ್ತಾನೆ. ಅವನ ಪ್ರಯತ್ನಕ್ಕೆ ನ್ಯಾಯವು ಸಿಗುವುದಿಲ್ಲ. ಹೀಗೆ ಆಳುವ ವರ್ಗವು ದುಡಿಯದ ಜನರನ್ನು ಶೋಷಣೆ ಮಾಡಿ, ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತದೆ. ದುಡಿಯುವ ಜನರಿಗೆ ಜಾಗೃತಿ ಅರಿವು ಬಂದರೂ ಕೂಡ ಅವರ ಹಕ್ಕುಗಳನ್ನು ಪಡೆದುಕೊಳ್ಳುವ ಶಕ್ತಿಯುತವಾದ ಆಲೋಚನೆಗಳು ಇಲ್ಲದೆ ಇರುವುದು. ದುಡಿಯುವ ಜನರ ಬಿಡುಗಡೆಗೆ ಅಡ್ಡಿಯಾಗುತ್ತದೆ ಎಂಬ ನಂಬಿಕೆ ಇದೆ. ಆದರೆ 'ಬೆಂಕಿಯ ಮಧ್ಯೆ' ಕಾದಂಬರಿಯಲ್ಲಿ ದುಡಿವ ಜನರ ಸಂಘಟಿತ ಪ್ರಯತ್ನ ಮತ್ತು ತನ್ನ ವರ್ಗ ಅಧಿಕಾರಿಗಳ ಬೆಂಬಲ ಹಾಗೂ ಶಿಕ್ಷಣದ ಕಲಿಕೆಯ ಮೂಲಕ ಭೂಮಿಯ ಹಕ್ಕನ್ನು ಉಳಿಸಿಕೊಳ್ಳಲು ಸಾಧ್ಯವೆಂದು ಕಥನ ನಿರೂಪಿಸುತ್ತದೆ. ಬಂಡಾಯ ಸಾಹಿತ್ಯ ಪಂಥದಲ್ಲಿ ಬಂದಿರುವ ಕಾದಂಬರಿಗಳಲ್ಲಿ ದುಡಿಯುವ ಜನರ ಜೀತಪದ್ಧತಿ ಕೂಲಿ

ಕೆಲಸ ಮುಂತಾದ ವೃತ್ತಿ ಕೆಲಸಗಳನ್ನು ವಿವರಿಸಿವೆ. ಇಲ್ಲಿ ದುಡಿಯುವವರು ದಲಿತ ಸಮುದಾಯಗಳೇ. ಆದರೆ ದಲಿತ ಚಳುವಳಿಯ ಪ್ರಭಾವದಿಂದ ಅವರನ್ನು ಜಾಗೃತಿಗೊಳಿಸುವ ಪ್ರಯತ್ನ ಇದೆ. ಹಾಗೆಯೇ ಶೋಷಕ ವರ್ಗದ ಅಧೀನವಾಗಿ ಬದುಕನ್ನು ನಿರ್ವಹಿಸಿಕೊಂಡು ಬರುವಾಗ ನಾವುಗಳು ಎಷ್ಟು ಕಾಲ ಮುಗ್ಧರಾಗಿರುತ್ತೇವೋ ಅಲ್ಲಿಯವರೆಗೆ ಶೋಷಿತರಾಗಿಯೇ ಉಳಿಯುತ್ತೇವೆ. ಆದ್ದರಿಂದ ಆಧುನಿಕ ಶಿಕ್ಷಣ ಪಡೆಯಬೇಕು. ಅಧಿಕಾರದಲ್ಲಿ ಇರುವ ದುಡಿಯುವ ವರ್ಗದ ಪ್ರತಿನಿಧಿಗಳು ತಮ್ಮ ವರ್ಗ ಮತ್ತು ಜನಾಂಗದ ಪ್ರಗತಿಗಾಗಿ ದುಡಿದರೆ, ಆ ವರ್ಗ ನಂಬಿಕೆ ಇಲ್ಲಿದೆ.

ದಲಿತ ಸಾಹಿತ್ಯ ಘಟ್ಟದಲ್ಲಿ ಬಂದಿರುವ ಕಾದಂಬರಿಗಳನ್ನು ನೋಡುವುದಾದರೆ ದೇವನೂರ ಮಹಾದೇವರ 'ಒಡಲಾಳ' ಮತ್ತು 'ಕುಸುಮಬಾಲೆ', ಮುಳ್ಳೂರು ನಾಗರಾಜ 'ಮರಣ ಮಂಡಲ ಮಧ್ಯೆದೊಳಗೆ', ಮ.ನ. ಜವರಯ್ಯ ಅವರ 'ಮಾಗಿ', ಅರವಿಂದ ಮಾಲಗತ್ತಿಯವರ 'ಕೌರ್ಯ', ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಗಳಲ್ಲಿ ದಲಿತ ವರ್ಗದ ಮೂಲ ಸಮಸ್ಯೆಗಳಿಗೆ ಹೆಚ್ಚು ಹೊತ್ತುಕೊಟ್ಟು ನಿರೂಪಿಸಿವೆ. 'ಒಡಲಾಳ' ಕಾದಂಬರಿಯಲ್ಲಿ ಸಾಕವ್ವನ ಕುಟುಂಬದ ಮೇಲೆ ಭೂಮಾಲೀಕ ವರ್ಗದ ದೌರ್ಜನ್ಯ ಮತ್ತು ಶೋಷಣೆ ನಿರಂತರವಾಗಿ ನಡೆಯುತ್ತಿರುವುದನ್ನು ಸೂಕ್ಷ್ಮವಾಗಿ ವಿಶ್ಲೇಷಿಸುತ್ತದೆ. ಸಾಕವ್ವನು ಹುಂಜವನ್ನು ಕಳೆದುಕೊಂಡಿದ್ದರಿಂದ ಅದರ ಹುಡುಕಾಟದಲ್ಲಿ ಸಾಕವ್ವ ಕಳೆದರೆ ಅವಳ ಮಗಳಾದ ಗೌರಮ್ಮ ತಂಗಿ ಪುಟ್ಟಗೌರಿ ಕೂಲಿ ಕೆಲಸಕ್ಕೆ ಹೋಗುತ್ತಾರೆ. ಇವರಿಗೆ ವರ್ಷವಿಡೀ ಕೂಲಿ ಸಿಗುವುದಿಲ್ಲ. ಅವರನ್ನು ಆಳುವ ವರ್ಗ ಕೂಲಿ ಕೆಲಸಕ್ಕೆ ಕರೆಯುವುದಿಲ್ಲ. ಈ ರೀತಿಯಾದ ವರ್ಗ ಅಸಮಾನತೆ ಕಾಣುತ್ತೇವೆ.

**ಕೊನೆ ಟಿಪ್ಪಣಿಗಳು**


೧. ವಿಜಯಾ ಸುಬ್ಬರಾಜ್, ೨೦೦೫, **ಸಮಾಲೋಚನೆ**, ಶಕ್ತಿ ಪ್ರಿಂಟರ್ಸ್ ಆ್ಯಂಡ್ ಪಬ್ಲಿಷರ್ಸ್, ಬೆಂಗಳೂರು, ಪು. ೧೪.

೨. ಶಿವರುದ್ರ ಕಲ್ಲೋಳಿಕರ, ೧೯೯೪, **ಹೊಲಗೇರಿಯ ರಾಜಕುಮಾರ**, ಅನಾರ್ಯ ಪ್ರಕಾಶನ, ಧಾರವಾಡ, ಪು. ೮೭

೩. ಭೂಮಿಗೌಡ, ೨೦೦೪, **ಕನ್ನಡ ಕಾದಂಬರಿಗಳಲ್ಲಿ ದಲಿತ ಜಗತ್ತು**, ಚೇತನ ಬುಕ್‌ಹೌಸ್, ಮೈಸೂರು, ಪು. ४೯.

೪. ಕುವೆಂಪು, ೧೯೯೭, **ಮಲೆಗಳಲ್ಲಿ ಮದುಮಗಳು**, ಉದಯರವಿ ಪ್ರಕಾಶನ, ಮೈಸೂರು, ಪು. ೫೩೬

೫. ನಿರಂಜನ, ೨೦೧೧, **ಚಿರಸ್ಮರಣೆ**(ಹನ್ನೊಂದನೆಯ ಮುದ್ರಣ), ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪು. ೩೩.

೬. ಅಮರೇಶ ನುಗಡೋಣಿ, ೨೦೧೦, **ಗ್ರಾಮಾಯಣ: ಸಾಂಸ್ಕೃತಿಕ ಮುಖಾಮುಖಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೧೧.

೭. ದೇವನೂರ ಮಹಾದೇವ, ೧೯೭೯, ಒಡಲಾಳ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೮. ಶಿವರುದ್ರ ಕಲ್ಲೋಳಿಕರ, ೧೯೯೪, ಹೊಲಗೇರಿಯ ರಾಜಕುಮಾರ, ಅನಾರ್ಯ ಪ್ರಕಾಶನ, ಧಾರವಾಡ, ಪು. ೧೦೩.

೯. ಅಮರೇಶ ನುಗಡೋಣಿ, ೨೦೧೦, ಗ್ರಾಮಾಯಣ: ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೨೪.

೧೦. ಅದೇ, ಪು. ೧೧೫.

೧೧. ಮುಳ್ಳೂರು ನಾಗರಾಜ, ೧೯೯೨, ಮರಣ ಮಂಡಲ ಮಧ್ಯದೊಳಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು. ४೧.

೧೨. ಅರವಿಂದ ಮಾಲಗತ್ತಿ, ೧೯೯೦, ಕಾರ್ಯ, ಶೈಲ ಪ್ರಕಾಶನ, ಮುದ್ದೇಬಿಹಾಳ, ಪು. ೫೦.

೧೩. ಅದೇ, ಪು. ೧೩.

೧೪. ಆರ್ಕೆ ಮಣಿಪಾಲ, ೧೯೮೮, ಸಾಹಿತ್ಯ: ಆಶಯ ಮತ್ತು ವಿನ್ಯಾಸ, ಸಂಕ್ರಮಣ ಪ್ರಕಾಶನ, ಧಾರವಾಡ, ಪು. ४೦.

೧೫. ಶಿವರಾಮ ಕಾರಂತ, ೨೦೦೩, ಚೋಮನ ದುಡಿ(ಮರುಮುದ್ರಣ), ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ಪು. ೨೧.

೧೬. ಶಿವರಾಮ ಕಾರಂತ, ೨೦೧೨, ಕುಡಿಯರ ಕೂಸು(ಎರಡನೆಯ ಮರುಮುದ್ರಣ), ಸಪ್ನಬುಕ್‌ಹೌಸ್, ಬೆಂಗಳೂರು, ಪು. ೨೮೯.

೧೭. ನಿರಂಜನ, ೨೦೧೧, ಚಿರಸ್ಮರಣೆ(ಹನ್ನೊಂದನೆಯ ಮುದ್ರಣ), ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪು. ೫೦.

೧೮. ಅದೇ, ಪು. ೬೩.

೧೯. ಅದೇ, ಪು. ೮೯.

೨೦. ಆರ್ಕೆ ಮಣಿಪಾಲ, ೧೯೮೮, ಸಾಹಿತ್ಯ: ಆಶಯ ಮತ್ತು ವಿನ್ಯಾಸ, ಸಂಕ್ರಮಣ ಪ್ರಕಾಶನ, ಧಾರವಾಡ, ಪು. ೧೯.

***

ಅಧ್ಯಾಯ : ನಾಲ್ಕು

# ದುಡಿಯುವ ವರ್ಗ ಮತ್ತು ಆಳುವ ವರ್ಗದ ಸ್ವರೂಪ

ಅಧ್ಯಾಯ : ಐದು

# ಸಮಾರೋಪ

---

ಈ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನವು ಹೇಗೆ ವಿಶಿಷ್ಟವಾದುದು ಎನ್ನುವುದನ್ನು ವಿವರಿಸಿಕೊಳ್ಳುವುದರೊಂದಿಗೆ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ವಿವರಿಸಲಾಗಿದೆ. ಕಾದಂಬರಿಗಳಲ್ಲಿ ದುಡಿಯುವ ವರ್ಗದ ಸ್ವರೂಪವನ್ನು ಅಸಮಾನತೆ ಮತ್ತು ಶೋಷಣೆಯ ಮೂಲಕ, ಪಾತ್ರಗಳ ವರ್ತನೆ, ಸ್ವಭಾವಗಳು, ಆಕಾಂಕ್ಷೆಯನ್ನು ಪರಿಗಣಿಸಿ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನಗಳಲ್ಲಿ ಒಟ್ಟು ಹದಿನಾರು ಅಂಶಗಳನ್ನು ಪ್ರಸ್ತುತ ಸಂಶೋಧನೆಯ ಮುಖ್ಯ ಫಲಿತಗಳನ್ನಾಗಿ ಗುರುತಿಸಲಾಗಿದೆ.

**ಅಧ್ಯಯನದ ಫಲಿತಗಳು**

**ಒಂದು**

ರಾಜಕೀಯ ಅರ್ಥಶಾಸ್ತ್ರ ಹಾಗೂ ಸಮಾಜಶಾಸ್ತ್ರದ ಬರಹಗಳಿಗಿಂತ ಸಾಹಿತ್ಯವು ಭಿನ್ನವಾಗಿ ಸಮಾಜವನ್ನು ಮತ್ತು ವರ್ಗಸಂಬಂಧವನ್ನು ಗ್ರಹಿಸಿದೆ ಹಾಗೂ ಅಭಿವ್ಯಕ್ತಿಸಿದೆ. ರಾಜಕೀಯ ಅರ್ಥಶಾಸ್ತ್ರ ಹಾಗೂ ಸಮಾಜಶಾಸ್ತ್ರದ ಬರಹಗಳು ವರ್ಗದ ಚಲನಶೀಲ ವಸ್ತುಸ್ಥಿತಿಯನ್ನು ಗ್ರಹಿಸಿವೆ. ಆದರೆ ಸಾಹಿತ್ಯದ ಬರಹಗಳು ವರ್ಗಗಳ ಸೂಕ್ಷ್ಮವಾದ ವಸ್ತುವಿಷಯಗಳನ್ನು ತನ್ನ ಧೋರಣೆಯ ಮೂಲಕ ಗ್ರಹಿಸುತ್ತವೆ. ಹೀಗೆ ಈ ಎರಡು ಜ್ಞಾನಶಿಸ್ತುಗಳು ಇಡಿಯಾಗಿ ಹಾಗೂ ಅತ್ಯಂತ ಸ್ಥೂಲವಾಗಿ ದುಡಿಯುವ ವರ್ಗದ ಪ್ರಜ್ಞೆಯನ್ನು ಗ್ರಹಿಸುತ್ತವೆ.

**ಎರಡು**

ಕಾದಂಬರಿಗಳಲ್ಲಿ ವರ್ಗದ ಪ್ರಶ್ನೆಯನ್ನು ಮಾಲೀಕ-ಆಳು, ಶ್ರೀಮಂತ-ಬಡವ, ಶೋಷಕ-ಶೋಷಿತ, ಬಂಡವಾಳಶಾಹಿ-ಕಾರ್ಮಿಕ, ಭೂಮಾಲೀಕ-ಭೂಹೀನ, ಬ್ರಾಹ್ಮಣ-ಶೂದ್ರ ನೆಲೆಗಳು, ಮೇಲು ಜಾತಿ ಮತ್ತು ಕೆಳಜಾತಿ ಎಂಬ ಜಾತಿ ಅಸಮಾನತೆಯ ನೆಲೆಗಳ ಜೊತೆಗೆ ಅಸ್ಪೃಶ್ಯತೆಯ

ನೆಲೆ, ಅಸಮಾನತೆ ಮತ್ತು ಶೋಷಣೆಯ ನೆಲೆ ಹೀಗೆ ದುಡಿಯುವ ವರ್ಗದ ವಿನ್ಯಾಸಗಳನ್ನು ಗ್ರಹಿಸಿವೆ ಮತ್ತು ಅಭಿವ್ಯಕ್ತಿಸಿವೆ. ಈ ಅಂಶವನ್ನು ಪ್ರಬಂಧದಲ್ಲಿ ಗುರುತಿಸಲಾಗಿದೆ.

**ಮೂರು**

ಕಾದಂಬರಿಗಳಲ್ಲಿ ದುಡಿಯುವ ವರ್ಗ ಮತ್ತು ದುಡಿಸಿಕೊಳ್ಳುವ ವರ್ಗಗಳ ಪರಸ್ಪರ ವೈರುಧ್ಯವನ್ನು ಮತ್ತು ಸಂಘರ್ಷವನ್ನು ಸಾಧ್ಯವಾಗಿಸುವ ಧ್ವನಿಗಳು ಕೇಳಿಸುತ್ತಿಲ್ಲ.

**ನಾಲ್ಕು**

ಕಾದಂಬರಿಗಳಲ್ಲಿ ವರ್ಗ ಅಸಮಾನತೆ ಮತ್ತು ಜಾತಿ ಅಸಮಾನತೆಯ ನೆಲೆಗಳನ್ನು ಗ್ರಹಿಸಿವೆ. ಇದರಲ್ಲಿ ಪ್ರಧಾನವಾಗಿ ನಾಲ್ಕು ವಿನ್ಯಾಸಗಳನ್ನು ಈ ಅಧ್ಯಯನವು ಗುರುತಿಸಿದೆ. ಒಂದು: ಮೇಲುವರ್ಗ ಮತ್ತು ಕೆಳವರ್ಗಗಳ ನಡುವಿನ ಅಸಮಾನತೆಯ ನೆಲೆಗಳು, ಎರಡು: ಮೇಲು ಜಾತಿ ಮತ್ತು ಕೆಳಜಾತಿಗಳ ನಡುವಿನ ಅಸಮಾನತೆಯ ನೆಲೆಗಳು, ಮೂರು: ಭೂ ಒಡೆಯರು ಮತ್ತು ಭೂವಂಚಿತರ ನಡುವಿನ ಅಸಮಾನತೆಯ ನೆಲೆಗಳು, ದುಡಿಯುವ ಮತ್ತು ದುಡಿಸಿಕೊಳ್ಳುವ ವರ್ಗಗಳ ನಡುವಿನ ಅಸಮಾನತೆಯ ನೆಲೆಗಳನ್ನು ಈ ಪ್ರಬಂಧದಲ್ಲಿ ಗುರುತಿಸಲಾಗಿದೆ.

**ಐದು**

ಕಾದಂಬರಿಗಳಲ್ಲಿ ನಿರೂಪಣೆಗೊಂಡಿರುವ ದಲಿತ ಸಮುದಾಯವು ದುಡಿಯುವ ವರ್ಗ, ಉತ್ಪಾದಕ ಶಕ್ತಿಗಳು, ಉತ್ಪಾದಕ ವರ್ಗವಾಗಿದೆ. ಇವರ ಶ್ರಮಶಕ್ತಿ ಇಲ್ಲದೆ ಯಾವ ವಸ್ತುಪದಾರ್ಥಗಳು ಸೃಷ್ಟಿಯಾಗುವುದಿಲ್ಲ. ಆದರೆ ಇವರನ್ನು ಮೇಲುವರ್ಗ/ಜಾತಿಗಳು ಇವರ ಹಕ್ಕುಗಳನ್ನು ಅಕ್ರಮವಾಗಿ ಕಿತ್ತುಕೊಂಡು, ಅವರನ್ನು ಭೂಹೀನರಾಗಿ ಮಾಡಿ, ಅವರನ್ನು ಬಲಾತ್ಕಾರವಾಗಿ, ಅನ್ಯಾಯಕ್ಕೆ ಮತ್ತು ಶೋಷಣೆಗೆ ಒಳಗು ಮಾಡಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಿದೆ.

**ಆರು**

ಕಾದಂಬರಿಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಆಳವಾಗಿ ಬೇರುಬಿಟ್ಟಿರುವ ಆಳುವ ವರ್ಗದ ಶೋಷಣೆಯ ಮೌಲ್ಯಗಳನ್ನು ಅಭಿವ್ಯಕ್ತಿಸಿವೆ ಮತ್ತು ತನ್ನದೇ ಆದ ನೆಲೆಗಟ್ಟಿನಲ್ಲಿ ಆ ವಸ್ತು ವಿಷಯವನ್ನು ತಿರಸ್ಕರಿಸಿದೆ. ಹೀಗೆ ತಿರಸ್ಕರಿಸುತ್ತಲೇ, ಈ ಮೌಲ್ಯಗಳ ಹಿಂದೆ ಇರುವ ರಾಜಕೀಯ ದೃಷ್ಟಿಕೋನವನ್ನು ಅನಾವರಣ ಮಾಡಿವೆ.

**ಏಳು**

ಕಾದಂಬರಿಗಳಲ್ಲಿ ದುಡಿಯುವ ವರ್ಗದ ವರ್ಗ ಶತ್ರುಗಳಾಗಿ ಭೂಮಾಲೀಕರು, ಬಂಡವಾಳಶಾಹಿಗಳು, ಸಾಮ್ರಾಜ್ಯಶಾಹಿಗಳು, ವಿದೇಶಿ ಕಂಪನಿಗಳು, ದೇಶೀಯ ಬಂಡವಾಳಗಾರರು, ತನ್ನ ಶತ್ರುಗಳೆಂದು ಇಲ್ಲಿ ನಿರೂಪಿಸಿವೆ.

**ಎಂಟು**

ವಸಾಹತುಶಾಹಿ ಮತ್ತು ನವವಸಾಹತುಶಾಹಿ ಕಾಲಘಟ್ಟದಲ್ಲಿ ಸೃಷ್ಟಿಯಾದ ಅನೇಕ ಕಾದಂಬರಿಗಳು ಅ ಕಾಲಘಟ್ಟದಲ್ಲಿ ಊಳಿಗಮಾನ್ಯಶಾಹಿ ಮತ್ತು ವಸಾಹತುಶಾಹಿ ವ್ಯವಸ್ಥೆಯ ಪರವಾದ ಸಾಹಿತ್ಯಕ ದೃಷ್ಟಿಕೋನಕ್ಕೆ ಹೆಚ್ಚು ಮಹತ್ವ ಕೊಟ್ಟಿದೆ. ಊಳಿಗಮಾನ್ಯಶಾಹಿ ಶ್ರಮವಿಭಜನೆ, ಜಾತಿಶೋಷಣೆ ಲಿಂಗತಾರತಮ್ಯ, ಅಪಮಾನ, ದೌರ್ಜನ್ಯ ಮತ್ತು ಅಸಮಾನತೆಯನ್ನು ವಸ್ತುವಿಷಯಗಳಲ್ಲಿ ವಿವರಿಸುತ್ತದೆ. ಆದರೆ ಈ ವಿಷಯಗಳನ್ನು ದುಡಿಯುವ ವರ್ಗದ ರಾಜಕೀಯ ದೃಷ್ಟಿಕೋನದಲ್ಲಿ ಗ್ರಹಿಸಲು ಸಾಧ್ಯವಾಗಿಲ್ಲ.

**ಒಂಬತ್ತು**

ದುಡಿಯುವ ವರ್ಗದ ಅಸ್ಮಿತೆಯನ್ನು ಕಾದಂಬರಿಗಳು ಪ್ರಧಾನವಾಗಿ ಮೂರು ನೆಲೆಗಳಲ್ಲಿ ನಿರೂಪಿಸಿವೆ. ಒಂದು: ದುಡಿಯುವ ವರ್ಗದ ಅಸಮಾನತೆ ಮತ್ತು ಶೋಷಣೆಯನ್ನು ಸಮರ್ಥಿಸಿರುವ ನಿರೂಪಣೆ. ಎರಡು: ದುಡಿಯುವ ವರ್ಗದ ಅಸಮಾನತೆ ಮತ್ತು ಶೋಷಣೆಯ ಅಸ್ಮಿತೆಯನ್ನು ನಿರಾಕರಿಸಿರುವ ನಿರೂಪಣೆ. ಮೂರು: ದುಡಿಯುವ ವರ್ಗದ ಅಸಮಾನತೆ ಮತ್ತು ಶೋಷಣೆಯ ಅಸ್ಮಿತೆಯ ಬದಲಾಗದ ಸ್ವರೂಪದ ನಿರೂಪಣೆ. ಇವುಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

**ಹತ್ತು**

ಮಾನವರಿಂದ ಮಾನವರ ಶೋಷಣೆಯನ್ನು ಮುಂದುವರಿಸಿಕೊಂಡು ಹೋಗಲು ಶೋಷಕ ವರ್ಗವು ತನ್ನ ಹಿತಾಸಕ್ತಿಗೆ ಬೇಕಾದ ಹಾಗೂ ತನ್ನ ವರ್ಗದ ಧೋರಣೆಯನ್ನು ಒಪ್ಪುವಂತಹ ಮೌಲ್ಯಗಳೊಂದಿಗೆ ನಂಬಿಕೆಗಳನ್ನು ಹುಟ್ಟುಹಾಕಿ ಅದನ್ನು ದುಡಿಯುವ ವರ್ಗದ ಮೇಲೆ ಹರಿಯಬಿಟ್ಟಿದೆ. ಅ ಮೌಲ್ಯಗಳನ್ನು ಒಳಗೊಂಡ ನಂಬಿಕೆಗಳನ್ನು ಶೋಷಿತ ವರ್ಗವು ಪಾಲಿಸಿಕೊಂಡು ಹೋಗುವಂತಹ ರಾಜಕೀಯ ನಿರೂಪಣೆಯನ್ನು ಕಾದಂಬರಿಗಳು ಅನಾವರಣ ಮಾಡಿವೆ.

**ಹನ್ನೊಂದು**

ಕಾದಂಬರಿಗಳಲ್ಲಿ ಭೂಮಿಯನ್ನು ಗೇಣಿಗಾಗಿ ಕೇಳುವ ದುಡಿಯುವ ವರ್ಗದ ಪಾತ್ರಗಳು, ಮತ್ತೆ ಕೆಲವರಲ್ಲಿ ಶೋಷಣೆ, ದಮನ, ದಬ್ಬಾಳಿಕೆಗೆ ಹೊಂದಿಕೊಂಡು ಹೋಗುವ ಪಾತ್ರಗಳು ಮತ್ತೆ ಕೆಲವು ಕಾದಂಬರಿಗಳಲ್ಲಿ ಈ ದಮನ ದಬ್ಬಾಳಿಕೆಗಳನ್ನು ವಿರೋಧಿಸುವ, ಪ್ರತಿಭಟಿಸುವ ದುಡಿಯುವ ವರ್ಗದ ಪಾತ್ರಗಳು ನಿರೂಪಣೆಯಾಗಿವೆ, ಈ ಪಾತ್ರಗಳ ಬೆಳವಣಿಗೆ ಕೃತಿಕಾರರಿಂದ ಕೃತಿಕಾರರಿಗೆ ಬದಲಾಗುತ್ತಾ ಹೋಗುತ್ತದೆ. ಇವುಗಳನ್ನು ಅಧ್ಯಯನದ ಪ್ರಬಂಧದಲ್ಲಿ ಗುರುತಿಸಲಾಗಿದೆ.

**ಹನ್ನೆರಡು**

ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕಾದಂಬರಿಗಳ ಕಥಾನಿರೂಪಣೆಯಲ್ಲಿ ಮೇಲು ವರ್ಗ/ಜಾತಿಯ ಪಾತ್ರಗಳು ಬೆಳೆಯುತ್ತವೆ; ಆದರೆ ಕೆಳವರ್ಗ/ಕೆಳಜಾತಿಯ ಪಾತ್ರಗಳು ಅಷ್ಟಾಗಿ ಬೆಳೆಯುವುದಿಲ್ಲ. 'ಕಲ್ಲಯ್ಯಗೌಡ' 'ಮುಕುಂದಯ್ಯ' 'ಭರಮೈಹೆಗ್ಗಡೆ' 'ಚಿನ್ನಮ್ಮ', 'ಚಂದ್ರಯ್ಯಗೌಡ', 'ವೆಂಕಟಪ್ಪನಾಯಕ'(ಮಲೆಗಳಲ್ಲಿ ಮದುಮಗಳು), 'ಹೂವಯ್ಯ', 'ಚಂದ್ರಯ್ಯ'(ಕಾನೂರು

ಹೆಗ್ಗಡತಿ) 'ತಿರುಮಲಭಟ್ಟ',(ಕುಡಿಯರ ಕೂಸು), 'ಲಕ್ಷ್ಮೀಬಾಯಿ', 'ಪುತಳಾಬಾಯಿ', 'ಬಾಪೂ ಸಾಹೇಬ', 'ಬಾಳಾಚಾರ್ಯ', 'ಪಡದಯ್ಯ'(ಗ್ರಾಮಾಯಣ), 'ಆನಂದ' 'ವಾಸು'(ಹೇಮಾವತಿ), 'ಜಗನ್ನಾಥ',(ಭಾರತೀಪುರ), 'ನಾರಣಪ್ಪ', 'ಪ್ರಾಣೇಶಾಚಾರ್ಯ', 'ಶ್ರೀಪತಿ'(ಸಂಸ್ಕಾರ) – ಈ ಪಾತ್ರಗಳು ಮೇಲುಜಾತಿಯ ಪಾತ್ರಗಳಾಗಿದ್ದು, ಈ ಪಾತ್ರಗಳು ಕಾದಂಬರಿಯ ಭಿತ್ತಿಯಲ್ಲಿ ಬೇರೆಬೇರೆ ಬಗೆಗಳಲ್ಲಿ ಬೆಳೆಯುತ್ತವೆ ಮತ್ತು ಆ ಮೂಲಕ ಕಾದಂಬರಿಗಳ ಬೆಳವಣಿಗೆಗಳ ತಿರುವಿಗೆ ಕಾರಣವಾಗುತ್ತವೆ. ಈ ಅಂಶವನ್ನು ಇದರಲ್ಲಿ ಗುರುತಿಸಲಾಗಿದೆ.

**ಹದಿಮೂರು**

ಕಾದಂಬರಿಗಳಲ್ಲಿ ಹೆಣ್ಣಿನ ಪಾತ್ರಗಳನ್ನು ಗಂಡಿನ ಅಧೀನವಾಗಿರುವ, ಅವನ ಅಶ್ರಯದಲ್ಲಿ ಬದುಕುವ, ಅವಳು ಮೇಲು ವರ್ಗದ ಪುರುಷರ ಲೈಂಗಿಕ ಶೋಷಣೆಗೆ ಒಳಗಾಗುವ ಸ್ಥಿತಿಯನ್ನು ಚಿತ್ರಿಸಲಾಗಿದೆ. ಆದರೆ ಅವಳ ಹಕ್ಕನ್ನು, ಅವಳ ಸ್ವಾತಂತ್ರ್ಯವನ್ನು ಕುರಿತು ಕಾದಂಬರಿಗಳ ನಿರೂಪಣೆಯಲ್ಲಿ ಮುಚ್ಚಿಡಲಾಗಿದೆ.

**ಹದಿನಾಲ್ಕು**

ಸಮಾಜದ ಸುಖ–ಸಂತೋಷಗಳಿಗಿಂತಲೂ ಹೆಚ್ಚಾಗಿ ನೋವು, ಕಷ್ಟ ಹಾಗೂ ಸಂಕಟಗಳನ್ನು ಕಾದಂಬರಿಗಳು ವಸ್ತುವಾಗಿ ಅಭಿವ್ಯಕ್ತಿಸುತ್ತಿವೆ.

**ಹದಿನೈದು**

ಕಾದಂಬರಿಗಳಲ್ಲಿ ಮಾಲೀಕ ವರ್ಗಕ್ಕೂ ಮತ್ತು ದುಡಿಯುವ ವರ್ಗಕ್ಕೂ ಶೋಷಕ ಮತ್ತು ಶೋಷಿತ ಸಂಬಂಧವಿದೆ. ಮಾಲೀಕ ವರ್ಗದ ಅಶ್ರಯದಲ್ಲಿ ದುಡಿಯುವ ವರ್ಗ ನಿಂತಿಲ್ಲ. ದುಡಿಯುವ ವರ್ಗವನ್ನು ನಿರಂತರವಾಗಿ ದುಡಿಸಿಕೊಳ್ಳುತ್ತ, ಅವರನ್ನು ಶೋಷಣೆ ಮಾಡುತ್ತ ಮಾಲೀಕ ವರ್ಗ ನಿಂತಿದೆ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

**ಹದಿನಾರು**

ಕಾದಂಬರಿಗಳಲ್ಲಿ ಲೇಖಕರ, ಲೇಖಕಿಯರ ಅನುಭವಗಳು ಮತ್ತು ಗ್ರಹಿಕೆಗಳು ಸಮಾಜದ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಗ್ರಹಿಸಿ, ಅಭಿವ್ಯಕ್ತಿಸಿರುವುದನ್ನು ಗಮನಿಸಲಾಗಿದೆ. ಆದರೆ ಈ ಗ್ರಹಿಕೆಗಳು ವರ್ಗಪ್ರಜ್ಞೆಯನ್ನು ಕಟ್ಟಿಕೊಡುವಲ್ಲಿ ಅನೇಕ ಕಾದಂಬರಿಗಳು ವಿಫಲವಾಗಿವೆ. ದುಡಿಯುವ ವರ್ಗದ ಪಾತ್ರಗಳು ವರ್ಗ ಶ್ರೇಣೀಕರಣ, ವರ್ಗ ಅಸಮಾನತೆ, ವರ್ಗ ಸಮಸ್ಯೆಗಳ ಪ್ರಶ್ನೆಯ ಬಗೆಗೆ ಪ್ರತಿಕ್ರಿಯಿಸದೆ ಮೌನ ವಹಿಸುತ್ತವೆ. ಜೊತೆಗೆ ಮೇಲ್ವರ್ಗದ ಶೋಷಣೆ, ದೌರ್ಜನ್ಯ, ಅಪಮಾನ, ಅನ್ಯಾಯವನ್ನು ಒಪ್ಪಿಕೊಂಡು ಹೋಗುವ ಪಾತ್ರಗಳು ಕಾಣಿಸುತ್ತದೆ. ಇದರಿಂದ ಕಾದಂಬರಿಗಳ ನಿರೂಪಕ ಅಥವಾ ನಿರೂಪಕಿ ದುಡಿಯುವ ವರ್ಗದ ಪ್ರಜ್ಞೆಯನ್ನು ಆರೋಪಿಸಿರುವುದನ್ನು ಕಾದಂಬರಿಯ ವರ್ತನೆ, ಸ್ವಭಾವ, ಆಕಾಂಕ್ಷೆಗಳನ್ನು ಪರಿಗಣಿಸಿ ಹೇಳಬಹುದು. ಈ ಅಂಶಗಳನ್ನು ಇದರಲ್ಲಿ ಗುರುತಿಸಲಾಗಿದೆ.

***

# ಗ್ರಂಥಋಣ


**೧. ಮೂಲ ಆಕರ ಸಾಹಿತ್ಯ**

೧. ಅನಂತಮೂರ್ತಿ, ೧೯೯೬, **ಭಾರತೀಪುರ**, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೨. ಅನಂತಮೂರ್ತಿ, ೨೦೦೮, **ಸಂಸ್ಕಾರ**, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೩. ಅರವಿಂದ ಮಾಲಗತ್ತಿ, ೧೯೯೦, **ಕಾರ್ಯ**, ಶೈಲ ಪ್ರಕಾಶನ, ನೇತಾಜಿಗಲ್ಲಿ, ಮುದ್ದೇಬಿಹಾಳ.

೪. ಕುವೆಂಪು, ೨೦೦೦, **ಕಾನೂರು ಹೆಗ್ಗಡಿತಿ**, ಉದಯರವಿ ಪ್ರಕಾಶನ, ಮೈಸೂರು.

೫. ಕುವೆಂಪು, ೧೯೯೭, **ಮಲೆಗಳಲ್ಲಿ ಮದುಮಗಳು**, ಉದಯರವಿ ಪ್ರಕಾಶನ, ಮೈಸೂರು.

೬. ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೯೩, **ಹೇಮಾವತಿ**, ಶಾರದಾ ಮಂದಿರ, ಮೈಸೂರು

೭. ಚೆನ್ನಣ್ಣ ವಾಲೀಕಾರ, ೨೦೦೪, **ಒಂದು ಹೆಣ್ಣಿನ ಒಳ ಜಗತ್ತು**, ಸಪ್ನ ಬುಕ್ ಹೌಸ್, ಬೆಂಗಳೂರು.

೮. ದೇವನೂರ ಮಹಾದೇವ, ೧೯೭೯, **ಒಡಲಾಳ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೯. ದೇವನೂರ ಮಹಾದೇವ, ೧೯೮೮, **ಕುಸುಮಬಾಲೆ**, ಸಂಗಾತಿ ಸಹಕಾರಿ ಪ್ರಕಾಶನ, ಬೆಂಗಳೂರು.

೧೦. ನಿರಂಜನ, ೧೯೯೩, **ಚಿರಸ್ಮರಣೆ**, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು.

೧೧. ಪೂರ್ಣಚಂದ್ರ ತೇಜಸ್ವಿ, ೨೦೦೬, **ಕರ್ವಾಲೋ**, ಪುಸ್ತಕ ಪ್ರಕಾಶನ, ಮೈಸೂರು.

೧೨. ಬರಗೂರು ರಾಮಚಂದ್ರಪ್ಪ, ೧೯೯೦, **ಸೂರ್ಯ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೧೩. ಭಂಡಾರಿ ಆರ್.ವಿ., ೧೯೮೮, **ಬೆಂಕಿಯ ಮಧ್ಯೆ,** ಬಂಡಾಯ ಪ್ರಕಾಶನ, ಅರೆ ಅಂಗಡಿ, ಹೊನ್ನಾವರ.

೧೪. ಮುಳ್ಳೂರು ನಾಗರಾಜ, ೧೯೪೬, **ಮರಣ ಮಂಡಲ ಮಧ್ಯದೊಳಗೆ,** ಹೊಸದಿಕ್ಕು ಪ್ರಕಾಶನ, ಬೆಂಗಳೂರು

೧೫. ರಾವ್‌ಬಹದ್ದೂರ್, ೧೯೨೦, **ಗ್ರಾಮಾಯಣ,** ಉಷಾ ಸಾಹಿತ್ಯ ಮಾಲೆ, ಮೈಸೂರು.

೧೬. ಲಲಿತಾನಾಯಕ್ ಬಿ.ಟಿ., ೧೯೮೬, **ಗತಿ,** ಪತ್ರಿಕ ಪ್ರಕಾಶನ, ಬೆಂಗಳೂರು.

೧೭. ವೀರಭದ್ರಪ್ಪ ಕುಂ., ೧೯೯೩, **ಕೊಟ್ರ ಹೈಸ್ಕೂಲಿಗೆ ಸೇರಿದ್ದು,** ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.

೧೮. ವ್ಯಾಸರಾಯ ಬಲ್ಲಾಳ, ೧೯೯೭, (ನಾಲ್ಕನೆಯ ಮುದ್ರಣ) **ಬಂಡಾಯ,** ಗೀತಾ ಬುಕ್ ಹೌಸ್ ಮೈಸೂರು.

೧೯. ಶಿವರಾಮ ಕಾರಂತ, ೨೦೦೩, (ಮೂರನೆಯ ಮುದ್ರಣ) **ಚೋಮನ ದುಡಿ,** ಎಸ್.ಬಿ.ಎಸ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೨೦. ಶಿವರಾಮ ಕಾರಂತ, ೧೯೪೮, (ದ್ವಿಮು.) **ಕುಡಿಯರ ಕೂಸು,** ಹರ್ಷ ಮುದ್ರಣ ಪ್ರಕಟಣಾಲಯ, ಪುತ್ತೂರು

೨೧. ಶಿವರುದ್ರ ಕಲ್ಲೋಳಿಕರ, ೧೯೯೪, **ಹೊಲಗೇರಿಯ ರಾಜಕುಮಾರ,** ಅನಾರ್ಯ ಪ್ರಕಾಶನ, ಧಾರವಾಡ.

***

## ೨. ಪರಾಮರ್ಶನ ಗ್ರಂಥಗಳು

೧. ಅಗ್ರಹಾರ ಕೃಷ್ಣಮೂರ್ತಿ(ಸಂ), ೨೦೦೨, ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨. ಅನಂತಮೂರ್ತಿ ಯು.ಆರ್., ಪ್ರಜ್ಞೆ ಮತ್ತು ಪರಿಸರ, ಅಕ್ಷರ ಪ್ರಕಾಶ, ಸಾಗರ.

೩. ಅನುಪಮಾ ನಿರಂಜನ, ೨೦೦೮, ಸಾಹಿತ್ಯ ಮತ್ತು ಪ್ರಗತಿ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು

೪. ಆಮೂರ ಜಿ.ಎಸ್., ೧೯೯೪, ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಶ್ರೀ ಹರಿಪ್ರಕಾಶನ, ಧಾರವಾಡ.

೫. ಅರವಿಂದ ಮಾಲಗತ್ತಿ, ೨೦೦೩, ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬. ಅರವಿಂದ ಮಾಲಗತ್ತಿ(ಸಂ), ಕನ್ನಡ ವಿಮರ್ಶೆಯ ಮಾರ್ಗ, ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು.

೭. ಅರವಿಂದ ಮಾಲಗತ್ತಿ, ೨೦೦೩, ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮. ಅಶೋಕ ಟಿ.ಪಿ.(ಸಂ), ೧೯೯೨, ಕೆ.ವಿ.ಸುಬ್ಬಣ್ಣ ಅವರ ಆಯ್ದ ಬರಹಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಅವಧಾನಿ ಜಿ.ಎಸ್., ೧೯೯೨, ಸಾಹಿತ್ಯ ವಿಮರ್ಶೆ–೧೯೯೧, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೦. ಆರ್ಕೆ ಮಣಿಪಾಲ, ೧೯೯೫ ಸಾಹಿತ್ಯ ಪ್ರಕ್ರಿಯೆ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

೧೧. ಆರ್ಕೆ ಮಣಿಪಾಲ, ೨೦೦೬, ವಿಮರ್ಶೆಯ ಸವಾಲು, ಸಂವಾದ ಪ್ರಕಾಶನ, ಮಣಿಪಾಲ.

೧೨. ಆಚಾರ್ಯ ನರೇಂದ್ರದೇವ, ೧೯೮೨, **ಜನತಾಂತ್ರಿಕ ಸಮಾಜವಾದ**, ಜನ ಪ್ರಕಾಶನ, ಬೆಂಗಳೂರು.

೧೩. ಜವರಯ್ಯ ಮ.ನ.(ಅನು), ೧೯೮೯, **ಡಾ. ಅಂಬೇಡ್ಕರ್ ಸಮಗ್ರ ಚಿಂತನೆ**, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು.

೧೪. ಆನಂದಮೂರ್ತಿ ಜಿ.ವಿ.(ಸಂ), ೧೯೯೭, **ಕಾಳೇಗೌಡ ನಾಗವಾರ, ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಕರೀಗೌಡ ಬೀಚನಹಳ್ಳಿ, ೧೯೯೧, **ವ್ಯಷ್ಟಿ ಮತ್ತು ಸಮಷ್ಟಿ**, ಅಜಂತ ಪ್ರಕಾಶನ, ಬೆಂಗಳೂರು,

೧೬. ಕಕ್ಕಿಲಾಯ, ಬಿ.ವಿ., ೧೯೮೬, **ಮಾರ್ಕ್ಸ್‌ವಾದಿ ವಿಚಾರಧಾರೆ**, ೧ ಮತ್ತು ೨, ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು,

೧೭. ಕೃಷ್ಣಮೂರ್ತಿ ಎಂ.ಜಿ., ೧೯೯೪, **ಕೃತಿ ಸಂಸ್ಕೃತಿ**, ಋಜುವಾತು ಪ್ರಕಾಶನ, ಮೈಸೂರು.

೧೮. ಕಾರ್ಲ್ ಮಾರ್ಕ್ಸ್(ಮೂಲ), ಶಾನಭಾಗ ಸಿ.ಆರ್(ಅನು).,೨೦೧೩, **'ಶೋಷಣೆಯ ಮೂಲ ಮೌಲ್ಯ, ಬೆಲೆ ಮತ್ತು ಲಾಭ'(ಮಾರ್ಕ್ಸ್‌ವಾದದ ಮೂಲ ಕೃತಿಗಳ ಮರು–ಓದು ಮಾಲಿಕೆ–೬)** ಕ್ರಿಯಾ ಪ್ರಕಾಶನ, ಬೆಂಗಳೂರು.

೧೯. ಕೀರ್ತಿನಾಥ ಕುರ್ತಕೋಟಿ, ೧೯೯೬, **ವಿಮರ್ಶೆಯ ವಿನಯ**, ಕಾದಂಬರಿ, ಮನೋಹರ ಗ್ರಂಥಮಾಲೆ, ಧಾರವಾಡ.

೨೦. ಕೇಶವಶರ್ಮ ಕೆ., ೨೦೦೮, **'ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ಕೊಸಾಂಬಿ ಡಿ.ಡಿ.(ಮೂಲ), ವೇಣುಗೋಪಾಲ್ ಟಿ.ಎಸ್. ಮತ್ತು ಶೈಲಜಾ(ಅನು), ೨೦೧೧, **'ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ ಚಾರಿತ್ರಿಕ ರೂಪರೇಷೆ'**, ಚಿಂತನ ಪ್ರಕಾಶನ, ಬೆಂಗಳೂರು.

೨೨. ಗಿರಡ್ಡಿ ಗೋವಿಂದರಾಜ, ೨೦೦೧, **ಸಮಗ್ರ ವಿಮರ್ಶೆ**, ಸಂಪಾದನೆ ೨, ಸಪ್ನ ಬುಕ್ ಹೌಸ್, ಬೆಂಗಳೂರು.

೨೩. ಗೋಪಾಲಕೃಷ್ಣರಾವ್ ಕೆ.ಎಲ್.(ಅನು), (೨೦೧೪), **ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯಗಳ ಉಗಮ**, ಪ್ರಗತಿ ಪ್ರಕಾಶನ, ಮೈಸೂರು.

೨೪. ಗೋಪಾಲಕೃಷ್ಣರಾವ್ ಕೆ.ಎಲ್.(ಅನು), ೧೯೭೮, **ಲೆನಿನ್ ರಾಜ್ಯ ಹಾಗೂ ಕ್ರಾಂತಿ**, ಪ್ರಗತಿ ಪ್ರಕಾಶನ, ಮಾಸ್ಕೋ,

೨೫. ಗೋಪಾಲಕೃಷ್ಣರಾವ್ ಕೆ.ಎಲ್.(ಅನು), **ಸಮಾಜವಾದ**, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು,

೨೬. ಚಂದ್ರಿಕಾ ಪಿ.(ಸಂ), ೧೯೯೯, **ಯಾರ ಜಪ್ತಿಗೂ ಸಿಗದ ನವಿಲುಗಳು(ದೇವನೂರ ಮಹಾದೇವರ ಸಾಹಿತ್ಯ ಕುರಿತು)** ಅಭಿನವ ಮಾಲಿಕೆ–೮, ಅಭಿನವ ಪ್ರಕಾಶನ, ಬೆಂಗಳೂರು.

೨೭. ಚಿನ್ನಸ್ವಾಮಿ ಸೋಸಲೆ ಎನ್., ೨೦೦೮, **ಭಾರತೀಯ ಸಮಾಜ ಮತ್ತು ದಲಿತರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ಜವರಯ್ಯ ಮ.ನ., ೧೯೯೪, **'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ',** ಪ್ರಗತಿ ಪ್ರಕಾಶನ ಮೈಸೂರು.

೨೯. ತಾಳ್ತಜೆ ವಸಂತಕುಮಾರ್, ೧೯೮೯, **ಆಯ್ದ ಲೇಖನಗಳು,** ಸಾಹಿತ್ಯ ಪ್ರಕಾಶನ, ಮುಂಬಯಿ.

೩೦. ತಿರುಮಲೇಶ .ಕೆ.ವಿ. ೨೦೦೭, **ಉಲ್ಲೇಖ,** ಅಭಿನವ ಪ್ರಕಾಶನ, ಬೆಂಗಳೂರು.

೩೧. ತಿಪ್ಪೇಸ್ವಾಮಿ ಆರ್.ಜಿ., ೨೦೦೪, **ಕೊಟ್ಟ ಕುದುರೆ,** ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೩೨. ತಿಪ್ಪೇಸ್ವಾಮಿ ಜಿ.ಆರ್., **ಕನ್ನಡ ದಲಿತ ಸಾಹಿತ್ಯದ ನೆಲೆ,** ವಿಚಾರವಾದಿ ಪ್ರಕಾಶನ, ಮೈಸೂರು.

೩೩. ದೇಜಗೌ(ಸಂ), ೧೯೭೦, **ಸಾಹಿತ್ಯ ಆರಾಧನೆ,** ಮೋಹನ ಪ್ರಕಾಶನ, ಮೈಸೂರು.

೩೪. ನಾಗರಾಜ್ ಡಿ.ಆರ್., ೧೯೮೩, **ಅಮೃತ ಮತ್ತು ಗರುಡ,** ಅಕ್ಷರ ಪ್ರಕಾಶನ, ಸಾಗರ.

೩೫. ನಾಗರಾಜ್ ಡಿ.ಆರ್, ೧೯೯೬, **ಸಾಹಿತ್ಯ ಕಥನ(ವಿಮರ್ಶಾ ಲೇಖನಗಳ ಸಂಕಲನ),** ಅಕ್ಷರ ಪ್ರಕಾಶನ, ಸಾಗರ.

೩೬. ನಾಗಭೂಷಣ ಸ್ವಾಮಿ ಓ.ಎಲ್., ೧೯೮೩, **ವಿಮರ್ಶೆಯ ಪರಿಭಾಷೆ,** ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ.

೩೭ ನಾಗರಾಜ ಕಿ.ರಂ.(ಸಂ).,೧೯೮೨, **'ಜನತಾಂತ್ರಿಕ ಸಮಾಜವಾದ',** ಆಚಾರ್ಯ ನರೇಂದ್ರದೇವ ಜನ ಪ್ರಕಾಶನ.

೩೮. ನಾರಾಯಣ ಕೆ.ವಿ., ೨೦೧೦, **ತೊಂಡು ಮೇವು(ಕಂತೆ ಒಂಬತ್ತು),** ಪ್ರಗತಿ ಪ್ರಕಾಶನ, ಬೆಂಗಳೂರು.

೩೯. ನಾಗಭೂಷಣ ಡಿ.ಎಸ್., ೧೯೯೦, ಗಮನ, ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ ಚಿತ್ರದುರ್ಗ.

೪೦. ನಾಗೇಶ್ ಎಚ್.ವಿ., ೧೯೯೯, **ಸಾಮಾಜಿಕ ಚಳುವಳಿಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೧. ನಾಗರಾಜ್ ಡಿ.ಆರ್., ೧೯೯೬, **ಸಾಹಿತ್ಯ ಕಥನ,** ಅಕ್ಷರ ಪ್ರಕಾಶನ, ಸಾಗರ,

೪೨. ನಾಗಭೂಷಣ ಡಿ.ಎಸ್., ೨೦೦೭, **ಕುವೆಂಪು ಸಾಹಿತ್ಯ ದರ್ಶನ,** ಪ್ರಗತಿ ಗ್ರಾಫಿಕ್ಸ್ ಬೆಂಗಳೂರು.

೪೩. ಪ್ರಶಾಂತ ನಾಯಕ್ ಜಿ., ೨೦೦೯, **ಸಾಹಿತ್ಯ ವಿಮರ್ಶೆ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೪. ಪ್ರಭಾಕರ್ ಎ.ಎಸ್., ೨೦೦೦, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೫. ಪುಟ್ಟಯ್ಯ ಬಿ.ಎಂ, ೧೯೯೯, ಕಾಲ್ನಡಿಗೆ. ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

೪೬. ಪುಟ್ಟಯ್ಯ ಬಿ.ಎಂ.(ಸಂ), ೨೦೦೮, ಧರ್ಮಾಮೃತ: ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೭. ಪುಟ್ಟಯ್ಯ ಬಿ.ಎಂ., ೨೦೦೮, ಮುಖಾಮುಖಿ: ಸಮಾಜ ಸಂಸ್ಕೃತಿ ಚಳವಳಿ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ.

೪೮. ಪುಟ್ಟಯ್ಯ ಬಿ.ಎಂ., ೨೦೦೮, ಕದಡು, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ.

೪೯. ಪುಟ್ಟಯ್ಯ ಬಿ.ಎಂ., ೨೦೧೦, ದಲಿತರು ಮತ್ತು ಭೂಮಿಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೦. ಪುಟ್ಟಯ್ಯ ಬಿ.ಎಂ., ೨೦೧೦, ಸಂಶೋಧನೆ: ತಾತ್ವಿಕ ಆಯಾಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,

೫೧. ಪುಟ್ಟಯ್ಯ ಬಿ.ಎಂ., ೨೦೧೫, ಶ್ರಮ ಭಾಷೆ : ಸಾಹಿತ್ಯ, ಸಂಸ್ಕೃತಿ, ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,

೫೨. ಬರಗೂರು ರಾಮಚಂದ್ರಪ್ಪ, ೧೯೮೧, ಸಾಹಿತ್ಯ ಮತ್ತು ರಾಜಕಾರಣ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೫೩. ಬರಗೂರು ರಾಮಚಂದ್ರಪ್ಪ (ಸಂ), ೧೯೯೨, ನಿರಂಜನರ ಸಾಹಿತ್ಯ ಮತ್ತು ಸಮಕಾಲೀನತೆ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೪. ಬಸವರಾಜ ಸಬರದ(ಸಂ), ೧೯೯೫ ಬಂಡಾಯ ಸಮೀಕ್ಷೆ, ಎನ್.ಆರ್.ಎಂ.ಎಂ.ಎಚ್. ಪ್ರಕಾಶನ, ಕೋಟೇಶ್ವರ.

೫೫. ಬಸವರಾಜ ಒಕ್ಕುಂದ, ೨೦೦೮, ಬಹುಮುಖಿ, ನೀಲಪರ್ವತ ಪ್ರಕಾಶನ, ಧಾರವಾಡ

೫೬. ಬಸವರಾಜ ಸಬರದ(ಸಂ)., ೧೯೯೫, ಬಂಡಾಯ ಸಾಹಿತ್ಯ: ತಾತ್ವಿಕ ನೆಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫೭. ಬಾಪು ಹೆದ್ದೂರಶೆಟ್ಟಿ, ೧೯೮೯, ಸಮಾಜವಾದ, ಜನತಂತ್ರ ಮತ್ತು ಕಮ್ಯೂನಿಸಂ, ಅಕ್ಷರ ಪ್ರಕಾಶನ, ಹೆಗ್ಗೋಡು.

೫೮. ಬಾಳಾಸಾಹೇಬ ಲೋಕಾಪುರ, ೨೦೦೬, ಸಮುಚಿತ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೫೯. ಬುದ್ಧಣ್ಣ ಹಿಂಗಮಿರೆ, ೧೯೮೮, ಸಾಹಿತ್ಯ ವಿಮರ್ಶೆ-೧೯೮೭, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೦. ಭೂಮಿಗೌಡ, ೨೦೦೪, **ಕನ್ನಡ ಕಾದಂಬರಿಗಳಲ್ಲಿ ದಲಿತ ಜಗತ್ತು**, ಚೇತನ ಬುಕ್ ಹೌಸ್, ಮೈಸೂರು.

೬೧. ಬೋರಲಿಂಗಯ್ಯ ಹಿ.ಚಿ., ೧೯೯೫, **ಕಾಡು, ಕಾಂಕ್ರೀಟ್ ಮತ್ತು ಜಾನಪದ**, ಅಕ್ಷರ ಪ್ರಕಾಶನ, ಸಾಗರ.

೬೨. ಭೈರಪ್ಪ ಎಸ್.ಎಲ್., **ಕಥೆ ಮತ್ತು ಕಥಾವಸ್ತು**, ಸಾಹಿತ್ಯ ಭಂಡಾರ, ಬೆಂಗಳೂರು.

೬೩. ಮಲ್ಲಿಕಾರ್ಜುನ ಕೂಡ್ಲಿಗೆರೆ, ೨೦೦೯ **ಭೂ ಹೋರಾಟದ ಕಥನ**, ನಿಧಿ ಪ್ರಕಾಶನ.

೬೪. ಮುರಳೀಧರ ಉಪಾಧ್ಯ ಗಿರಿಯಡಕ, ೧೯೯೨, **ಸಾಹಿತ್ಯ ವಿಮರ್ಶೆ-೧೯೯೦**, ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು.

೬೫. ಮೋಹನ್‌ಕೃಷ್ಣ ರೈ, ೨೦೦೪, **ಪ್ರಭುತ್ವ ಮತ್ತು ಜನತೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೬. ರಹಮತ್ ತರೀಕೆರೆ, ೨೦೧೨, **ಕನ್ನಡ ಸಾಹಿತ್ಯ ವಾಗ್ವಾದಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೭. ರಾಜೇಂದ್ರ ಚೆನ್ನಿ, ೨೦೦೪, **ನಡುಹಗಲಿನಲ್ಲಿ ಕಂದೀಲುಗಳು**, ಲೋಹಿಯಾ ಪ್ರಕಾಶನ, ಬಳ್ಳಾರಿ.

೬೮. ರಾಘವೇಂದ್ರರಾವ್ ಎಚ್.ಎಸ್., ೧೯೮೯, **ನಿಲುವು**, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.

೬೯. ರೇಣುಕಾರಾಧ್ಯ ಎಸ್.ಎಸ್., ೨೦೦೩, **ಆಲೋಚನೆ**, ಸಿಂಚನ ಗ್ರಂಥಮಾಲೆ, ಬೆಂಗಳೂರು.

೭೦. ಲಂಕೇಶ್ ಪಿ, ೨೦೧೦, (ಎ.ಮು.), **ಸಾಹಿತಿ ಸಾಹಿತ್ಯ ವಿಮರ್ಶೆ**, ಲಂಕೇಶ್ ಪ್ರಕಾಶನ, ಬೆಂಗಳೂರು.

೭೧. ಲಕ್ಕಪ್ಪಗೌಡ ಎಚ್.ಜೆ. ೨೦೦೩, **ಸಾಹಿತ್ಯ: ಬಹುಮುಖಿ ಚಿಂತನೆ**, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೭೨. ವಸಂತಕುಮಾರ ತಾಳ್ತಜೆ, ೧೯೯೩, **ಜನಪರ ನಿಲುವು**, ಕನ್ನಡ ವಿಭಾಗ, ಮುಂಬೈ ವಿಶ್ವವಿದ್ಯಾಲಯ, ಮುಂಬಯಿ.

೭೩. ವಿಜಯಾ ಸುಬ್ಬರಾಜ್, ೨೦೦೫, **ಸಮಾಲೋಚನೆ**, ಶಕ್ತಿ ಪ್ರಿಂಟರ್ಸ್ ಆ್ಯಂಡ್ ಪಬ್ಲಿಷರ್ಸ್, ಬೆಂಗಳೂರು.

೭೪. ವಿಜಯಶ್ರೀ ಸಬರದ(ಸಂ), ೨೦೦೫, **ವಿಮರ್ಶಾ ಲೇಖನಗಳು**, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೭೫. ವಿಜಯಶಂಕರ ಎಸ್.ಆರ್., ೨೦೦೪, **ಒಳದನಿ**, ಅಕ್ಷರ ಪ್ರಕಾಶನ, ಹೆಗ್ಗೋಡು.

೭೬. ಶಶಿಕಲಾ ಎಚ್. ೨೦೦೫, **ಏಕ–ಅನೇಕ,** ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು.

೭೭. ಶಾಂತಿನಾಥ ದೇಸಾಯಿ, ೨೦೦೪, **ನವ್ಯ ಸಾಹಿತ್ಯ ದರ್ಶನ,** ಸಪ್ನ ಬುಕ್‌ಹೌಸ್, ಬೆಂಗಳೂರು.

೭೮. ಶಂಕರ್ ಡಿ.ಎ., ೧೯೮೪, **ವಸ್ತು ವಿನ್ಯಾಸ,** ಅಕ್ಷರ ಪ್ರಕಾಶನ, ಹೆಗ್ಗೋಡು.

೭೯. ಶಿವರಾಮಯ್ಯ, ೧೯೯೩, **ಸಾಹಿತ್ಯ ಪರಿಸರ,** ವೈಚಾರಿಕ ಪುಸ್ತಕ ಮಾಲೆ, ಶಿವನಿ, ಚಿಕ್ಕಮಗಳೂರು.

೮೦. ಶ್ರೀಧರ್ ವಿ.ಎಸ್. (ಸಂ), ೨೦೦೮, **'ಸಾಹಿತಿ ಸಾಹಿತ್ಯ ವಿಮರ್ಶೆ–ಪಿ.ಲಂಕೇಶ್',** ಲಂಕೇಶ್ ಪ್ರಕಾಶನ, ಬೆಂಗಳೂರು.

೮೧. ಸುಮಿತ್ರಾಬಾಯಿ ಬಿ.ಎಸ್., ೧೯೯೫, **ವಿಜಯ,** ಇಳಾ ಪ್ರಕಾಶನ, ಬೆಂಗಳೂರು.

೮೧. ಸುಮತೀಂದ್ರ ನಾಡಿಗ, ೧೯೯೭, **ವಿಮರ್ಶೆಯ ದಾರಿಯಲ್ಲಿ,** ಕರ್ನಾಟಕ ಬುಕ್ ಏಜೆನ್ಸಿ ಬೆಂಗಳೂರು.

೮೨. ಸುಮಿತ್ರಾ ಎಲ್.ಸಿ. ೨೦೦೪, **ನಿರುಕ್ತ,** ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

೮೩. ಸಿದ್ಧಲಿಂಗಯ್ಯ, ೨೦೦೯, **ಉರಿಕಂಡಾಯ,** ಅಂಕಿತ ಪುಸ್ತಕ, ಬೆಂಗಳೂರು.

೮೪. ಸಬಿತಾ ಬನ್ನಾಡಿ, ೨೦೦೮, **ಸಾಹಿತ್ಯ ನಿರೂಪಣೆಗಳು,** ಕಿಟಕಿ ಪ್ರಕಾಶನ ಮೈಸೂರು.

೮೫. ಸೀತಾರಾಮಯ್ಯ ವಿ., ೨೦೦೩, **ಸಾಹಿತ್ಯಾಲೋಕನ ವಿಮರ್ಶೆ** (ಸಂ.೪) ವಿ.ಸೀ. ಸಂಪದ ಬೆಂಗಳೂರು.

೮೬. ಸುಂದರಯ್ಯ ಪಿ.(ಮೂಲ), ಸುಜ್ಞಾನಮೂರ್ತಿ ಬಿ.(ಅನು), ೨೦೧೩, **ತೆಲಂಗಾಣ ಹೋರಾಟ,** ಪಲ್ಲವ ಪ್ರಕಾಶನ, ಬಳ್ಳಾರಿ.

೮೭. ಹಿರೇಮಠ ಎಸ್.ಎಸ್., ೨೦೦೫, **ಸಮಾಜ ಸಂಸ್ಕೃತಿ ಸಂಘರ್ಷ,** ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೮೮. ಹೆಗಡೆ ಎಂ.ಜಿ.(ಸಂ), ೧೯೯೬, **ಸಾಹಿತ್ಯ ವಿಮರ್ಶೆ–೧೯೯೪,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

***